## ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ದ್ವಿತೀಯಖಂಡ—ಎರಡನೆಯ ಭಾಗ

(ಆಯುರ್ವೇದ ಸಂಪುಟ)

ಅನುವಾದಕ :

**ಚಾಮರಾಜನಗರದ ವೆಂಕಟರಮಣಶಾಸ್ತ್ರೀ**

ಮೈಸೂರು

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಪ್ರಸ್ತಾವನೆ

ಇದುವರಿವಿಗೆ ಈ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಏಳು ಸಂಪುಟಗಳು ಪ್ರಕಟವಾದಂತಾಯಿತು. ಪ್ರಥಮ ಸಂಪುಟದಲ್ಲಿ ಹೇಳಿರುವಂತೆ ಈ ಮಹಾ ಪುರಾಣದಲ್ಲಿ ಸಕಲ ವೇದಶಾಸ್ತ್ರರಹಸ್ಯಗಳೂ ನಿರೂಪಿಸಲ್ಪಟ್ಟಿವೆ. ಈಗ ಪ್ರಕಟ ವಾಗಿರುವ ಈ ಸಂಪುಟದಲ್ಲಿ ಆಯುರ್ವೇದಶಾಸ್ತ್ರದಲ್ಲಿರುವ ಮುಖ್ಯ ಮುಖ್ಯ ವಿಷಯಗಳೂ ದಂಡನೀತಿಶಾಸ್ತ್ರವಿವರಣೆಯೂ ಪ್ರಕಟವಾಗಿವೆ. ಆಯುರ್ವೇದ ಕ್ರಮದಂತೆ ಚಿಕಿತ್ಸಾಭಾಗವನ್ನು ಹದಿನೈದು ಅಧ್ಯಾಯಗಳಲ್ಲಿ ಈ ಸಂಪುಟದಲ್ಲಿ ವಿವರಿಸಿರುವುದರಿಂದ ಇದಕ್ಕೆ ಆಯುರ್ವೇದ ಸಂಪುಟವೆಂದು ಹೆಸರಿಡಲಾಗಿದೆ. ಮುಂದೆ ಮುಂದೆ ಪ್ರಕಟವಾಗುವ ವಿಷಯಗಳೆಲ್ಲವೂ ಧರ್ಮಶಾಸ್ತ್ರ ಮತ್ತು ವೇದಗಳಲ್ಲಿರುವ ರಹಸ್ಯಾಂಶಗಳನ್ನೊಳಗೊಂಡಿವೆ. ಆಯುರ್ವೇದಕ್ರಮಾನುಸಾರವಾಗಿ ಆ ಶಾಸ್ತ್ರವನ್ನು ಪಾಠಹೇಳಿ ಆಯುರ್ವೇದವಿದ್ಯಾಪರಿಣತರನ್ನಾಗಿ ಮಾಡುವ ಮಹಾ ಪಾಠಶಾಲೆಯು ಈ ರಾಜಧಾನಿಯಲ್ಲಿ ಸ್ಥಾಪಿತವಾಗಿರುವ ಸಂಗತಿಯೂ, ಅಲ್ಲಿ ವ್ಯಾಸಂಗಮಾಡಿ ಉತ್ತೀರ್ಣರಾದ ಆಯುರ್ವೇದ ವಿದ್ವಾಂಸರುಗಳನ್ನು ದೇಶದ ನಾನಾ ಭಾಗಗಳಲ್ಲಿ ಸ್ಥಾಪಿತವಾಗಿರುವ ಆಯುರ್ವೇದೌಷಧಾಲಯಗಳಿಗೆ ವೈದ್ಯರನ್ನಾಗಿ ಕಳುಹಿಸುತ್ತಿರು ವುದೂ ಸಹ ನಮ್ಮ ದೇಶೀಯರೆಲ್ಲರಿಗೂ ತಿಳಿದುದಾಗಿಯೇ ಇದೆ. ಅಂತಹವರಿಗೆ ಈ ಗ್ರಂಥವು ಉಪಕಾರಕವಾಗಿರುವುದು. ವೈದ್ಯಶಾಸ್ತ್ರಪ್ರಕ್ರಿಯೆಗಳನ್ನೊಳಗೊಂಡ ಅಷ್ಟಾಂಗ ಹೃದಯ, ಸುಶ್ರುತ, ಚರಕ, ಬಾಹಟ, ಯೋಗರತ್ನಾಕರವೇ ಮುಂತಾದ ವೈದ್ಯಗ್ರಂಥಗಳಲ್ಲಿರುವ ಮುಖ್ಯ ಮುಖ್ಯವಾದ ಚಿಕಿತ್ಸಾಭಾಗಗಳನ್ನಿಲ್ಲಿ ನಾವು ನೋಡಬಹುದು. ಪಶುವೈದ್ಯರು ತಿಳಿಯಬೇಕಾದ ಸಂಗತಿಗಳೂ ಸಹ ಗೋಚಿಕಿತ್ಸಾ, ಅಶ್ವಚಿಕಿತ್ಸಾ, ಗಜಚಿಕಿತ್ಸಾಧ್ಯಾಯಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

ಇದರಲ್ಲಿ ಬರುವ ರಾಜಧರ್ಮಶಾಸ್ತ್ರವೂ, ದಂಡನೀತಿ ಪ್ರಕರಣವೂ, ಸಹ ಮಂತ್ರಾಲೋಚನಾ ಮರ್ಮಗಳನ್ನೂ, ರಾಜದಂಡನೀತಿಯನ್ನೂ, ಬಹು ಗೂಢವಾಗಿ ವಿವರಿಸಿವೆ.

ಇಂತಹ ಧರ್ಮಶಾಸ್ತ್ರಗಳನ್ನು ಸಕಲರಿಗೂ ತಿಳಿಯುವಂತೆ ಮಾಡುತ್ತಿರುವ ನಮ್ಮ ಶ್ರೀಮನ್ಮಹಾರಾಜರವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ. ಮಹಾ ಪ್ರಭುಗಳಿಗೆ** ಭಗವಂತನು ಪ್ರಸನ್ನನಾಗಿ ಅವರಿಗೆ ಇತೋಽಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯಗಳನ್ನು ಕೊಟ್ಟು ಕಾಪಾಡಲೆಂದು ಅನನ್ಯಭಕ್ತಿಯಿಂದ ದೇವರ ಮುಂದೆ ಅನವರತವೂ ಪ್ರಾರ್ಥಿಸುತ್ತಿದೇನೆ.

ಪಾರ್ಥಿವ ಶ್ರಾವಣಸಿತ ಪಂಚಮಿ
ಅಧ್ಯಾತ್ಮರಾಮಾಶ್ರಮ
ಮೈಸೂರು.

**ಚಾ. ವೆಂಕಟರಮಣಶಾಸ್ತ್ರಿ.**
ಅನುವಾದಕ



# ವಿ ಷ ಯಾ ನು ಕ್ರ ಮ ಣಿ ಕೆ

ಅಧ್ಯಾಯ ಮತ್ತು ವಿಷಯಗಳು ಪುಟಗಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ದ್ವಿತೀಯಖಂಡದ
ದ್ವಿತೀಯಭಾಗದ ವಿಷಯಾನುಕ್ರಮಣಿಕೆ ಸಮಾಪ್ತಮಾದುದು.

ಪ್ರಥಮ ಸಂಪುಟ —೧ ರಿಂದ ೪೧ ಅಧ್ಯಾಯಗಳು ಪೂರ್ತಾ
ದ್ವಿತೀಯ ಸಂಪುಟ—೪೨ ರಿಂದ ೭೨ ಅಧ್ಯಾಯಗಳು ಪೂರ್ತಾ



॥ ಶ್ರೀಃ ॥

---

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಗವಾಂ ಹಿ ಪಾಲನಂ ರಾಜ್ಞಾ ಕರ್ತವ್ಯಂ ಭೃಗುನಂದನ ।**
**ಗಾವಃ ಪವಿತ್ರಾಃ ಸಂಗತ್ಯಾ ಗೋಷು ಲೋಕಾಃ ಪ್ರತಿಷ್ಠಿತಾಃ ॥ ೧ ॥**

**ಗಾವೋ ವಿತನ್ವತೇ ಯಜ್ಞಂ ಗಾವೋ ವಿಶ್ವಸ್ಯ ಮಾತರಃ ।**
**ಶಕೃನ್ಮೂತ್ರಂ ಪರಂ ತಾಸಾಮಲಕ್ಷ್ಮೀ ನಾಶನಂ ಸ್ಮೃತಂ ॥ ೨ ॥**

---

## ನಲವತ್ತೆರಡನೆಯ ಅಧ್ಯಾಯವು

೧. ಪುಷ್ಕರನು ಪುನಃ ಹೇಳುತ್ತಾನೆ.—ಪರಶುರಾಮ! ಮುಂದೆ ನಿನಗೆ ಗೋಮಾಹಾತ್ಮ್ಯೆಯನ್ನು ಹೇಳುತ್ತೇನೆ, ಕೇಳು. ಮಹಾರಾಜನಾದವನು ಹಸುಗಳನ್ನು ಸಂರಕ್ಷಿಸಬೇಕು. ಇದು ಅವಶ್ಯಕರ್ತವ್ಯವೆಂದು ತಿಳಿ. ಗೋವುಗಳಿರುವ ಸ್ಥಳವು ಪರಮಪವಿತ್ರವಾದುದು. ಸಕಲಲೋಕಗಳೂ ಸಹ ಗೋವುಗಳಿಂದಲೇ ಬದುಕಿಕೊಂಡಿವೆ.

೨. ಗೋವುಗಳಿಲ್ಲದೆ ಯಜ್ಞಯಾಗಾದಿಗಳು ನಡೆಯುವಂತಿಲ್ಲ. ಗೋವುಗಳನ್ನು ವಿಶ್ವಜನನಿಯರೆಂದು ತಿಳಿಯಬೇಕು. ಅವುಗಳ ಸಗಣಿ-ಗಂಜಲಗಳೂ ಸಹ ಅಲಕ್ಷ್ಮೀಪರಿಹಾರಕವೆಂದು ಹೇಳಿರುವಲ್ಲಿ ಹಾಲು-ಮೊಸರುಗಳ ವಿಷಯವನ್ನು ಹೇಳಬೇಕಾಗಿಯೇ ಇಲ್ಲ.

ತದ್ಧಿ ಸೇವ್ಯಂ ಪ್ರಯತ್ನೇನ ತತ್ರ ಲಕ್ಷ್ಮೀಃ ಪ್ರತಿಷ್ಠಿತಾ ।
ಉದ್ವೇಗಂ ಚ ನ ಗಂತವ್ಯಂ ಶಕೃನ್ಮೂತ್ರಸ್ಯ ಜಾನತಾ ॥ ೩ ॥

ಗವಾಂ ಮೂತ್ರಪುರೀಷೇಷು ಷ್ಠೀವನಾದ್ಯಂ ನ ಸಂತ್ಯಜೇತ್ ।
ಗೋರಜಃ ಪರಮಂ ಪುಣ್ಯಮಲಕ್ಷ್ಮೀ ವಿಘ್ನನಾಶನಂ ॥ ೪ ॥

ಗವಾಂ ಕಂಡೂಯನಂ ಚೈವ ಸರ್ವಕಲ್ಮಷನಾಶನಂ
ತಾಸಾಂ ಶೃಂಗೋದಕರ ಚೈವ ಜಾಹ್ನವೀಜಲಸನ್ನಿಭಂ ॥ ೫ ॥

---

೩. ಮನೆಯನ್ನು ಸಗಣಿಯಿಂದಲೂ ಗಂಜಲ (ಗಂಗಾಜಲ) ದಿಂದಲೂ ಸಾರಿಸುತ್ತಿರುವ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿ ನಿಲ್ಲುವಳು. ಆದ್ದರಿಂದ ಬುದ್ಧಿವಂತರಾದವರು ಸಗಣಿಯನ್ನೂ ಗಂಜಲವನ್ನೂ ಅಲಕ್ಷ್ಯ (ಉದ್ವೇಗ) ಮಾಡಬಾರದು. ಗಂಜಲವು ಗಂಗಾಜಲಕ್ಕೆ ಸಮಾನವಾದುದು.

೪. ಗೋವುಗಳ ಸಗಣಿಯನ್ನು ಗಂಜಲದಲ್ಲಿ ಕಲಸಿ ಚೆನ್ನಾಗಿ ಉಂಡೆಮಾಡಿ ಬೆರಣಿಯಾಗಿ ತಟ್ಟಿ ಒಣಗಿಸಿ ಅದರ ಕರೀಬೂದಿಯನ್ನು ಹಲ್ಲುಜ್ಜುವುದಕ್ಕೆ ಉಪಯೋಗಿಸಬೇಕು. (ಇದರಿಂದ ದಂತವ್ಯಾಧಿಗಳು ನಿರ್ಮೂಲವಾಗುವುದು.)

ಟಿಪ್ಪಣಿ:—ಈಚೆಗೆ ಕರೀಬೂದಿಯನ್ನುಜ್ಜುವ ಪದ್ಧತಿ ತಪ್ಪಿಹೋಗಿ, ಚಿತ್ರವಿಚಿತ್ರವಾದ ಹಲ್ಲುಪುಡಿಗಳೂ, ಟೂತ್‌ಪೇಸ್ಟ್‌ಗಳೂ ಹರಡುತ್ತಾ ಬಂದಿವೆ. ದಂತರೋಗವು ಹೆಚ್ಚಿ ಆ ಮೂಲಕ ದಂತವೈದ್ಯರೂ ಹೆಚ್ಚುತ್ತಿದ್ದಾರೆ. ಈಗಲೂ ಬುದ್ಧಿವಂತರಾದವರು ಪ್ರಾಚೀನಸಂಪ್ರದಾಯದಂತೆ ಬೆರಣಿಯ ಕರಿಬೂದಿಯನ್ನು ಹಲ್ಲುಜ್ಜುವುದಕ್ಕೆ ಉಪಯೋಗಿಸುತ್ತಾ ಬಂದರೆ ಅದರ ನಿಜವಾದ ಮಹಿಮೆಯು ಗೊತ್ತಾಗುವುದು. ಗೋವಿನ ಕಾಲಿನ ಧೂಳು ಪರಮಪುಣ್ಯಪ್ರದವಾದುದು. ದಾರಿದ್ರ್ಯವನ್ನೂ ವಿಘ್ನವನ್ನೂ ಧ್ವಂಸಮಾಡತಕ್ಕ ಶಕ್ತಿಯುಳ್ಳದ್ದು.

೫. ಹಸುವಿನ ಮೈಯನ್ನು ತುರಿಸಿ (ಕೆರೆ)ದರೆ ಸಕಲ ವಿಧವಾದ ಪಾಪಗಳೂ ನಾಶವಾಗುವುವು. ಗೋಶೃಂಗ (ಕೊಂಬಿನ)ದ ನೀರು ಗಂಗಾಜಲಕ್ಕೆ ಸಮಾನವಾದ ಮಹಿಮೆಯುಳ್ಳದ್ದು.

ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಶ್ಚ ರೋಚನಂ ।
ಷಡಂಗಮೇತನ್ಮಾಂಗಲ್ಯಂ ಪವಿತ್ರಂ ತು ಪೃಥಕ್ಪೃಥಕ್ ॥ ೬ ॥

ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।
ಪವಿತ್ರಂ ಪರಮಂ ಜ್ಞೇಯಂ ಸ್ನಾನೇ ಪಾನೇ ಚ ಭಾರ್ಗವ ॥ ೭ ॥

ರಕ್ಷೋಘ್ನಮೇತನ್ಮಾಂಗಲ್ಯಂ ಕಲಿದುಃಖಪ್ರಣಾಶನಂ ।
ರೋಚನಾ ಚ ತಥಾ ಧನ್ಯಾ ರಕ್ಷೋರಗಗದಾಪಹಾ ॥ ೮ ॥

ಯಸ್ತು ಕಲ್ಯೇ ಸಮುತ್ಥಾಯ ಮುಖಮಾಜ್ಯೇ ನಿರೀಕ್ಷತೇ ।
ತಸ್ಯಾಃ ಅಲಕ್ಷ್ಮೀಃ ಕ್ಷಯಂ ಯಾತಿ ವರ್ಧತೇ ನ ತು ಕಿಲ್ಬಿಷಂ ॥ ೯ ॥

---

೬. ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ. ಗೋಘೃತ, ಗೋರೋಚನ; ಈ ಆರೂ ಒಟ್ಟೊಟ್ಟಿಗೆ ಬೆರೆದರೂ, ಬೇರೆ ಬೇರೆಯಾಗಿಯೇ ಇದ್ದರೂ ಮಂಗಳಕರವಾದುದು ಮತ್ತು ಪರಮಪವಿತ್ರವಾದುದು.

೭. ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ ಮತ್ತು ಕುಶೋದಕಗಳೆಂಬ ಈ ಆರೂ ಸ್ನಾನಪಾನಗಳಿಗೆ ಪರಮಪವಿತ್ರವಾದುವುಗಳೆಂದು ತಿಳಿಯಬೇಕು.

೮. ಮತ್ತು ಈ ಆರಕ್ಕೂ ರಾಕ್ಷಸಬಾಧಾಪರಿಹಾರ ಮಾಡುವ ಶಕ್ತಿಯುಂಟು. ಇವೆಲ್ಲವೂ ಮಂಗಳದಾಯಕ ಪದಾರ್ಥಗಳು. ಮತ್ತು ಕಲಿ, ದುಸ್ವಪ್ನಬಾಧಾ ಪರಿಹಾರಕವಾದುವುಗಳು. ಗೋರೋಚನವಾದರೋ ಔಷಧಕ್ಕೆ ಬಹಳ ಉಪಯುಕ್ತವಾದ ವಸ್ತುವು. ರಾಕ್ಷಸಬಾಧಾ ಮತ್ತು ಸರ್ಪವಿಷಬಾಧೆಯನ್ನು ಸಹಾ ಪರಿಹರಿಸ ತಕ್ಕುದು.

೯. ಯಾರು ಪ್ರಾತಃಕಾಲ ಎದ್ದೊಡನೆಯೇ ತುಪ್ಪದಲ್ಲಿ ತಮ್ಮ ಮುಖವನ್ನು ನೋಡಿಕೊಳ್ಳುವರೋ ಅವರ ಬಡತನವೆಲ್ಲವೂ ಕೂಡಲೇ ನಿವಾರಣೆಯಾಗುವುದು. ಮುಂದಕ್ಕೆ ಅವರ ಪಾಪವು ಅಭಿವೃದ್ಧಿಯಾಗುವುದಿಲ್ಲ.

**ಗವಾಂ ಗ್ರಾಸಪ್ರದಾನೇನ ಪುಣ್ಯಂ ಸುಮಹದಶ್ನುತೇ ।**
**ಯಾವತ್ಯಃ ಶಕ್ನುಯಾದ್ಗಾವಃ ಸುಖಂ ಧಾರಯಿತುಂ ಗೃಹೇ ॥ ೧೦ ॥**

**ಧಾರಯೇತ್ತಾವತೀರ್ನಿತ್ಯಂ ಕ್ಷುಧಿತಾಸ್ತು ನ ಧಾರಯೇತ್ ।**
**ದುಃಖಿತಾ ಧೇನವೋ ಯಸ್ಯ ವಸಂತಿ ದ್ವಿಜ ಮಂದಿರೇ ॥ ೧೧ ॥**

**ನರಕಂ ಸಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।**
**ದತ್ವಾ ಪರಗವೇ ಗ್ರಾಸಂ ಪುಣ್ಯಂ ಸುಮಹದಶ್ನುತೇ ॥ ೧೨ ॥**

**ಶೈಶಿರಂ ಸಕಲಂ ಕಾಲಂ ಗ್ರಾಸಂ ಪರಗವೇ ತಥಾ ।**
**ದತ್ವಾ ಸ್ವರ್ಗಮವಾಪ್ನೋತಿ ಸಂವತ್ಸರಶತಾನಿ ಷಟ್ ॥ ೧೩ ॥**

---

೧೦. ಹಸುಗಳಿಗೆ ಹುಲ್ಲು ಹಾಕಿದರೆ ಮಹತ್ತರವಾದ ಪುಣ್ಯವುಂಟಾಗುವುದು. ಎಷ್ಟು ಹಸುಗಳಿಗೆ ಹೊಟ್ಟೆತುಂಬಾ ಹುಲ್ಲುಹಾಕಿ ಕಟ್ಟಿಕೊಳ್ಳುವ ಶಕ್ತಿಯುಂಟೋ ಅಷ್ಟೇ ಹಸುಗಳನ್ನು ಮಾತ್ರವೇ ಕಟ್ಟಿಕೊಳ್ಳಬೇಕು.

೧೧. ಹಸುಗಳಿಗೆ ಸರಿಯಾಗಿ ಹುಲ್ಲು ಜೋಳದಕಡ್ಡಿ ಮುಂತಾದ ಆಹಾರ ವಸ್ತುಗಳನ್ನು ಹಾಕುವ ಶಕ್ತಿಯಿಲ್ಲದವರು ಮನೆಯಲ್ಲಿ ಖಂಡಿತವಾಗಿ ಹಸುಗಳನ್ನು ಕಟ್ಟಿಕೊಳ್ಳಕೂಡದು. ಹಸುಗಳಿಗೆ ಹೊಟ್ಟೆಗೆ ಮೇವು ಹಾಕದೆ ಅವುಗಳನ್ನು ಉಪವಾಸ ವಾಗಿ ಮನೆಯಲ್ಲಿ ಕಟ್ಟಬಾರದು.

೧೨. ಯಾರ ಮನೆಯಲ್ಲಿ ಕಟ್ಟಿರುವ ಹಸುಗಳು ಹೊಟ್ಟೆಗಿಲ್ಲದೆ ದುಃಖದಿಂದ ಕಣ್ಣೀರಿಡುವುವೋ, ಅಂತಹ ಮನೆಯ ಯಜಮಾನನು ನರಕಲೋಕದಲ್ಲಿ ವಾಸ ಮಾಡಬೇಕಾಗಿ ಬರಬೇಕಾಗುವುದು. ಈ ವಿಷಯದಲ್ಲಿ ಸಂದೇಹವೇ ಇಲ್ಲ.

೧೩. ಮತ್ತೋರ್ವರ ಹಸುವಿಗೆ ಹುಲ್ಲನ್ನು ಹಾಕಿದರೆ ಮಹತ್ತರವಾದ ಪುಣ್ಯ ವುಂಟು. ಮಾಘ ಫಾಲ್ಗುಣ ಮಾಸಗಳಲ್ಲಿ ಯಾರು ಹಸುಗಳಿಗೆ (ಇತರರ ಗೋವು) ಹುಲ್ಲನ್ನು ಹಾಕುವರೋ, ಅಂತಹ ಮಹಾತ್ಮರು ಆರುನೂರು ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಮಾಡುತ್ತಾರೆ.

**ಅಗ್ರಭುಕ್ತಂ ನರೋ ದತ್ವಾ ನಿತ್ಯಮೇವ ತಥಾ ಗವಾಂ ।**
**ಮಾಸಷಟ್ಕೇನ ಲಭತೇ ನಾಕಲೋಕಂ ಸಮಾಯುತಂ ॥ ೧೪ ॥**

**ಸಾಯಂ ಪ್ರಾತರ್ಮನುಷ್ಯಾಣಾಮಶನಂ ದೇವನಿರ್ಮಿತಂ ।**
**ತತ್ರೈವಮಶನಂ ದತ್ವಾ ಗವಾಂ ನಿತ್ಯಮತಂದ್ರಿತಃ ॥ ೧೫ ॥**

**ದ್ವಿತೀಯಂ ಯಃ ಸಮಶ್ನಾತಿ ತೇನ ಸಂವತ್ಸರಾನ್ನರಃ ।**
**ಗವಾಂ ಲೋಕಮವಾಪ್ನೋತಿ ಯಾವನ್ಮನ್ವಂತರಂ ದ್ವಿಜ ॥ ೧೬ ॥**

**ಗವಾಂ ಪ್ರಚಾರೇ ಪಾನೀಯಂ ದತ್ವಾ ಪುರುಷಸತ್ತಮಃ ।**
**ವಾರುಣಂ ಲೋಕಮಾಸಾದ್ಯ ಕ್ರೀಡತ್ಯಬ್ದಗಣಾಯುತಂ ॥**
**ಪರಾಂ ತೃಪ್ತಿಮವಾಪ್ನೋತಿ ಯತ್ರಯತ್ರಾಭಿಜಾಯತೇ ॥ ೧೭ ॥**

---

೧೪. ಪ್ರತಿದಿವಸವೂ ತಾನು ಊಟಮಾಡುವುದಕ್ಕಿಂತ ಮುಂಚೆ ಗೋಗ್ರಾಸವನ್ನು ಹಾಕುತ್ತಾ, ಯಾವ ಮನುಷ್ಯನು ಈ ಗೋಗ್ರಾಸವ್ರತವನ್ನು ಆರು ತಿಂಗಳು ಆಚರಿಸುವನೋ, ಅಂತಹ ಮನುಷ್ಯನು ಹತ್ತುಸಾವಿರ ವರ್ಷ ಸ್ವರ್ಗಲೋಕದಲ್ಲಿ ಸುಖಪಡುವನು.

೧೫-೧೬. ದೇವರು, ಪ್ರತಿದಿನವೂ ಸಾಯಂಕಾಲ, ಮಧ್ಯಾಹ್ನಕಾಲ ಈ ಎರಡು ಹೊತ್ತು ಮನುಷ್ಯನು ಊಟಮಾಡಬೇಕೆಂದು ವಿಧಾಯಕ ಮಾಡಿರುತ್ತಾನೆ. ಆ ಎರಡು ಹೊತ್ತು ಊಟಮಾಡುವಾಗಲೂ ಯಾವ ಮನುಷ್ಯನು ತನ್ನ ಊಟಕ್ಕಿಂತ ಮುಂಚೆ ಹಸುಗಳಿಗೆ ಹುಲ್ಲು ಹಾಕಿ ಆ ಬಳಿಕ ಊಟಮಾಡುತ್ತಾನೋ, ಈ ಕ್ರಮವನ್ನು ಯಾವನು ಒಂದು ವರ್ಷದವರಿವಿಗೆ ತಪ್ಪದೆ ನಡೆಸುವನೋ, ಅಂತಹ ಮಹಾಶಯನು ಮನ್ವಂತರ ಪೂರ್ತಿಯಾಗುವವರೆಗೂ ಗೋಲೋಕದಲ್ಲಿ ಬಹು ಸುಖವಾಗಿ ವಾಸ ಮಾಡುತ್ತಾನೆ.

೧೭. ಗೋವುಗಳು ತಿರುಗಾಡುವ ದಾರಿಯಲ್ಲಿ ಒಂದು ನೀರಿನ ತೊಟ್ಟಿಯನ್ನು ಇಟ್ಟು ಅದರಲ್ಲಾರು ನೀರು ತುಂಬಿಸಿ ಗೋವುಗಳಿಗೆ ಪಾನೀಯವನ್ನು ಕಲ್ಪಿಸುವರೋ, ಅಂತಹ ಪುಣ್ಯಾತ್ಮರು ಹತ್ತುಸಾವಿರ ವರ್ಷಗಳವರೆಗೆ ವರುಣಲೋಕದಲ್ಲಿ ಸುಖ ಪಡುವರು.

ಗವಾಂ ಪ್ರಚಾರಭೂಮಿಂ ತು ವಾಹಯಿತ್ವಾ ಹಲಾದಿನಾ ।
ನರಕಂ ಮಹದಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೧೮ ॥
ಗವಾಂ ಪಾನಪ್ರವೃತ್ತಾನಾಂ ಯಸ್ತು ವಿಘ್ನಂ ಸಮಾಚರೇತ್ ।

ಬ್ರಹ್ಮಹತ್ಯಾ ಕೃತಾ ತೇನ ಘೋರಾ ಭವತಿ ಭಾರ್ಗವ ।
ಸಿಂಹವ್ಯಾಘ್ರಭಯತ್ರಸ್ತಾಂ ಪಂಕಮಗ್ನಾಂ ಜಲೇ ಗತಾಂ ॥ ೧೯ ॥

ಗಾಮುದ್ಧೃತ್ಯ ನರಃ ಸ್ವರ್ಗೇ ಕಲ್ಪಭೋಗಾನುಪಾಶ್ನುತೇ ।
ಗವಾಂ ಯವಸದಾನೇನ ರೂಪವಾನಭಿಜಾಯತೇ ॥ ೨೦ ॥

ಸೌಭಾಗ್ಯಂ ಮಹದಾಪ್ನೋತಿ ಲಾವಣ್ಯಂ ಚ ದ್ವಿಜೋತ್ತಮ ।
ಔಷಧಂ ಚ ತಥಾ ದತ್ವಾ ವಿರೋಗಸ್ತ್ವಭಿಜಾಯತೇ ॥ ೨೧ ॥

---

೧೮. ಮತ್ತು ಅಂಥವರು ಪುನಃ ಭೂಲೋಕದಲ್ಲಿ ಹುಟ್ಟಿದಾಗ ಎಲ್ಲಿಯೇ ಜನಿಸಿರಲಿ ಅಲ್ಲಿ ಉತ್ತಮವಾದ ಭೋಗಗಳನ್ನು ಹೊಂದುವರು. ಗೋವುಗಳ ಆಹಾರಕ್ಕಾಗಿ (ಹುಲ್ಲು ಬೆಳೆಯುವ ಹುಲ್ಲುಬನ್ನಿ) ಬಿಟ್ಟಿರುವ ಗೋಮಾಳಗಳನ್ನು ಯಾರು ನೇಗಿಲುಕಟ್ಟಿ ಉತ್ತು, ಬಿತ್ತಿ, ಬೆಳೆದು, ತಮ್ಮ ಆಹಾರವನ್ನು ಕಲ್ಪಿಸಿಕೊಂಡು ತಿನ್ನುವರೋ, ಅಂತಹವರು ಚತುರ್ದಶ ಮನ್ವಂತರಗಳು ಕಳೆಯುವವರೆವಿಗೂ ನರಕ ವಾಸವನ್ನನುಭವಿಸಬೇಕಾಗುತ್ತದೆ.

೧೯. ಯಾರು ಗೋವುಗಳು ನೀರು ಕುಡಿಯುತ್ತಿರುವಾಗ ವಿಘ್ನವನ್ನುಂಟು ಮಾಡುತ್ತಿರುವರೋ ಅದು ಮಹಾ ಪಾಪವೆನಿಸಿಕೊಳ್ಳುವುದಲ್ಲದೆ ಅದು ಘೋರವಾದ ಬ್ರಹ್ಮಹತ್ಯಾ ದೋಷಕ್ಕೆ ಸಮಾನವಾಗುತ್ತದೆ.

೨೦. ಸಿಂಹ ಮತ್ತು ಹುಲಿಗಳಿಗೆ ಬೆದರಿ ಕೆಸರಿನಲ್ಲಾಗಲೀ ನೀರಿನಲ್ಲಾಗಲೀ ಬಿದ್ದ ಹಸುವನ್ನು ಯಾರು ಕನಿಕರದಿಂದ ಮೇಲಕ್ಕೆತ್ತುವರೋ ಅಂತಹ ಮನುಷ್ಯರು ಕಲ್ಪಾಂತ್ಯದವರಿವಿಗೂ ಸ್ವರ್ಗಲೋಕದಲ್ಲಿ ಭೋಗಪಡುತ್ತಾರೆ.

೨೧. ಯಾರಾದರೂ ಗೋವುಗಳಿಗೆ ಗರಿಕೆಗಳನ್ನು ತಿನ್ನಿಸಿದರೆ ಅಂತಹವರು ಮಹಾ ರೂಪವಂತರಾಗಿ ಹುಟ್ಟುತ್ತಾರೆ. ಮತ್ತು ಅಂಥವರು ಮಹಾ ಸೌಭಾಗ್ಯ ಶಾಲಿಗಳಾಗಿಯೂ, ಲಾವಣ್ಯವಂತರಾಗಿಯೂ ಆಗುತ್ತಾರೆ. 'ಹಸುಗಳಿಗೆ ಏನಾದರೂ ಖಾಯಿಲೆ ಬಂದಾಗ ಯಾರು ಔಷಧವನ್ನು ಕೊಟ್ಟು ಕಾಪಾಡುವರೋ ಅಂತಹವರು ಆರೋಗ್ಯವಂತರಾಗಿ ಬಾಳುತ್ತಾರೆ.

**ಔಷಧಂ ಲವಣಂ ತೋಯಂಆಹಾರಂ ಚ ಪ್ರಯಚ್ಛತಃ ।**
**ವಿಪತ್ತೌ ಪಾತಕಂ ನಾಸ್ಯ ಭವತ್ಯುದ್ಬಂಧನಾದಿಕಂ ॥ ೨೨ ॥**

**ವಕ್ತವ್ಯತಾ ದಿನಾಪಾಲೇ ರಾತ್ರೌ ಸ್ವಾಮಿನ ನ ತದ್ಗೃಹೇ ।**
**ತತ್ರಾಪಿ ತನ್ನಿಯುಕ್ತಶ್ಚ ಕಶ್ಚಿದನ್ಯೋ ನ ಚೇದ್ಭವೇತ್ ॥ ೨೩ ॥**

**ತಾಸಾಂ ಚೇದವಿರುದ್ಧಾನಾಂ ಚರಂತೀನಾಂ ಮಿಥೋ ವನೇ ।**
**ಯಾಮುತ್ಪತ್ಯ ವೃಕೋ ಹನ್ಯಾನ್ನಪಾಲಸ್ತತ್ರ ಕಿಲ್ಬಿಷೀ ॥ ೨೪ ॥**

**ಸಂರುದ್ಧಾಸು ತಥೈವಾಸು ವೃಕಃ ಪಾಲೇ ತ್ವನಾಯತಿ ।**
**ಯಾಮುತ್ಪತ್ಯ ವೃಕೋ ಹನ್ಯಾತ್ಪಾಲೇ ತತ್ಕಿಲ್ಬಿಷಂ ಭವೇತ್ ॥ ೨೫ ॥**

---

೨೨. ಔಷಧ, ಲವಣ, ನೀರು, ಆಹಾರಗಳನ್ನು ಹಸುಗಳಿಗೆ ಕಷ್ಟ (ರೋಗ) ಬಂದಾಗ ಯಾರು ಕೊಡುತ್ತಾರೋ ಅವರು ಸಕಲ ಪಾಪಗಳನ್ನೂ ಪರಿಹಾರ ಮಾಡಿ ಕೊಳ್ಳುತ್ತಾರೆ. ಅವರು ಎಂದಿಗೂ ಉದ್ಬಂಧನಾದಿಗಳಿಗೆ ಗುರಿಯಾಗಿ ಸಾಯುವುದಿಲ್ಲ.

೨೩. ಹಸುಗಳು ಯಾರ ಮನೆಯ ಹಿತ್ತಿಲಲ್ಲೋ, ಯಾರ ಹೊಲಗಳಲ್ಲೋ ಮೇಯುತ್ತಿದ್ದಾಗ ಯಾವನೋ ಬೀದಿಯಲ್ಲಿ ಹೋಗುವವನು ಅದನ್ನು ನೋಡಿ ಆ ವಿಷಯವನ್ನು ಮಾಲಿಕನಿಗೆ ಹೇಳಿ ಅದರ ಮೇವಿಗೆ ವಿಘ್ನಮಾಡಿದರೆ ಮಹಾ ದೋಷವುಂಟು.

೨೪. ಹಸುಗಳು ಹುಲ್ಲುಗಾವಲಿನಲ್ಲಿ ಗುಂಪಾಗಿ ಸೇರಿ ವಿರೋಧವಿಲ್ಲದೆ ಹುಲ್ಲು ಮೇಯುತ್ತಿದ್ದ ಸಮಯದಲ್ಲಿ ಯಾವುದಾದರೂ ಒಂದು ತೋಳವು ಓಡಿ ಬಂದು ಹಸುವನ್ನೇನಾದರೂ ಎತ್ತಿಕೊಂಡು ಹೋದರೆ ಆ ದೋಷವು ಗೊಪಾಲಕನಿಗೆ ತಟ್ಟುವುದಿಲ್ಲ.

೨೫. ಹಸುವನ್ನು ಮನೆಯಲ್ಲಿ ಕಟ್ಟಿ ಅದನ್ನು ಸರಿಯಾಗಿ ನೋಡಿಕೊಳ್ಳದೆ ಅಜಾಗರೂಕನಾಗಿದ್ದ ಆ ಸಮಯದಲ್ಲಿ ಆ ಹಸುವಿಗೆ ತೋಳದಿಂದ ವಿಪತ್ತುಂಟಾದರೆ ಆ ದೋಷವು ಆ ಹಸುವನ್ನು ಕಟ್ಟಿದ ಯಜಮಾನನಿಗೆ ಸಂಭವಿಸುತ್ತದೆ.

ಗೋವಧೇನ ನರೋ ಯಾತಿ ನರಕಾನೇಕವಿಂಶತಿಂ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ತಾಸಾಂ ತು ಪಾಲನಂ ॥ ೨೬ ॥

ವಿಕ್ರಯಾಚ್ಚ ಗವಾಂ ರಾಮ ನ ಭದ್ರಂ ಪ್ರತಿಪದ್ಯತೇ ।
ತಾಸಾಂ ಚ ಕೀರ್ತನಾದೇವ ನರಃ ಪಾಪಾದ್ವಿಮುಚ್ಯತೇ ॥ ೨೭ ॥

ತಾಸಾಂ ಸಂಸ್ಪರ್ಶನಂ ಧನ್ಯಂ ಸರ್ವಕಲ್ಮಷನಾಶನಂ ।
ದಾನೇನ ಚ ತಥಾ ತಾಸಾಂ ಕುಲಾನ್ಯಪಿ ಸಮುದ್ಧರೇತ್ ॥ ೨೮ ॥

ಉದಕ್ಯಾ ಸೂತಿಕೋ ದೋಷೋ ನೈವ ತತ್ರ ಗೃಹೇ ಭವೇತ್ ।
ಭೂಮಿದೋಷಾಸ್ತಥಾಽನ್ಯೇಪಿ ಯತ್ರೈಕಾ ವಸತೇ ತು ಗೌಃ ॥ ೨೯ ॥

ಗವಾಂ ನಿಶ್ವಾಸವಾತೇನ ಪರಾ ಶಾಂತಿರ್ಗೃಹೇ ಭವೇತ್ ।
ನೀರಾಜನಂ ತತ್ಪರಮಂ ಸರ್ವಸ್ಥಾನೇಷು ಕೀರ್ತಿತಂ ॥ ೩೦ ॥

---

೨೬. ಯಾವನು ಗೋವಧೆಯನ್ನು ಮಾಡುವನೋ ಅಂಥವನು ಇಪ್ಪತ್ತೊಂದು ವಿಧವಾದ ಕ್ರೂರ ನರಕಗಳಲ್ಲಿಯೂ ಶಿಕ್ಷೆಯನ್ನು ಅನುಭವಿಸುತ್ತಾನೆ. ಆದ್ದರಿಂದ ಬಹಳ ಪ್ರಯತ್ನದಿಂದಲಾದರೂ ಗೋವುಗಳನ್ನು ಕಾಪಾಡಬೇಕು.

೨೭. ಯಾವನು ಹಸುವನ್ನು ವಿಕ್ರಯಿಸುವನೋ ಅವನು ಸೌಖ್ಯವನ್ನು ಹೊಂದಲಾರನು. ಗೋವುಗಳ ನಾಮಸ್ಮರಣೆಯನ್ನಾವನು ಮಾಡುವನೋ ಅವನು ತನ್ನ ಸಕಲ ಪಾಪಗಳನ್ನೂ ಕಳೆದುಕೊಳ್ಳುವನು.

೨೮. ಹಸುಗಳನ್ನು ಸ್ಪರ್ಶಮಾಡುವುದು ಮಹಾ ಪುಣ್ಯಪ್ರದವಾದುದು. ಮತ್ತು ಪಾಪಪರಿಹಾರಕವಾದುದು. ಗೋದಾನ ಮಾಡೋಣಧರಿಂದ ವಂಶವನ್ನು ಉದ್ಧಾರಮಾಡಿದಂತಾಗುವುದು.

೨೯. ಹಸುವನ್ನು ಕಟ್ಟಿರುವ ಜಾಗ (ಗೋಸ್ಥಾನ) ದಲ್ಲಿ ಮುಟ್ಟಾದವರ, ಸೂತಕದವರ ಸೋಕುತಾಕಿನ ದೋಷಗಳೂ, ಭೂಮಿದೋಷವೂ ಸಹ ಸಂಭವಿಸ ಲಾರದು. ಆದ್ದರಿಂದ ಒಂದು ಹಸುವನ್ನಾದರೂ ಪ್ರಯತ್ನಪಟ್ಟು ಕಟ್ಟಬೇಕು.

೩೦. ಯಾರ ಮನೆಯಲ್ಲಿ ಗೋವು ನಿಶ್ವಾಸ (ಉಸುರು) ವನ್ನು ಬಿಡುತ್ತ ಸುಖವಾಗಿ ಮಲಗಿರುವುದೋ ಆ ನಿಶ್ವಾಸ ವಾಯುವಿನಿಂದ ಆ ಮನೆಯಲ್ಲಿ ಸುಖ ಶಾಂತಿಗಳು ಲಭಿಸುವುವು. ಗೋವಿರುವ ಜಾಗದಲ್ಲಿ ದೀಪಗಳನ್ನು ಹತ್ತಿಸಿಡಬೇಕು.

**ಗವಾಂ ಸಂಸ್ಪರ್ಶನಾದ್ರಾಮ ಕ್ಷೀಯತೇ ಕಿಲ್ಬಿಷಂ ನೃಣಾಂ ।**
**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ॥ ೩೧ ॥**

**ಏಕರಾತ್ರೋಪವಾಸಂ ಚ ಶ್ವಪಾಕಮಪಿ ಶೋಧಯೇತ್ ।**
**ಪೃಥಕ್ತ್ವಪ್ರತ್ಯಯಾಭ್ಯಸ್ತಮತಿಸಂತಾಪನಂ ಸ್ಮೃತಂ ॥ ೩೨ ॥**

**ಸರ್ವಾಶುಭವಿಮೋಕ್ಷಾಯ ಪುರಾ ಚರಿತಮಿಾಶ್ವರೈಃ ।**
**ಪ್ರತ್ಯೇಕಂ ಚ ತ್ರ್ಯಹಾಭ್ಯಸ್ತಂ ಚಾತಿಸಾಂತಪನಂ ಸ್ಮೃತಂ ॥ ೩೩ ॥**

**ಸರ್ವಕಾಮಪ್ರದಂ ರಾಮ ಸರ್ವಾಶುಭವಿನಾಶನಂ ।**
**ಕೃಚ್ಛ್ರಾತಿಕೃಚ್ಛ್ರಂ ಪಯಸಾ ದಿವಸಾನೇಕವಿಂಶತಿಂ ॥ ೩೪ ॥**

---

೩೧. ಎಲೈ ಪರಶುರಾಮನೇ! ಕೇಳು. ಗೋಸ್ಪರ್ಶಮಾತ್ರದಿಂದಲೇ ಮನುಷ್ಯರು ಮಾಡಿದ ಸಕಲ ದೋಷಗಳೂ ಪರಿಹಾರವಾಗುತ್ತವೆ. ಹಿಂದೊಂದು ಬಾರಿ ಹೇಳಿರುವಂತೆ ಹಸುಗಳ ಗಂಜಲ. ಸಗಣಿ, ಹಾಲು, ಮೊಸರು, ತುಪ್ಪ ಮತ್ತು ಕುಶೋದಕಗಳು, ಈ ಆರೂ ಸಹ ಪರಮ ಪವಿತ್ರವಾದುದರಿಂದ ಒಂದು ದಿವಸ ಉಪವಾಸಮಾಡಿ ಈ ಕುಶೋದಕದೊಡನೆ ಬೆರೆತ ಪಂಚಗವ್ಯವನ್ನು ಶಾಸ್ತ್ರೀಯವಾಗಿ (ಮಂತ್ರಪೂತವಾಗಿ) ಪ್ರಾಶನಮಾಡಬೇಕು.

೩೨. ಈ ರೀತಿ ಏಕರಾತ್ರೋಪವಾಸ, ಪಂಚಗವ್ಯ ಪ್ರಾಶನಗಳಿಂದ ಚಂಡಾಲನೇ ಆದಾಗ್ಗೂ ಶುದ್ಧನಾಗುತ್ತಾನೆ. ಈ ಪಂಚಗವ್ಯ ಪೃಥಕ್ತ್ವ ಪ್ರತ್ಯಯದಿಂದ (ಒಂದಾವರ್ತಿ) ಸೇವಿತವಾದರೆ ಅತಿಸಾಂತಪನ (ಪ್ರಾಯಶ್ಚಿತ್ತ) ವೆನಿಸಿಕೊಳ್ಳುವುದು.

೩೩. ಸಕಲ ಅಶುಭ (ಪಾಪ) ಗಳನ್ನೂ ಕಳೆದುಕೊಳ್ಳುವ ನಿಮಿತ್ತವಾಗಿ ಬಹುಕಾಲದಿಂದಲೂ ಈ ಪಂಚಗವ್ಯ ಪ್ರಾಯಶ್ಚಿತ್ತವನ್ನು ಪೂರ್ವಿಕರಾದ ಯಜಮಾನರುಗಳು ವಿಧಿಸಿರುತ್ತಾರೆ. ಈ ಪಂಚಗವ್ಯವನ್ನು ಮೂರು ದಿವಸ ತೆಗೆದುಕೊಂಡರೆ ಅತಿಸಾಂತಪನ ಪ್ರಾಯಶ್ಚಿತ್ತವೆಂದು ಹೆಸರಾಗುವುದು.

೩೪. ಈ ಪಂಚಗವ್ಯ ಪ್ರಾಶನವು ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕದ್ದು. ಮತ್ತು ಸಕಲ ಪಾಪಗಳನ್ನೂ ಪರಿಹರಿಸತಕ್ಕದ್ದಾಗಿದೆ. ಇದಕ್ಕಾಗಿಯೇ ಪಂಚಗವ್ಯವನ್ನು ಪ್ರಾಶನಮಾಡುವ ಸಮಯದಲ್ಲಿ ಈ ಶ್ಲೋಕವನ್ನು ಹೇಳುತ್ತಾರೆ. ಅದೇನೆಂದರೆ ;—

**ನಿರ್ಮಲಾಸ್ತೇನ ಚೀರ್ಣೇನ ಭವಂತಿ ಪುರುಷೋತ್ತಮಾಃ ।**
**ತ್ರ್ಯಹಮುಷ್ಣಂ ಪಿಬೇನ್ಮೂತ್ರಂ ತ್ರ್ಯಹಮುಷ್ಣಂ ಘೃತಂ ಪಿಬೇತ್ ॥ ೩೫ ॥**

**ತ್ರ್ಯಹಮುಷ್ಣಂ ಪಯಃ ಪೀತ್ವಾ ವಾಯುಭಕ್ಷಃ ಪರಂ ತ್ರ್ಯಹಂ ।**
**ತಪ್ತಕೃಚ್ಛ್ರಮಿದಂ ಪ್ರೋಕ್ತಂ ಸರ್ವಾಶುಭವಿನಾಶನಂ ॥ ೩೬ ॥**

**ಶೀತಕೃಚ್ಛ್ರಸ್ತಥೈವೈಷ ಕ್ರಮಾಚ್ಛೀತೈಃ ಪ್ರಕೀರ್ತಿತಃ ।**
**ಸರ್ವಾಶುಭವಿನಾಶಾಯ ನಿರ್ಮಿತೋ ಬ್ರಹ್ಮಣಾ ಸ್ವಯಂ ॥ ೬೭ ॥**

---

ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಾತ್ಪಂಚಗವ್ಯಸ್ಯ ದಹತ್ವಗ್ನಿರಿವೇಂಧನಂ ॥

ಇದರ ಅರ್ಥ. ನನ್ನ ದೇಹದ ಚರ್ಮ ಮೂಳೆಗಳನ್ನು ಸಹ ವ್ಯಾಪಿಸಿಕೊಂಡು ವಾಸಮಾಡುತ್ತಿರುವ ಯಾವ ಯಾವ ಪಾಪರಾಶಿಗಳುಂಟೋ ಅಂತಹ ಸಕಲ ಪಾಪಗಳೂ ಈ ಪಂಚಗವ್ಯಪ್ರಾಶನ ಬಲದಿಂದ, ಬೆಂಕಿಯು ಒಣ ಸೌದೆಯನ್ನುರಿಸುವಂತೆ ದಹಿಸಿಹೋಗಲಿ.

ಇಪ್ಪತ್ತೊಂದು ದಿವಸ ಬರೀ ಹಸುವಿನ ಹಾಲನ್ನೇ ತೆಗೆದುಕೊಂಡರೆ ಅದಕ್ಕೆ ಕೃಛ್ರಾತಿಕೃಛ್ರವೆಂದು ಹೇಳುವರು.

೩೫-೩೬. ಪುರಾತನ ಪುಣ್ಯಪುರುಷರು ವಿಧಿಸಿರುವ ಈ ಪ್ರಾಯಶ್ಚಿತ್ತದಿಂದ ಜನರು ಪರಿಶುದ್ಧರಾಗುತ್ತಾರೆ. ಮೂರುದಿನ ಹಸುವಿನ ಬಿಸಿಬಿಸಿ ಗಂಜಲವನ್ನು ಕುಡಿಯುವುದು, ಆ ಮೇಲೆ ಹಸುವಿನ ಬಿಸಿಬಿಸಿ ತುಪ್ಪವನ್ನು ಮೂರುದಿವಸ ಕುಡಿಯುವುದು. ಆ ಮೇಲೆ ಮೂರು ದಿವಸ ಬಿಸಿಬಿಸಿ ನೀರನ್ನು ಕುಡಿಯುವುದು. ಆ ಬಳಿಕ ಮೂರು ದಿವಸ ವಾಯುಸೇವನೆ ಮಾಡುತ್ತಾ ನಿರಾಹಾರದಿಂದಿರುವುದು. ಈ ರೀತಿ ಹನ್ನೆರಡು ದಿನ ಮಾಡಿದರೆ ಪಾಪದ ಹುಟ್ಟು ಬುಡಮಟ್ಟ ಅಡಗಿ ಹೋಗುತ್ತದೆ. ಇದಕ್ಕೆ ತಪ್ತಕೃಛ್ರವೆಂದು ಹೆಸರು.

೩೭. ಮೇಲೆ ಹೇಳಿರುವ ಪದಾರ್ಥಗಳನ್ನೇ ಆರಿಸಿ (ತಣ್ಣಗೆ ಮಾಡಿ) ಹನ್ನೆರಡು ದಿನ ಸೇವಿಸಿದರೆ ಅದಕ್ಕೆ ಶೀತಕೃಛ್ರವೆಂದು ಹೆಸರು. ಈ ತಪ್ತಕೃಛ್ರ, ಶೀತಕೃಛ್ರ ಪ್ರಾಯಶ್ಚಿತ್ತಗಳನ್ನು ಪೂರ್ವದಲ್ಲಿ ಲೋಕವನ್ನು ಸೃಷ್ಟಿಮಾಡಿದ ಬ್ರಹ್ಮನೇ ಸಕಲ ಪಾಪಗಳಪರಿಹಾರಕ್ಕೋಸ್ಕರ ವಿಧಾಯಕ ಮಾಡಿದನು.

**ಗೋಮೂತ್ರೇಣ ಚರೇತ್ಸ್ನಾನಂ ವೃತ್ತಿಂ ಕುರ್ಯಾತ್ತು ಗೋರಸೈಃ ।**
**ಉತ್ಥಿತಾಮುತ್ಥಿತಸ್ತಿಷ್ಠೇದುಪವಿಷ್ಟಾಸು ನಾ ಸ್ಥಿತಃ　　॥ ೩೮ ॥**

**ಅಭುಕ್ತವತ್ಸು ನಾಶ್ನೀಯಾದಪೀತಾಸು ಚ ನೋ ಪಿಬೇತ್ ।**
**ತ್ರಾಣಂ ತು ರಾಮಾಕ್ಕೃತ್ವೈವ ತಥಾ ದೇವೇ ಪ್ರವರ್ಷತಿ　　॥ ೩೯ ॥**

**ತ್ರಾಣಂ ನೈವಾತ್ಮನಃ ಕಾರ್ಯಂ ಭಯಾರ್ತಾಶ್ಚ ಸಮುದ್ಧರೇತ್ ।**
**ಆತ್ಮಾನಮಪಿ ಸಂತ್ಯಜ್ಯ ಗೋವ್ರತಂ ತತ್ಪ್ರಕೀರ್ತಿತಂ　　॥ ೪೦ ॥**

**ಸರ್ವಪಾಪಪ್ರಶಮನಂ ಮಾಸೇನೈಕೇನ ಭಾರ್ಗವ ।**
**ವ್ರತೇನಾನೇನ ಚೀರ್ಣೇನ ಗೋಲೋಕಂ ಪುರುಷೋ ವ್ರಜೇತ್　　॥ ೪೧ ॥**

---

೩೮-೪೦. ಇನ್ನು ಗೋವ್ರತವೆಂದರೇನೆಂಬ ವಿಷಯವನ್ನು ಹೇಳುತ್ತೇನೆ ;— ಗೋಮೂತ್ರದಿಂದ ಪ್ರತಿದಿನವೂ ಸ್ನಾನಮಾಡಬೇಕು. ಹಾಲು-ಮಜ್ಜಿಗೆ-ಮೊಸರು-ತುಪ್ಪ ಮುಂತಾದ ಆಹಾರವನ್ನೇ ಸೇವಿಸಬೇಕು. ಹಸುವಿನ ಹಿಂದೆಯೇ ಇರಬೇಕು. ಅದು ಎದ್ದು ನಿಂತರೆ ತಾನೂ ಎದ್ದು ನಿಲ್ಲಬೇಕು. ಅದು ಮಲಗಿದರೆ ತಾನೂ ಮಲಗಬೇಕು. ಅದು ಮೇವು ತೆಗೆದುಕೊಳ್ಳದೆ ಇದ್ದಾಗ ತಾನೂ ಏನನ್ನೂ ತಿನ್ನಕೂಡದು. ಅದು ನೀರು ಕುಡಿಯದೆ ಇದ್ದಾಗ ತಾನೂ ನೀರು ಕುಡಿಯಕೂಡದು. ಮಳೆ, ಜರೋ ಎಂದು ಹುಯ್ಯುತ್ತಿರುವಾಗ ಹಸು ಮಳೆಯಲ್ಲಿ ನೆನೆಯುತ್ತಾ ಇರುವ ಸಮಯದಲ್ಲಿ ತಾನು ಹೋಗಿ ನೆರಳಲ್ಲಿ ನಿಂತುಕೊಳ್ಳಕೂಡದು. ಹಸುವಿಗೆ ಭಯವೊದಗಿದಾಗ (ಹುಲಿ ಮೊದಲಾದ ಕ್ರೂರ ದುಷ್ಟಮೃಗಗಳ ಬಾಧೆ ಸಂಭವಿಸಿದಾಗ) ಅದನ್ನು ಕಾಪಾಡದೆ ತಾನು ತನ್ನ ಪ್ರಾಣಗಳನ್ನುಳಿಸಿಕೊಳ್ಳಕೂಡದು. ಅಂದರೆ ತನ್ನ ಪ್ರಾಣವೇ ಹೋದಾಗ್ಗೂ ಹಸುವನ್ನು ಕಾಪಾಡುವುದೇ ಮುಖ್ಯಧರ್ಮವಾದ್ದರಿಂದ ಇದಕ್ಕೆ ಗೋವ್ರತವೆಂದು ಹೆಸರು.

೪೧. ಒಂದು ತಿಂಗಳು ಯಾರು ಈ ಗೋವ್ರತವನ್ನು ಮಾಡುವರೋ ಅವರು ಸಕಲಪಾಪ ವಿಮುಕ್ತರಾಗುತ್ತಾರೆ. ಪುರಾತನವಾದೀ ಗೋವ್ರತವನ್ನಾರು ಮಾಡುವರೋ ಅಂಥವರು ಗೋಲೋಕದಲ್ಲಿ ವಾಸಮಾಡುತ್ತಾರೆ.

ರಘುವಂಶದ ಮೂರನೇ ಸರ್ಗದಲ್ಲಿ ದಿಲೀಪ ಮಹಾರಾಜನು ಗೋವ್ರತ ಮಾಡಿ ಸಂತಾನವನ್ನು ಹೊಂದಿದ ಕಥೆಯು ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ.

**ಅಭೀಷ್ಟಮಥವಾ ರಾಮ ಯಾವದಿಂದ್ರಾಶ್ಚತುರ್ದಶ ।**
**ಗವಾಂನಿರ್ಹಾರನಿರ್ಮುಕ್ತಾನಶ್ನನ್ಪ್ರತಿದಿನಂ ಯವಾನ್ ॥ ೪೨ ॥**

**ಮಾಸೇನ ತದವಾಪ್ನೋತಿ ಯತ್ಕಿಂಚಿನ್ಮನಸೇಚ್ಛತಿ ।**
**ಗೋಮತೀಂ ಚ ತಥಾ ವಿದ್ಯಾಂ ಸಾಯಂ ಪ್ರಾತಸ್ತಥಾ ಜಪನ್ ॥ ೪೩ ॥**

**ಗೋಲೋಕಮಾಪ್ನೋತಿ ನರೋ ನಾತ್ರ ಕಾರ್ಯಾ ವಿಚಾರಣಾ ।**
**ಉಪರ್ಯುಪರಿ ಸರ್ವೇಷಾಂ ಗವಾಂ ಲೋಕಃ ಪ್ರಕೀರ್ತಿತಃ ॥ ೪೪ ॥**

**ನಿವಸಂತಿ ಸದಾ ಯತ್ರ ಗಾವಸ್ತ್ವಾಕಾಶಗಾ ದಿವಿ ।**
**ವಿಮಾನೇಷು ವಿಚಿತ್ರೇಷು ವೃತೇಷ್ವಪ್ಸರಸಾಂ ಗಣೈಃ ॥ ೪೫ ॥**

---

೪೨. ಗೋವ್ರತವನ್ನು ಯಾರು ಈ ರೀತಿ ಮಾಡುವರೋ ಅವರ ಮನಸ್ಸಿನ ಇಷ್ಟಾರ್ಥಗಳೆಲ್ಲವೂ ನೆರವೇರುತ್ತವೆ. ಮತ್ತು ಅಂತಹ ಮಹಾನುಭಾವನು ಹದಿನಾಲ್ಕು ಮನ್ವಂತರ ಕಳೆಯುವವರೆವಿಗೂ ಸ್ವರ್ಗದಲ್ಲಿ ಭೋಗಪಡುತ್ತಾನೆ.

೪೩. ಹಸುಗಳು ತಿಂದು ಮಿಕ್ಕ ಹುಲ್ಲನ್ನಾವನು (ಅಥವಾ ಅಕ್ಕಿ) ಒಂದು ತಿಂಗಳ ಕಾಲ ತಿನ್ನುತ್ತ ಬರುವನೋ ಅವನು ತನ್ನ ಮನಸ್ಸಿನ ಕೋರಿಕೆಗಳನ್ನೆಲ್ಲಾ ತಪ್ಪದೆ ಹೊಂದುತ್ತಾನೆ. ಪ್ರತಿದಿನವೂ ಯಾರು ಗೋಮತೀವಿದ್ಯೆ (ವೇದಮಂತ್ರ)ಯನ್ನು ಪ್ರಾತಃಸಂಧ್ಯಾಕಾಲಗಳಲ್ಲಿ ತಪ್ಪದೆ ಜಪಮಾಡುತ್ತಾ ಬರುವರೋ ಅಂಥವರು ಗೋಲೋಕವನ್ನು ಹೊಂದುವರೆಂಬ ವಿಷಯದಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

೪೪. ಮತ್ತು ಅಂಥವರು ಗೋಲೋಕದಿಂದ ಮೇಲೆ ಮೇಲೆ ಇರುವ ಲೋಕಗಳನ್ನೇರಿ ಹೋಗುವರೇ ಹೊರತು ಅಧೋಗತಿಯನ್ನೆಂದಿಗೂ ಹೊಂದಲಾರರು. ಮೇಲೆ ಮೇಲೆ ಆಕಾಶದವರಿಗೆ ಮುಟ್ಟಿರುವ ಲೋಕಗಳಲ್ಲೆಲ್ಲಾ ಗೋವುಗಳು ವಿಶೇಷವಾಗಿ ಇದ್ದೇ ಇವೆ. ಅವುಗಳನ್ನೋಲೈಸುತ್ತಾ ಅಪ್ಸರಸ್ತ್ರೀಯರು ವಿಮಾನಾರೂಢರಾಗಿ ಆಗಿಂದಾಗ್ಗೆ ಆ ಊರ್ಧ್ವಲೋಕಗಳಿಗೆ ಹೋಗಿಬರುತ್ತಲೇ ಇರುತ್ತಾರೆ.

೪೫-೪೬. ಆ ವಿಮಾನಗಳು ಚಿನ್ನದ ಅನೇಕ ಕಿರುಗಂಟೆಗಳಿಂದ ವ್ಯಾಪ್ತವಾಗಿವೆ. ಅಲ್ಲಿ ಕುಳಿತು ಅಪ್ಸರಸ್ತ್ರೀಯರು ವೀಣಾಮುರಜಾದಿಗಳ ಧ್ವನಿಗಳನ್ನು ಯಾವಾಗಲೂ

ಕಿಂಕಿಣೀಜಾಲಚಿತ್ರೇಷು ವೀಣಾಮುರಜನಾದಿಷು ।
ಸದಾ ಕಾಮಜಲಾ ನದ್ಯಃ ಕ್ಷೀರಪಾಯಸಕರ್ದಮಾಃ ॥ ೪೬ ॥

ಶೀತಲಾಮಲಪಾನೀಯಾಃ ಸುವರ್ಣಸಿಕತಾಸ್ತಥಾ ।
ಪುಷ್ಕರಿಣ್ಯಃ ಶುಭಾಸ್ತತ್ರ ವೈಡೂರ್ಯಕಮಲೋತ್ಪಲಾಃ ॥ ೪೭ ॥

ಮಾನಸೀ ಚ ತಥಾ ಸಿದ್ಧಿಃ ತತ್ರ ಲೋಕೇ ಭೃಗೂತ್ತಮ ।
ತಂ ಚ ಲೋಕಂ ನರಾ ಯಾಂತಿ ಗವಾಂ ಭಕ್ತ್ಯಾ ನ ಸಂಶಯಃ ॥ ೪೮ ॥

ಗೋಮತೀಂ ಕೀರ್ತಯಿಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ತಾಂ ತು ಮೇ ವದತೋ ವಿಪ್ರ ಶೃಣುಷ್ವ ಸುಸಮಾಹಿತಃ ॥ ೪೯ ॥

---

ಮಾಡುತ್ತಿರುವರು. ಅಲ್ಲಿರುವ ನದಿಗಳಲ್ಲಿ ಇಷ್ಟಾರ್ಥಪ್ರಾಪ್ತಿಯನ್ನುಂಟುಮಾಡುವ ಜಲಗಳು ವಿಶೇಷವಾಗಿ ಪ್ರವಹಿಸುವುವು. ಹಾಲಿನ ಮತ್ತು ಪಾಯಸದ ಮಡುಗಳು ಅಲ್ಲಿ ಅನೇಕವಾಗಿರುವುವು.

೪೭. ಮತ್ತು ಆ ಲೋಕದಲ್ಲಿ ತಣ್ಣಗೂ ಶುಚಿರುಚಿಯಾಗಿಯೂ ಇರುವ ಪಾನೀಯಗಳು ಯಥೇಚ್ಛವಾಗಿರುವುವು. ಅಲ್ಲಿರುವ ಮಳಲುಗಳೆಲ್ಲಾ ಚಿನ್ನದ ಹುಡಿಗಳು. ಅಲ್ಲಿರುವ ಸುಂದರವಾದ ಸರೋವರಗಳಲ್ಲಿ ವೈಡೂರ್ಯಮಣಿಯ ಕಮಲಗಳು ವಿಶೇಷವಾಗಿ ತುಂಬಿರುವುವು.

೪೮. ಆ ಲೋಕದಲ್ಲಿ ಒಳ್ಳೇ ಮನಶ್ಶಾಂತಿ (ಮಾನಸೀ ಸಿದ್ಧಿ)ಯುಂಟು. ಯಾರು ಗೋವುಗಳ ವಿಷಯದಲ್ಲಿ ಭಕ್ತಿಯಿಂದ ನಡೆದುಕೊಳ್ಳುವರೋ ಅಂತಹ ಮಹಾನುಭಾವರು ಆ ಲೋಕದಲ್ಲಿ ವಾಸಮಾಡುತ್ತಾರೆ.

೪೯. ಎಲೈ ಬ್ರಾಹ್ಮಣೋತ್ತಮನಾದ ಪರಶುರಾಮನೇ! ಕೇಳು. ಹಿಂದೆ ನಾನು ಗೋಮತೀವಿದ್ಯೆ (ಮಂತ್ರ)ಯೆಂದು ಹೇಳಿದೆನಲ್ಲಾ? ಆ ಮಂತ್ರವು ಸಕಲ ಪಾಪಪ್ರಣಾಶಕವಾದುದು. ಆ ಮಂತ್ರವನ್ನು ನಿನಗೆ ಈಗ ಹೇಳಿಕೊಡುತ್ತೇನೆ. ಸಮಾಧಾನಮನಸ್ಸಿನಿಂದ ಕೇಳಿ ತಿಳಿದುಕೋ.

ಗಾವಃ ಸುರಭಯೋ ನಿತ್ಯಂ ಗಾವೋಗುಗ್ಗುಲುಗಂಧಿಕಾಃ ।
ಗಾವಃ ಪ್ರತಿಷ್ಠಾ ಭೂತಾನಾಂ ಗಾವಃ ಸ್ವಸ್ತ್ಯಯನಂ ಪರಂ ॥ ೫೦ ॥

ಅನ್ನಮೇವ ಪರಂ ಗಾವೋ ದೇವಾನಾಂ ಹವಿರುತ್ತಮಂ ।
ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ॥ ೫೧ ॥

ಹವಿಷಾ ಮಂತ್ರಪೂತೇನ ತರ್ಪಯಂತ್ಯಮರಾನ್ದಿವಿ ।
ಋಷೀಣಾಮಗ್ನಿಹೋತ್ರೇಷು ಗಾವೋ ಹೋಮೇ ಪ್ರಯೋಜಿತಾಃ ॥ ೫೨ ॥

ಸರ್ವೇಷಾಮೇವ ಭೂತಾನಾಂ ಗಾವಃ ಶರಣಮುತ್ತಮಂ ।
ಗಾವಃ ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಂ ॥ ೫೩ ॥

---

೫೦. ಗೋವುಗಳಿಗೆ ಸುರಭಿಯೆಂಬ ಹೆಸರೊಂದುಂಟು. ಇದರ ಅರ್ಥ ವೇನೆಂದರೆ :— ಸರ್ವದಾ ಗೋವುಗಳು ಸುವಾಸನೆಯಿಂದ ಕೂಡಿರುವುವೆಂದು ತಾತ್ಪರ್ಯ. ಹಾಲುಮಡ್ಡೀ ವಾಸನೆಯಂತೆ ಗೋವುಗಳ ಅವಯುವದಿಂದ ಸುವಾಸನೆ ಹೊರಡುತ್ತಿರುತ್ತದೆ. ಸಕಲ ಪ್ರಾಣಿಗಳೂ ಹಸುವಿನಿಂದಲೇ ಜೀವಿಸುತಲಿವೆ. ಗೋವುಗಳು ಸರ್ವದಾ ಮಂಗಳದಾಯಕವಾದ ಪ್ರಾಣಿಗಳು.

೫೧. ಗೋವುಗಳ ಹಾಲೇ ದೇವತೆಗಳ ಹವಿಸ್ಸು (ಆಹಾರ). ಸಕಲ ಪ್ರಾಣಿಗಳಿಗಿಂತಲೂ ಪರಮಪವಿತ್ರವಾದ ಪ್ರಾಣಿಗಳೆಂದರೆ ಗೋವುಗಳೇ ಸರಿ. ಇವು ಸಕಲ ಲೋಕಗಳನ್ನೂ ಪೋಷಿಸುತ್ತವೆ. ಸಕಲ ಲೋಕಗಳೂ ಇವುಗಳಿಂದಲೇ ನಿಂತಿವೆ.

೫೨. ಈ ಗೋವುಗಳು ಮಂತ್ರಪೂತವಾದ ಹವಿಸ್ಸಿನಿಂದ ಸ್ವರ್ಗಲೋಕದಲ್ಲಿರುವ ದೇವತೆಗಳನ್ನೂ ಸಹ ತೃಪ್ತಿಪಡಿಸುತ್ತವೆ. ಋಷಿಗಳು ಅಗ್ನಿಹೋತ್ರ ಮಾಡುವ ಸಂದರ್ಭದಲ್ಲಿ ಹಸುಗಳನ್ನು ಕಟ್ಟದೆ ಇದ್ದರೆ ಯತ್ನವೇ ಇಲ್ಲ. ಹೋಮಕ್ಕೆ ಅತ್ಯವಶ್ಯಕವಾಗಿ ಹಸುವಿನ ತುಪ್ಪವು ಬೇಕೇ ಬೇಕಷ್ಟೆ?

೫೩. ಸಕಲ ಭೂತಗಳಿಗೂ ಗೋವುಗಳೇ ಸಂರಕ್ಷಕವಾದ ಪ್ರಾಣಿಗಳು. ಗೋವುಗಳು ಪರಮಪರಿಶುದ್ಧವಾದ ಪ್ರಾಣಿಗಳು. ಗೋವುಗಳು ಉತ್ತಮವಾದ ಮಂಗಳ ವಸ್ತುಗಳು.

**ಗಾವಃ ಸ್ವರ್ಗಸ್ಯ ಸೋಪಾನಂ ಗಾವೋ ಧನ್ಯಾಸ್ಸನಾತನಾಃ ॥**
**(ಓಂ) ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ॥ ೫೪ ॥**

**ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋನಮಃ ।**
**ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಸ್ಥಿತಂ ॥ ೫೫ ॥**

**ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ।**
**ದೇವಬ್ರಾಹ್ಮಣಗೋಸಾಧು ಸಾಧ್ವೀಭಿಃ ಸಕಲಂ ಜಗತ್ ॥ ೫೬ ॥**

---

೫೪. ಗೋವುಗಳೆಂಬುವು ಸ್ವರ್ಗಕ್ಕೆ ಹತ್ತುವ ಸೋಪಾನಗಳು. ಸನಾತನ ಕಾಲದಿಂದ ಗೋವುಗಳೇ ಧನ್ಯಪ್ರಾಣಿಗಳೆಂದು ಹೆಸರಾಂತಿವೆ. ಇಲ್ಲಿಂದ ಮುಂದೆ ಬರೆದಿರುವ ನಾಲ್ಕು ಶ್ಲೋಕಗಳಿಗೂ ಗೋಮತೀ ಮಂತ್ರಗಳೆಂದು ಹೆಸರು. ಅದನ್ನು ಪ್ರತಿಯೊಬ್ಬರೂ ಪಾರಾಯಣ (ಜಪ) ಮಾಡಬೇಕು. ಸಂಸ್ಕೃತದಲ್ಲಿ (ಮೂಲದಲ್ಲಿ) ಮೇಲುಗಡೆ ಬರೆದಿರುವ ಆ ಶ್ಲೋಕಗಳನ್ನು ನೋಡಿರಿ. ಅದರ ಅರ್ಥವನ್ನು ಇಲ್ಲಿ ವಿವರಿಸುವೆನು :—ಓಂ ನಮೋ ಗೋಭ್ಯಃ ಶ್ರೀಮತೀಭ್ಯಃ ಎಂದು ಆರಂಭವಾಗುವ ಮಂತ್ರಗಳನ್ನು ಶ್ರದ್ಧೆಯಿಂದ ಪಠಿಸಿ ಪುಣ್ಯಾತ್ಮರಾಗಿರಿ. ಸಂಪತ್ಸೌಭಾಗ್ಯಗಳಿಂದಲೂ, ಪರಿಮಳಗಂಧಗಳಿಂದಲೂ ಪ್ರಕಾಶಿಸುತಲಿರುವ ಗೋಮಾತೆಯರಿರಾ! ನಿಮಗೆ ನಮಸ್ಕಾರ ಮಾಡುತ್ತೇನೆ.

೫೫. ಬ್ರಹ್ಮನ ಹೆಣ್ಣುಮಕ್ಕಳಾದ ಪೂಜ್ಯಗೋಮಾತೆಯರಿರಾ! ನಿಮಗೆ ಅನೇಕಾನೇಕ ಪ್ರಣಾಮಗಳು. ಬ್ರಾಹ್ಮಣರೂ, ಗೋವುಗಳೂ ಒಂದೇ ಕುಲಕ್ಕೆ ಸೇರಿದವರಾದರೂ ಬೇರೆ ಬೇರೆ ರೂಪವಾಗಿ ವಿಂಗಡಿಸಲ್ಪಟ್ಟಿರುವರು.

೫೬. ಮಂತ್ರಗಳೊಂದು ಕಡೆ ಪಠಿಸಲ್ಪಡುತ್ತವೆ. ಹವಿಸ್ಸು ಮತ್ತೊಂದು ಕಡೆ ಹೋಮಮಾಡಲ್ಪಡುತ್ತದೆ. ಮುಖ್ಯವಾಗಿ ಈ ಜಗತ್ತು ಸುಖವಾಗಿದೆಯೆಂದು ಹೇಳುವುದಾದರೆ ಆ ಸುಖವು ದೇವತೆಗಳು, ಬಾಹ್ಮಣರು, ಸಾಧುಗಳು, ಸಾಧ್ವಿಯರಿಂದಲೇ ಉತ್ಪತ್ತಿಯಾಗತಕ್ಕದ್ದೆಂದು ಖಂಡಿತವಾಗಿ ಎಲ್ಲ ಜನರೂ ತಿಳಿದಿರಬೇಕು.

ಧಾರ್ಯರ್ತೇ ವೈ ಸದಾ ತಸ್ಮಾತ್ಸರ್ವೇ ಪೂಜ್ಯತಮಾಃ ಸದಾ ।
ಯತ್ರ ತೀರ್ಥೇ ಸದಾ ಗಾವಃ ಪಿಬಂತಿ ತೃಷಿತಾ ಜಲಂ ॥
ಉತ್ತರಂತಿ ಪಥಾ ಯೇನ ಸ್ಥಿತಾ ತತ್ರ ಸರಸ್ವತೀ ॥ ೫೭ ॥

ಗವಾಂ ಹಿ ತೀರ್ಥೇ ವಸತೀಹಗಂಗಾ
ಪುಷ್ಟಿಸ್ತಥಾ ತದ್ರಜಸಿ ಪ್ರವೃದ್ಧಾ ।
ಲಕ್ಷ್ಮೀಃ ಕರೀಷೇ ಪ್ರಣತೌ ಚ ಧರ್ಮಃ
ತಾಸಾಂ ಪ್ರಣಾಮಂ ಸತತಂ ಚ ಕುರ್ಯಾತ್ ॥ ೫೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಗೋಮಾಹಾತ್ಮ್ಯೇ ಗೋಮತೀವಿದ್ಯಾ ನಾಮ ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

೫೭. ಭೂಮಿಯ ಸುಖಮಾತ್ರವಲ್ಲ. ಭೂಲೋಕವು ನಿಂತಿರುವುದೇ ಈ ನಾಲ್ಕರಿಂದಲೆಂದೂ ಸಹ ಭಾವಿಸಬೇಕು. ಆದ್ದರಿಂದ ಇವರೆಲ್ಲರೂ ಪೂಜ್ಯರೆಂದು ಒಟ್ಟುಗೂಡಿಸಿ ಹೇಳಿಬಿಟ್ಟಿದೇನೆ.

೫೮. ಯಾವ ತೀರ್ಥ (ಹೊಳೆ, ಸರೋವರ ಇತ್ಯಾದಿ ಜಲಾಶಯ) ದಲ್ಲಿ ಗೋವುಗಳು ನೀರು ಕುಡಿಯುವುವೋ, ಯಾವ ಜಲಾಶಯಗಳನ್ನು ಕಾಲು ನಡಿಗೆಯಿಂದ ದಾಟಿಕೊಂಡು ಹೋಗುವುವೋ ಅಲ್ಲಿ ಸರಸ್ವತೀ ನದಿಯು ಸನ್ನಿಹಿತಳಾಗಿರುತ್ತಾಳೆಂದು ತಿಳಿಯಬೇಕು. ಗೋವುಗಳು ಕುಡಿಯುವ ನೀರಿನಲ್ಲೇ ಗಂಗಾದೇವಿಯು ವಾಸಮಾಡುತ್ತಾಳೆ. ಅವುಗಳ ಕಾಲುಧೂಳುಗಳಲ್ಲಿ ಪುಷ್ಟಿಲಕ್ಷ್ಮಿಯೂ ಸಗಣಿಯ (ಬೆರಣಿಯ) ಲ್ಲಿ ಮಹಾಲಕ್ಷ್ಮಿಯೂ ಗೋನಮಸ್ಕಾರದಿಂದ ಧರ್ಮವೂ ವೃದ್ಧಿಯಾಗುವುವು. ಆದ್ದರಿಂದಲೇ ಯಾವಾಗಲೂ ಗೋವುಗಳಿಗೆ ನಮಸ್ಕಾರವನ್ನು ಮಾಡುತ್ತಲಿರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ ದ್ವಿತೀಯಖಂಡದಲ್ಲಿ ಗೋಮಾಹಾತ್ಮ್ಯೆಯಲ್ಲಿ ಗೋಮತೀ ವಿದ್ಯೆಯೆಂಬ ಹೆಸರಿನ ನಲವತ್ತೆರಡನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತ್ರಿಚತ್ವಾರಿಂಶತ್ತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಅತಃ ಪರಂ ಪ್ರವಕ್ಷ್ಯಾಮಿ ತವ ರಾಮ ಚಿಕಿತ್ಸಿತಂ ।**
**ಸಂಕ್ಷೇಪೇಣ ಗವಾಂ ಪುಣ್ಯಂ ಸಾರಭೂತಂ ಶೃಣುಷ್ವ ತತ್ ॥ ೧ ॥**

**ಶೃಂಗಮೂಲೇಷು ಧೇನೂನಾಂ ತೈಲಂ ದದ್ಯಾತ್ಸಸೈಂಧವಂ ।**
**ಶೃಂಗೀವೀರಬಲಾಮಾಂಸೀ ಕಲ್ಕಸಿದ್ಧಂ ಸಮಾಕ್ಷಿಕಂ ॥ ೨ ॥**

---

## ನಲವತ್ತಮೂರನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ :—ಎಲೈ ಪರಶುರಾಮನೇ ! ಇನ್ನು ಮುಂದೆ ನಿನಗೆ ಗೋವುಗಳಿಗೆ ಏನಾದರೂ ಉಪದ್ರವ ಸಂಭವಿಸಿದಾಗ ಮಾಡಬೇಕಾದ ಚಿಕಿತ್ಸಾ ಕ್ರಮವನ್ನು ಸಂಕ್ಷೇಪವಾಗಿ ವಿವರಿಸುತ್ತೇನೆ. ಈ ವಿಚಾರವು ವೈದ್ಯಸಾರಭೂತ ವಾದುದು, ಮತ್ತು ಸುಖಪ್ರದವಾದುದು.

೨. ಹಸುವಿಗೆ ಕೊಂಬಿನಲ್ಲಿ ಏನಾದರೂ ರೋಗ ಪ್ರಾಪ್ತವಾದರೆ ಕರ್ಕಾಟಕ ಶೃಂಗಿ, ಕಡಂಗಡ್ಲೆ ಬೇರು, ಜಟಾಮಾಂಸೀ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಜೇನುತುಪ್ಪದಲ್ಲಿ ಕಲಸಿ ಸೈಂಧವಲವಣವನ್ನು ಬೆರಸಿ ಅಚ್ಚೆಳ್ಳೆಣ್ಣೆಯಲ್ಲಿ ಸೇರಿಸಿ ಈ ತೈಲವನ್ನು ಕೊಂಬಿನ ಬುಡಕ್ಕೆ ಸವರುತ್ತಾ ಬಂದರೆ ಕೊಂಬಿನ ರೋಗ ಗುಣವಾಗಿ ದೃಢವಾಗುವುದು.

**ಸಿಮಿಚೂರ್ಣಯುತಂ ದೇಯಮಥವಾಽಪಿ ತಥಾ ಘೃತಂ ।**
**ಕರ್ಣಮೂಲೇಷು ಸರ್ವೇಷು ಮಂಜಿಷ್ಠಾಹಿಂಗುಸೈಂಧವೈಃ ॥ ೩ ॥**

**ಸಿದ್ಧಂ ತೈಲಂ ಪ್ರದಾತವ್ಯಂ ಗೋರಸೋ ವಾಥವಾ ಪುನಃ ।**
**ಮಾಕ್ಷಿಕಂ ಸೈಂಧವಂ ಶಂಖಂ ತಗರೀಂ ಪಿಪ್ಪಲೀಂ ಸಿಹಾಮ್ ॥ ೪ ॥**

**ಅಜಾಕ್ಷೀರೇಣ ಸಂಪೇಷ್ಯ ಗುಲಿಕಾಂ ಕಾರಯೇದ್ಭಿಷಕ್ ।**
**ಏತನ್ನೇತ್ರಾಂಜನಂ ಶ್ರೇಷ್ಠಂ ಘೃತಮಾಕ್ಷಿಕಸಂಯುತಂ ॥ ೫ ॥**

**ಬಿಲ್ವಮೂಲಮಪಾಮಾರ್ಗಂ ಧಾತಕೀಂ ಚ ಸಪಾಟಲಾಂ ।**
**ಕುಟಜಂ ದಂತಮೂಲೇಷು ಲೇಪಂ ತಚ್ಛೂಲನಾಶನಂ ॥ ೬ ॥**

---

೩. ಸಬ್ಬಸಿಗೆ ಬಿತ್ತವನ್ನು ಕುಟ್ಟಿ ಪುಡಿಮಾಡಿ ಮಂಜಿಷ್ಠೆ, ಇಂಗು, ಸೈಂಧವ ಲವಣದ ಪುಡಿಯೊಡನೆ ಈ ಪುಡಿಯನ್ನು ಬೆರಸಿ ತುಪ್ಪದ ಹಾಗೆ ಮಾಡಿ ಕಾಯಿಸಿ ಹಸುವಿನ ಕಿವಿಗೆ ಬಿಟ್ಟರೆ ಕರ್ಣಸಂಬಂಧವಾದ ರೋಗಗಳು ಪರಿಹಾರವಾಗುವುವು.

೪-೫. ಇನ್ನು ನೇತ್ರರೋಗದ ಔಷಧವನ್ನು ಹೇಳುತ್ತೇನೆ :— ಹಸುವಿನ ಹಾಲು, ಜೇನುತುಪ್ಪ, ಅಚ್ಚೆಳ್ಳೆಣ್ಣೆ, ಸೈಂಧವಲವಣ, ಶಂಖ, ತೊಗರಿಬೇಳೆ, ಹಿಪ್ಪಲಿಗಳನ್ನು ತೇದು ಒಟ್ಟಿಗೆ ಕಲಿಸಿ ಆಡಿನ ಹಾಲಿನಿಂದ ಅರೆದು ಮಾತ್ರೆಗಳನ್ನು ಮಾಡಬೇಕು. ಈ ಮಾತ್ರೆಗಳನ್ನು ತೇದು ಹಸುವಿನ ತುಪ್ಪ, ಜೇನುತುಪ್ಪದಲ್ಲಿ ಕಲಸಿ ಅದನ್ನು ಹಸುವಿನ ಕಣ್ಣಿಗೆ ಹಚ್ಚಿದರೆ ಸಕಲ ವಿಧವಾದ ನೇತ್ರರೋಗಗಳೂ ಪರಿಹಾರವಾಗುವುವು.

೬. ಬಿಲ್ವಪತ್ರೆಬೇರು, ಉತ್ತರಣೆಬೇರು, ಧಾತಕೀ ಕುಸುಮ ಅಥವಾ ಬೇರು, ಪಾದರೀ ಬೇರು, ಕೊಡಸಿಗೇ ಬೀಜಗಳನ್ನು ಪುಡಿಮಾಡಿ, ಆ ಪುಡಿಯನ್ನು ಹಸುಗಳ ಹಲ್ಲುಗಳ ಬುಡದಲ್ಲಿ ಲೇಪನಮಾಡಿದರೆ ದಂತಶೂಲವು ಪರಿಹಾರವಾಗುವುದು.

ದಂತಶೂಲಹರೈರ್ದ್ರವ್ಯೈರ್ಘೃತಂ ರಾಮ ವಿಪಾಚಿತಂ ।
ಮುಖರೋಗಹರಂ ಜ್ಞೇಯಂ ಜಿಹ್ವಾರೋಗೇಷು ಸೈಂಧವಂ ॥ ೭ ॥

ಶೃಂಗವೇರಂ ಹರಿದ್ರೇ ದ್ವೇ ತ್ರಿಫಲಾಂ ಚ ಗಲಗ್ರಹೇ ।
ಶೃಂಗವೇರಂ ಹರಿದ್ರೇ ದ್ವೇ ವಲ್ಕಲಂ ಕುಟಜಸ್ಯ ಚ ॥ ೮ ॥

ಅಪಾಮಾರ್ಗವಿಡಂಗಾಂಶ್ಚ ಲವಣೇನ ವಿಮಿಶ್ರಿತಂ ।
ಔಷಧಂ ಮುಖರೋಗಘ್ನಂ ಜ್ವರದಾಹವಿನಾಶನಂ ॥ ೯ ॥

ಹೃಚ್ಛೂಲೇ ಬಸ್ತಿಶೂಲೇ ಚ ವಾತರೋಗೇ ಕ್ಷತೇ ತಥಾ ।
ತ್ರಿಫಲಾಘೃತಸಂಮಿಶ್ರಂ ಗವಾಂ ಪಾನಂ ಪ್ರಶಸ್ಯತೇ ॥ ೧೦ ॥

---

೭. ಇನ್ನು ಮುಖರೋಗ, ಜಿಹ್ವಾರೋಗಗಳ ಔಷಧವನ್ನು ಹೇಳುತ್ತೇನೆ. ಕೇಳು. ಮೇಲಿನ ಶ್ಲೋಕದಲ್ಲಿ ವಿವರಿಸಿದ ದಂತರೋಗದ ದ್ರವ್ಯಗಳನ್ನೇ ಒಟ್ಟು ಗೂಡಿಸಿ ತುಪ್ಪದಲ್ಲಿ ಹಾಕಿ ಕಾಯಿಸಿ, ಅದು ಘಟ್ಟಿಯಾದ ಮೇಲೆ ಅದನ್ನು ಮುಖ ರೋಗಗಳಿಗೆ ಉಪಯೋಗಿಸಿದರೆ ಗುಣವಾಗುವುದು. ಇದೇ ಔಷಧಕ್ಕೆ ಸೈಂಧವಲವಣ ವನ್ನು ಪುಡಿಮಾಡಿ ಬೆರಸಿ ನಾಲಿಗೆಗೆ ಲೇಪಿಸಿದರೆ ಜಿಹ್ವಾಸಂಬಂಧವಾದ ರೋಗಗಳು ಗುಣವಾಗುವುವು.

೮-೯. ಹಸುಗಳಿಗೆ ಮುಖವು ದದ್ದರಿಸಿಕೊಂಡು ಬಾಯಿಜ್ವರವು ಸಂಭವಿಸಿದಾಗ ಹಸಿಶುಂಠಿ, ಅರಿಶಿನ, ಮರದರಿಶಿನ, ನೆಲ್ಲಿಕಾಯಿ, ತಾರೇಕಾಯಿ, ಅಳಲೇಕಾಯಿ, ಕೊಡಸಿಗೇಗಿಡದ ಚಕ್ಕೆ, ಉತ್ತರಣೆ ಬೇರು, ವಾಯುವಿಳಂಗ, ಉಪ್ಪುಗಳನ್ನು ಬೆರಸಿ ಕುಟ್ಟಿ ಪುಡಿಮಾಡಿ ಈ ಚೂರ್ಣವನ್ನು ಹಸುವಿಗೆ ಕೊಟ್ಟರೆ ಜ್ವರದಿಂದುಂಟಾದ ದಾಹವೂ ಹಸುಗಳ ಬಾಯಿಜ್ವರವೂ ಸಹ ಗುಣವಾಗುವುದು.

೧೦. ಎದೆನೋವು, ಹೊಟ್ಟೇನೋವು, ವಾಯುರೋಗಗಳು, ಗಾಯಗಳು ಉಂಟಾದ ಸಂದರ್ಭದಲ್ಲಿ ತ್ರಿಫಲಿಯನ್ನು ಪುಡಿಮಾಡಿ ತುಪ್ಪದೊಡನೆ ಕಲಸಿ, ಅದನ್ನು ತಿನ್ನಿಸಿದರೆ ಅಥವಾ ಲೇಪಿಸಿದರೆ ಈ ರೋಗಗಳು ಗುಣವಾಗುವುವು. (ತ್ರಿಫಲಾ ಎಂದರೆ ತಾರೇಕಾಯಿ, ನೆಲ್ಲೀಕಾಯಿ, ಅಳಲೇಕಾಯಿಗಳೆಂದು ಅರ್ಥಮಾಡಿ ಕೊಳ್ಳುವುದು.) ಇನ್ನು ಮುಂದೆ ಅನೇಕ ಕಡೆ ಈ ತ್ರಿಫಲಿ ಯೆಂಬ ಪದವು ಬರುತ್ತಲೇ ಇರುವುದು.

ಶತಪುಷ್ಪಾಯುತಂ ಪಕ್ವಂ ತೈಲಂ ಕುಟಜಚಿತ್ರಕೈಃ ।
ಗವಾಂ ರಾಮ ಪ್ರದಾತವ್ಯಂ ಸರ್ವಹೃದ್ರೋಗನಾಶನಂ ॥ ೧೧ ॥

ಅತಿಸಾರೇ ಹರಿದ್ರೇ ದ್ವೇ ಪಾಠಾಂ ಚೈವ ಪ್ರದಾಪಯೇತ್ ।
ಆನಾಹೇ ಘೃತಸಂಯುಕ್ತಾಂ ದಾಪಯೇತ್ಪದ್ಮಚಾರಿಣೀಂ ॥ ೧೨ ॥

ಸರ್ವೇಷು ಕುಷ್ಠರೋಗೇಷು ತಥಾ ಶಾಖಾಗದೇಷು ಚ ।
ಶೃಂಗವೇರಂ ಚ ದಾರ್ವೀಂ ಚ ಕಾಸೇ ಶ್ವಾಸೇ ಪ್ರದಾಪಯೇತ್ ॥ ೧೩ ॥

ದಾತವ್ಯಾ ಭಗ್ನಸಂಧಾನೇ ಪ್ರಿಯಂಗುರ್ಲವಣಾನ್ವಿತಾ ।
ವಾತರೋಗೇಷು ಸರ್ವೇಷು ಶತಪುಷ್ಪಾವಿಪಾಚಿತಂ ॥ ೧೪ ॥

---

೧೧. ಸಬ್ಬಸಿಗೆ ಸಪ್ಪಿನ ರಸವನ್ನು ಎಣ್ಣೆಗೆ ಬೆರಸಿ ಕೊಡಸಿಗೆಬೀಜ ಚಿತ್ರ ಮೂಲದ ಬೇರನ್ನು ಕುಟ್ಟಿ ಪುಡಿಮಾಡಿ ಆ ಚೂರ್ಣವನ್ನು ಆ ತೈಲಕ್ಕೆ ಬೆರಸಿ ಹಸುಗಳಿಗೆ ಕೊಟ್ಟರೆ ಸಕಲವಿಧವಾದ ಹೃದಯರೋಗಗಳೂ ಗುಣವಾಗುವುವು.

೧೨. ಅಗಿಲುಶುಂಠಿ, ಅರಿಶಿನ, ಮರದರಿಶಿನಗಳನ್ನು ಪುಡಿಮಾಡಿ ಆ ಚೂರ್ಣವನ್ನು ಹಸುಗಳಿಗೆ ತಿನ್ನಿಸಿದರೆ ಅತಿಸಾರ (ಉಚ್ಚಿಕೊಳ್ಳುವುದು) ರೋಗವು ಗುಣವಾಗುವುದು (ಭೇದಿ ನಿಲ್ಲುವುದು). ಹಸುಗಳಿಗೆ ಹೊಟ್ಟೆ ಏನಾದರೂ ಉಬ್ಬರಿಸಿಕೊಂಡಿದ್ದರೆ ತಾವರೇಬೀಜವನ್ನು ಪುಡಿಮಾಡಿ ತುಪ್ಪದಲ್ಲಿ ಕಲಸಿ ತಿನ್ನಿಸಿದರೆ ಹೊಟ್ಟೆಯುಬ್ಬರವಿಳಿದು ಸುಖವಾಗಿ ಸಗಣಿ ಹಾಕುವುದು.

೧೩. ಕುಷ್ಠರೋಗ ಸಂಬಂಧವಾದ ಉಪರೋಗಗಳು ಪ್ರಾಪ್ತವಾಗಿರುವಾಗ ಮತ್ತು ಖಾಸಶ್ವಾಸರೋಗಗಳು ಸಂಭವಿಸಿದಾಗ ಮರದರಶಿನವನ್ನು ಪುಡಿಮಾಡಿ ಹಸೀ ಶುಂಠಿ ರಸದಲ್ಲಿ ಕಲಸಿ ತಿನ್ನಿಸಿದರೆ ಮೇಲ್ಕಂಡ ಸಕಲ ರೋಗಗಳೂ ಗುಣವಾಗುವುವು.

೧೪. ಹಸುಗಳ ಎಲುಬು, ಮೂಳೆ ಮುಂತಾದುವು ಮುರಿದು ಹೋಗಿದ್ದರೆ ಇಂಗನ್ನೂ, ಉಪ್ಪನ್ನೂ ಪುಡಿಮಾಡಿ ಕಲಸಿ ಆ ಜಾಗಕ್ಕೆ ಕಟ್ಟಬೇಕು. ಸಬ್ಬಸಿಗೆ ಸಪ್ಪಿನ ರಸದಲ್ಲಿ ಅದನ್ನು ಬೆರಸಿ ವಾತರೋಗಗಳಿಗೆ ಪ್ರಯೋಗಿಸಿದರೆ ಅದು ಗುಣವಾಗುವುದು.

**ಗವಾಂ ತೈಲಂ ಪ್ರದಾತವ್ಯಂ ಸರ್ವವಾತಗದಾಪಹಂ ।**
**ಯೂಷಣಂ ಮಧುಸಂಮಿಶ್ರಂ ಕಫರೋಗೇಷು ದಾಪಯೇತ್ । ॥ ೧೫ ॥**

**ಪಿತ್ತರೋಗೇಷು ಸರ್ವೇಷು ಮಧುಯಷ್ಟಿವಿಪಾಚಿತಂ ।**
**ಗವ್ಯಮಾಜ್ಯಂ ಪ್ರದಾತವ್ಯಂ ಸರ್ವಪಿತ್ತಗದಾಪಹಂ ॥ ೧೬ ॥**

**ಶಾಖೋಟಕರಸಾಪಾನಂ ರಕ್ತಪಿತ್ತೇ ಪ್ರಶಸ್ಯತೇ ।**
**ಗೋಧೂಮಾನಾಂ ಚ ಚೂರ್ಣಾನಿ ಮಾಷಾಶ್ಚೈವ ಸಸರ್ಷಪಾಃ ॥ ೧೭ ॥**

**ಪಯಸಾ ಚ ಸಮಾಲೋಡ್ಯ ಗುರುಮಿಶ್ರಾಃ ಪ್ರದಾಪಯೇತ್ ।**
**ರಕ್ತಸ್ರಾವೇಷು ಕೃಚ್ಛ್ರೇಷು ಗವಾಮೇತತ್ಪ್ರಶಸ್ಯತೇ ॥ ೧೮ ॥**

**ತಿಲಾಂಭಕರುಹಾಂಶ್ಚೈವ ಹರಿತಾಲಂ ಘೃತಂ ತಥಾ ।**
**ಭಗ್ನಕ್ಷತಾನಾಂ ಧೇನೂನಾಂ ಲೇಪನೇ ತತ್ಪ್ರಶಸ್ಯತೇ ॥ ೧೯ ॥**

---

೧೫. ಹಸುಗಳಿಗೆ ಕಫ (ಶ್ಲೇಷ್ಮ) ಸಂಬಂಧವಾದ ರೋಗಗಳಿದ್ದರೆ ಎಣ್ಣೆ ಕುಡಿಸಬೇಕು ಮತ್ತು ಸಕಲ ವಿಧವಾದ ವಾತರೋಗಗಳಿದ್ದರೂ ಸಹ ಹಿಪ್ಪಲಿ, ಮೆಣಸು, ಶುಂಠಿಗಳನ್ನು ಪುಡಿಮಾಡಿ ಜೇನುತುಪ್ಪದಲ್ಲಿ ಕಲಸಿ ತಿನ್ನಿಸಿದರೆ ಈ ರೋಗಗಳೆಲ್ಲಾ ಗುಣವಾಗುವುವು.

೧೬. ಹಸುಗಳಿಗೆ ರಕ್ತಪಿತ್ತವೇನಾದರೂ ಪ್ರಾಪ್ತವಾದರೆ ಆಡುಸೋಗೆ ಸಪ್ಪಿನ ರಸವನ್ನು ಕುಡಿಸಿದರೆ ಅದು ಪರಿಹಾರವಾಗುತ್ತದೆ.

೧೭-೧೮. ಗೋಧೀಹಿಟ್ಟು, ಉದ್ದಿನಹಿಟ್ಟು, ಸಾಸುವೇಪುಡಿ ಇವುಗಳನ್ನು ಬೆರಸಿ ಅದನ್ನು ಹಾಲಿಗೆ ಹಾಕಿ ಚೆನ್ನಾಗಿ ಕಲಕಿ ಅದು ಘಟ್ಟಿಯಾಗುವಂತೆ ಮಾಡಿ ಅದನ್ನು ಹಸುಗಳಿಗೆ ಕುಡಿಸಿದರೆ ರಕ್ತಸ್ರಾವವಾಗುವುದು ನಿಂತುಹೋಗುತ್ತದೆ.

೧೯. ಹಸುಗಳಿಗೆ ಮೈಯಲ್ಲೆಲ್ಲಾದರೂ ಯಾವ ವಿಧವಾದ ಗಾಯವುಂಟಾದರೆ ಎಳ್ಳು, ತಾವರೇಬೀಜ, ಅರಿದಳಗಳನ್ನು ಪುಡಿಮಾಡಿ ಕಲಸಿ ಏಟಿನಿಂದ ಗಾಯವಾದ ಜಾಗಕ್ಕೆ ಲೇಪನ ಮಾಡಿದರೆ ನೋವು ಕಡಿಮೆಯಾಗುವುದಲ್ಲದೆ ಗಾಯವೂ ಬೇಗ ಮಾಯುತ್ತದೆ.

**ವತ್ಸಾನಾಂ ಚ ಸರೋಗಾಣಾಂ ಪಾತಾಂ ತಕ್ರೇಣ ಪಾಯಯೇತ್ ।**
**ಹರಿದ್ರಾಂ ಕ್ಷೀರಸಂಯುಕ್ತಾಂ ಅಥವಾ ರೋಗಶಾಂತಯೇ ॥ ೨೦ ॥**

**ಮಾಷಾಸ್ತಿಲಾಃ ಸಗೋಧೂಮಾಃ ಪಶುಕ್ಷೀರಂ ಘೃತಂ ತಥಾ ।**
**ಏಷಾಂ ಪಿಂಡಾಃ ಪ್ರದಾತವ್ಯಾಃ ಲವಣೇನ ಸುಸಂಸ್ಕೃತಾಃ**
**ಪುಷ್ಟಿಪ್ರದಾತು ವತ್ಸಾನಾಂ ವೃಷಭಾಣಾಂ ಬಲಪ್ರದಾ ॥ ೨೧ ॥**

**ದೇವದಾರುವಚಾಮಾಂಸೀ ಗುಗ್ಗುಲುರ್ಹಿಂಗುಸರ್ಷಪಾಃ ।**
**ಏಷಧೂಪಃ ಪ್ರದಾತವ್ಯಃ ಕಿಂಚಿದ್ಘೃತಪರಿಪ್ಲುತಃ ॥ ೨೨ ॥**

**ಸರ್ವಗ್ರಹವಿನಾಶಾಯ ಪಲಂಕಷಯುತಃ ಶುಭಃ ।**
**ಘಂಟಾ ಚಾಪಿ ಗವಾಂ ಕಾರ್ಯಾ ಧೂಪೇನಾನೇನ ಧೂಪಿತಾ ॥ ೨೩ ॥**

---

೨೦. ಕರುಗಳಿಗೇನಾದರೂ ಖಾಯಿಲೆಯುಂಟಾದರೆ ಅಗಿಲುಶುಂಠಿಯನ್ನು ಗಂಧದ ಕಲ್ಲಿನಮೇಲೆ ತೇದು ಅದನ್ನು ಮಜ್ಜಿಗೆಗೆ ಬೆರಸಿ ಕುಡಿಸಿದರೆ ಕರುಗಳಿಗೆ ಯಾವ ವಿಧವಾದ ರೋಗವಿದ್ದರೂ ವಾಸಿಯಾಗುತ್ತವೆ. ಅಥವಾ ಹಾಲಿಗೆ ಅರಶಿನದಪುಡಿ ಬೆರಸಿ ಚೆನ್ನಾಗಿ ಕಲಸಿ ಅದನ್ನು ಕುಡಿಸಿದಾಗ್ಲೂ ಸಕಲ ರೋಗಗಳೂ ಪರಿಹಾರ ವಾಗುವುವು.

೨೧. ಹೆಂಗರುಗಳೂ, ಹೋರಿಗಳೂ ಮೈತುಂಬದೆ ಕಂಗೆಟ್ಟುಕೊಂಡಿದ್ದರೆ ಉದ್ದು, ಎಳ್ಳು, ಗೋಧಿಗಳ ಹಿಟ್ಟನ್ನು ಹಸುವಿನ ಹಾಲಲ್ಲಿ ಕಲಸಿ ಅದಕ್ಕೆ ತುಪ್ಪವನ್ನೂ, ಉಪ್ಪಿನ ಪುಡಿಯನ್ನೂ ಸೇರಿಸಿ ಉಂಡೆಗಳನ್ನಾಗಿ ಮಾಡಿಕೊಂಡು ಕರುಗಳಿಗೆ ತಿನ್ನಿಸುತ್ತಾ ಬಂದರೆ ಮೈತುಂಬಿಕೊಳ್ಳುವುವು. ಇದನ್ನು ಎತ್ತುಗಳಿಗೂ ಕೊಡಬಹುದು.

೨೨-೨೩. ದೇವದಾರು, ಬಜೆ, ಜಟಾಮಾಂಸೀ, ಗುಗ್ಗುಲು, ಇಂಗು, ಸಾಸುವೆ ಇವುಗಳನ್ನು ಪುಡಿಮಾಡಿ ತುಪ್ಪದಲ್ಲಿ ಕಲಸಿ ಬೆಂಕಿಯಮೇಲೆ ಧೂಪದ ಹೊಗೆ ಕೊಟ್ಟರೆ ಸಕಲ ಗ್ರಹಗಳ ಬಾಧೆಯೂ ನಾಶವಾಗುವುದು. ನೆಗ್ಗಿಲು ಮುಳ್ಳನ್ನು ಆ ಧೂಪಕ್ಕೆ ಹಾಕಿದರೆ ಇನ್ನೂ ಒಳ್ಳೆಯದು. ಈ ಧೂಪ ಹಾಕುವಾಗ ಹಸುಗಳ ಕತ್ತಿಗೆ ಗಂಟೆಯನ್ನು ಕಟ್ಟಬೇಕು. ಗಂಟೆಯ ಸದ್ದಿಗೂ ಧೂಪದ ವಾಸನೆಗೂ ಗ್ರಹಗಳು ಸದ್ದುಮಾಡದೆ ಓಡಿಹೋಗುವುವು.

**ಅಶ್ವಗಂಧಾ ತಿಲಂ ಚುಕ್ರಂ ವಸ್ತಿಯೋಗೇ ಪ್ರಶಸ್ಯತೇ ।**
**ಆಶ್ವಗಂಧಾಯುತಂ ತಕ್ರಂ ತಿಲಾನ್ವಸ್ತಿ ಪ್ರಶಸ್ಯತೇ ॥**
**ಭವತಿ ಕ್ಷೀರಿಣೀ ತೇನ ಧೇನುರ್ಭೃಗುಕುಲೋದ್ಭವ ॥ ೨೪ ॥**

**ಪಿಣ್ಯಾಕಮೇವ ನಿರ್ದಿಷ್ಟಂ ಗವಾಂ ರಾಮ ರಸಾಯನಂ ।**
**ಶೀತೋದಪಾನಮಾದ್ರ್ರಂಚ ಯುವಸಂ ಚ ವಿವರ್ಜಯೇತ್ ॥ ೨೫ ॥**

**ಜರಾನ್ವಿತಾ ತಥಾ ಸ್ಥಾನಂ ತಚ್ಚ ಶೀತಂ ದ್ವಿಜೋತ್ತಮ ।**
**ಧಾರ್ಯಂ ಚೈವ ಗವಾಂ ಮಧ್ಯೇ ಮತ್ತೋಜಃ ಸರ್ವಥಾ ಭವೇತ್ ॥ ೨೬ ॥**

**ಗವಾಂ ವೇಶ್ಮನಿ ದೀಪಾಸ್ತು ದಾತವ್ಯಾ ರಾಮ ರಾತ್ರಿಕಾಃ ॥ ೨೭ ॥**

**ಗವಾಂಹಿರೋಗೋಪಶಮಾಯ ಶಸ್ತಂ**
**ಗತೇಽರ್ಧಮಾಸೇ ಲವಣಂ ಸದೈವ**

---

೨೪. ಹಿರೀಮದ್ದಿನಬೇರು, ಎಳ್ಳು. ಬಚ್ಚಲ ಹುಣಿಸೇಬೀಜಗಳನ್ನು ಪುಡಿ ಮಾಡಿ ಹಸೀ ಬತ್ತಿಮಾಡಿ ಒಣಗಿಸಿ, ಆ ಬತ್ತಿಯ ಧೂಪವನ್ನು ಹಾಕಿದರೂ ಗ್ರಹಬಾಧಾನಿವಾರಣೆಯಾಗುವುದು. ಹಿರೀಮದ್ದಿನ ಬೇರನ್ನು ಜಜ್ಜಿ, ಮಜ್ಜಿಗೆಗೆ ಬೆರಸಿ, ಅದಕ್ಕೆ ಎಳ್ಳುಹುಡಿ ಹಾಕಿ, ಇದನ್ನು ಹಸುಗಳಿಗೆ ಕೊಟ್ಟರೆ ಹಾಲು ಕೊಡದೆ ಇದ್ದ ಹಸುಗಳೆಲ್ಲಾ ತುಂಬಾ ಹಾಲು ಕೊಡುತ್ತವೆ.

೨೫. ಯಾವ ಕಾಯಿಲೆಯು ಬಂದಾಗ್ಲೂ ಹಸುಗಳಿಗೆ ಎಳ್ಳಿನ ಹಿಂಡಿಯನ್ನು ತಿನ್ನಿಸಿದರೆ ಅದು ಒಳ್ಳೆಯ ರಸಾಯನ (ಔಷಧ)ದಂತೆ ಗುಣಕೊಡುವುದು. ಹಸುಗಳಿಗೆ ಮೈ ಚೆನ್ನಾಗಿಲ್ಲದಿರುವಾಗ ಹುಲ್ಲನ್ನು ಹಾಕಬಾರದು. ನೀರನ್ನೂ ಸಹ ಕುಡಿಸಬಾರದು.

೨೬. ಮುದಿಹಸುವಿಗೆ ಸ್ಥಾನವನ್ನು ಬದಲಾಯಿಸಬೇಕು. ಅದನ್ನು ತಂಪಾದ ಜಾಗದಲ್ಲಿ ಕಟ್ಟಬೇಕು. ಹಸುಗಳ ಜಾಗದಲ್ಲಿ ಒಳ್ಳೇ ಕೊಬ್ಬಿದ ಆಡನ್ನು ಕಟ್ಟಿದರೆ, ಮುದಿ ಹಸುವಾದಾಗ್ಲೂ ಅದೂ ಸಹ ಯೌವನಭರಿತವಾಗುತ್ತದೆ.

೨೭. ರಾತ್ರಿಯ ವೇಳೆಯಲ್ಲಿ ಹಸುವಿನ ಗೊಂತಿನಲ್ಲಿ ದೀಪಗಳನ್ನು ಹತ್ತಿಸಿಡಬೇಕು. ಗೋವುಗಳಿಗೆ ಖಾಯಿಲೆ ವಾಸಿಯಾಗಿ ಹದಿನೈದು ದಿವಸ ಕಳೆದ ಮೇಲೆ

**ಅನಾಹಶೂಲಾರುಚಿನಾಶನಂ ತತ್**
**ಅಜಾವಿಕಸ್ಯಾಪಿ ತಥಾ ಪ್ರಶಸ್ತಂ ॥ ೨೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಗೋಚಿಕಿತ್ಸಿತಂ ನಾಮ ತ್ರಿಚತ್ವಾರಿಂಶತ್ತಮೋಽಧ್ಯಾಯಃ**

---

ಉಪ್ಪನ್ನು ತಿನ್ನಿಸುವುದು ಒಳ್ಳೆಯದು. ಹಸುಗಳಿಗೆ ಹೊಟ್ಟೆ ಉಬ್ಬರಿಸಿಕೊಳ್ಳುವುದು, ಇತರ ರೋಗಗಳು, ಅರೋಚಕಗಳಿಗೆ ಯಾವ ಔಷಧಗಳನ್ನು ಉಪಯೋಗಿಸಬಹುದೋ, ಆ ಔಷಧಗಳನ್ನೇ ಆಡುಗಳಿಗೂ ಅದೇ ಕಾಹಿಲೆಗೆ ಉಪಯೋಗಿಸಬಹುದು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಎರಡನೆಯ ಖಂಡದಲ್ಲಿ ಗೋಚಿಕಿತ್ಸೆಯೆಂಬ ಹೆಸರಿನ ನಲವತ್ತಮೂರನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

---

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

---

### ಪುಷ್ಕರ ಉವಾಚ

**ಅತಃ ಪರಂ ಪ್ರವಕ್ಷ್ಯಾಮಿ ಶಾಂತಿಕರ್ಮ ಗವಾಂ ತವ ।**
**ನಿತ್ಯಂ ನೈಮಿತ್ತಿಕಂ ಕಾಮ್ಯಂ ತಥಾ ಪುಷ್ಟಿವಿವರ್ಧನಂ ॥ ೧ ॥**

**ಪಂಚಮೀಷು ಚ ಶುಕ್ಲಾಸು ಶ್ರಿಯಃ ಪೂಜಾ ವಿಧೀಯತೇ ।**
**ಗವಾಂ ಪುರೀಷೇ ಧರ್ಮಜ್ಞ ಧೂಪದೀಪಾನ್ನಸಂಪದಾ ॥ ೨ ॥**

---

### ನಲವತ್ತನಾಲ್ಕನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಇನ್ನು ಇಲ್ಲಿಂದ ಮುಂದಕ್ಕೆ ಗೋವುಗಳಿಗೋಸ್ಕರ ಮಾಡತಕ್ಕ ನಿತ್ಯನೈಮಿತ್ತಿಕಕಾಮ್ಯ, ಮತ್ತು ಪುಷ್ಟಿವರ್ಧನಗಳಾದ ಶಾಂತಿಕರ್ಮಗಳನ್ನು ಹೇಳುತ್ತೇನೆ, ಕೇಳು.

೨. ಪ್ರತಿತಿಂಗಳ ಶುಕ್ಲಪಕ್ಷದ ಪಂಚಮಿಯ ದಿವಸ ಲಕ್ಷ್ಮೀಪೂಜೆಯನ್ನು ಮಾಡಬೇಕು. ಈ ಪೂಜೆಯನ್ನು ಹಸುಗಳ ಸಗಣಿಯಲ್ಲಿ ಲಕ್ಷ್ಮೀ ಆಕಾರವನ್ನು ಮಾಡಿ ಅದನ್ನು ಮುಂದಿಟ್ಟುಕೊಂಡು ಅದರಲ್ಲಿ ಲಕ್ಷ್ಮಿಯನ್ನಾವಾಹಿಸಿ ಪೂಜಿಸಬೇಕು.

ಟಿಪ್ಪಣಿ: ಗಣೇಶನ ಪೂಜೆಗೂ, ಬಲಿಪಾಡ್ಯಮಿ ದಿನ ಮಾಡುವ ಬಲೀಂದ್ರ (ಕೆರಕ) ಪೂಜೆಗೂ ಸಗಣಿ ಉಂಡೆಗಳಲ್ಲಿ ಬೇರೆ ಬೇರೆ ಆಕಾರ ಬರೆದು, ಅದಕ್ಕೆ ಗರಿಕೆಯನ್ನೂ ನಾನಾ ವಿಧವಾದ ಹೂಗಳನ್ನೂ ಸಿಕ್ಕಿಸಿ ಪೂಜೆಮಾಡುವ ಕ್ರಮವು ಇಂದಿಗೂ ನಡೆದು ಬರುತ್ತಿರುವುದು ಎಲ್ಲರಿಗೂ ತಿಳಿದೇ ಇದೆ.

**ವನ್ಯೈಃ ಸುಕುಸುಮೈರ್ಭಕ್ತ್ಯಾ ಬ್ರಾಹ್ಮಣಾನಾಂ ಚ ಪೂಜನಂ ।**
**ತತ್ರೈವಾಹನಿ ಕರ್ತವ್ಯಂ ವಾಸುದೇವಸ್ಯ ಪೂಜನಂ ॥ ೩ ॥**

**ಸ ಹಿ ಸರ್ವಗತೋ ದೇವಃ ಕ್ಷೀರೋದಧಿನಿಕೇತನಃ ।**
**ತ್ರೈಲೋಕ್ಯಾಧಾರಭೂತಾನಾಂ ವಿಶೇಷೇಣ ತಥಾ ಗವಾಂ ॥ ೪ ॥**

**ಆಶ್ವಯುಕ್ಶುಕ್ಲಪಕ್ಷಸ್ಯ ಪಂಚದಶ್ಯಾಂ ಭೃಗೂತ್ತಮ ।**
**ವೃತ್ರಾಂತಕಸ್ಯ ಕರ್ತವ್ಯಸ್ತದಾ ಯಾಗಸ್ತು ಗೋಮತಾ ॥ ೫ ॥**

**ಗಂಧಧೂಪನಮಸ್ಕಾರಪುಷ್ಪದೀಪಾನ್ನಸಂಪದಾ ।**
**ಇಹ ಪ್ರಜಾಯಾಃ ಸಾಮ್ರಾಧಃ ಪೃಷದಶ್ವಾ ತಥೈವ ಚ ॥ ೬ ॥**

---

೩. ಹೊರಗಡೆಯಿಂದ ಪತ್ರಪುಷ್ಪಾದಿಗಳಿನ್ನು ಸಂಗ್ರಹಿಸಿಕೊಂಡು ಬಂದು ಧೂಪದೀಪನೈವೇದ್ಯಾದಿಷೋಡಶೋಪಚಾರಗಳಿಂದ ಪೂಜಿಸಿ ಬಳಿಕ ಬ್ರಾಹ್ಮಣರಿಗೆ ಉಪಾಯನದಾನವನ್ನು ಕೊಡಬೇಕು. ಮತ್ತು ಅದೇ ದಿವಸ ಮಹಾವಿಷ್ಣುವನ್ನು ಸಹಾ ಪೂಜಿಸಬೇಕು.

೪. ಕ್ಷೀರಸಮುದ್ರದಲ್ಲಿ ವಾಸಮಾಡುತ್ತಿರುವ ಭಗವಾರ್ ವಾಸುದೇವನು ಸಕಲ ಪ್ರಾಣಿಗಳ ಹೃದಯದಲ್ಲಿ ವಾಸವಾಗಿರುವನು. ಅದರಲ್ಲೂ ಮುಖ್ಯವಾಗಿ ಮೂರು ಲೋಕಗಳ ಪೋಷಣೆಗೂ ಆಧಾರಭೂತವಾದ ಗೋವುಗಳ ಹೃದಯದಲ್ಲಂತೂ ವಿಶೇಷ ರೀತಿಯಿಂದ ಸನ್ನಿಹಿತನಾಗಿರುವನು.

೫. ಮನೆಯಲ್ಲಿ ಹಸುಗಳನ್ನು ಕಟ್ಟಿಕೊಂಡಿರುವ ಮನುಷ್ಯನು ಆಶ್ವಯುಜ ಶುದ್ಧ ಪೂರ್ಣಿಮೆಯ ದಿವಸ ಇಂದ್ರಮಾನವೆಂಬೊಂದು ವ್ರತವನ್ನು ಮಾಡಬೇಕು.

೬. ಆ ದಿವಸ ಇಂದ್ರನ ಪೂಜೆ ಮಾಡಿದ ಬಳಿಕ ಸಕಲ ಪ್ರಾಣಿಗಳ ಪ್ರಾಣಗಳಿಗೆ ಆಧಾರಭೂತನಾದ ವಾಯುವನ್ನು ಸಹಾ ಪ್ರಜಾಪುಷ್ಟಿಗೋಸ್ಕರ ಗಂಧ ವಸ್ತ್ರಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿ ಷೋಡಶೋಪಚಾರಗಳಿಂದ ಪೂಜೆ ಮಾಡಬೇಕು.

ಘೃತಪ್ರತೀಕೈಶ್ಚ ತಥಾ ರೌದ್ರೀಭಿಶ್ಚ ಭೃಗೂತ್ತಮ ।
ಸಿತ್ಯಾಭಿಶ್ಚ ತಥಾ ವಹ್ನಿಂ ಘೃತೇನ ಜುಹುಯಾದ್ಬುಧಃ ॥ ೭ ॥

ಅಂಭಸ್ಥೇತಿ ಚ ಮಂತ್ರೇಣ ಲವಣಂ ಚಾಭಿಮಂತ್ರಯೇತ್ ।
ದಧ್ನಾ ಸಂಪ್ರಾಶನಂ ಕಾರ್ಯಂ ದಧಿಕ್ರಾವ್ಣೇತ್ಯನಂತರಂ ॥ ೮ ॥

ಯಜಮಾನೇನ ದೇಯಾ ಚ ಧೇನುಃ ಸ್ಯಾಚ್ಛತಧೇನುನಾ ।
ತದೂನವಿತ್ತೋ ದದ್ಯಾಚ್ಚ ಹೋತ್ರೇ ಶಕ್ತ್ಯೈವ ದಕ್ಷಿಣಾಂ ॥ ೯ ॥

ಗಾವಃ ಸ್ವಲಂಕೃತಾಃ ಪಶ್ಚಾದ್ಗಂಧಮಾಲ್ಯಫಲಾದಿಭಿಃ ।
ಸ್ವಾಶಿತಾ ಮುಕ್ತವತ್ಸಾಶ್ಚ ಕುರ್ಯುರ್ವಹ್ನಿಂ ಪ್ರದಕ್ಷಿಣಂ ॥ ೧೦ ॥

---

೭. ಆ ಬಳಿಕ ಅಗ್ನಿಪೂಜೆಯನ್ನು ಮಾಡಬೇಕು. ರುದ್ರಮಂತ್ರಗಳಿಂದ ತುಪ್ಪವನ್ನು ಅಗ್ನಿಯಲ್ಲಿ ಹೋಮಮಾಡಬೇಕು.

೮. ಹೋಮವಾದ ಮೇಲೆ ಸ್ವಲ್ಪ ಉಪ್ಪಿನ ಪುಡಿಯನ್ನು ಕೈಗೆ ತೆಗೆದುಕೊಂಡು ಅಂಭಸ್ಥವೆಂಬ ಮಂತ್ರದಿಂದ ಅಭಿಮಂತ್ರಿಸಬೇಕು. ಆ ಮೇಲೆ ಮೊಸರಿಗೆ ಉಪ್ಪನ್ನು ಬೆರಸಿ ದಧಿಕ್ರಾವ್ಣೋ ಅಕಾರಿಷಂ................ಆಯೂಂಷಿತಾರಿಷತ್, ಎಂಬ ಮಂತ್ರವನ್ನು ಹೇಳಿಕೊಂಡು ಆ ಮೊಸರನ್ನು ಕುಡಿದುಬಿಡಬೇಕು.

೯. ಆ ದಿನ ಒಂದು ಗೋದಾನವನ್ನು ಮಾಡಬೇಕು. ಆ ರೀತಿ ಆ ದಿನ ಒಂದು ಗೋವನ್ನು ದಾನಮಾಡಿದರೆ ಅದು ನೂರಾಗಿ ಫಲಕೊಡುವುದು. ಹೋಮ ಮಾಡಿದವರಿಗೆ ತನ್ನ ಶಕ್ತ್ಯಾನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು.

೧೦. ಆ ಮೇಲೆ ತನ್ನ ಮನೆಯಲ್ಲಿರುವ ಹಸುಗಳನ್ನೆಲ್ಲಾ ಚೆನ್ನಾಗಿ ಅಲಂಕಾರ ಮಾಡಿ ಗಂಧ ಪುಷ್ಪ ಧೂಪ ದೀಪಾದಿಗಳಿಂದ ಪೂಜಿಸಿ ಅವಕ್ಕೆ ಚೆನ್ನಾಗಿ ಹುಲ್ಲುಹಾಕಿ ಮೇಯಿಸಬೇಕು. ಕರುಗಳನ್ನು ಹಗ್ಗಗಳಿಂದ ಕತ್ತುಕಳಚಿ ಬಿಟ್ಟುಬಿಡಬೇಕು. ಆ ಹಸುಗಳು ಮತ್ತು ಕರುಗಳನ್ನೂ ಗುಂಪುಕೂಡಿಸಿಕೊಂಡು ತಾನೂ ಅವುಗಳ ಜತೆಯಲ್ಲಿ ಯಜ್ಞೇಶ್ವರನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಬೇಕು.

ಕ್ಷ್ವೇಡಾಕಿಲಕಿಲಾಶಬ್ದೈಃ ಶಂಖವಾದ್ಯರವೈಸ್ತಥಾ ।
ವೃಷಾಣಾಂ ಯೋಜಯೇದ್ಯುದ್ಧಂ ಗೋಪಾಲಾನಾಂ ತಥೈವ ಚ ॥ ೧೧ ॥

ದ್ವಿತೀಯೇಽಹನಿ ಧೇನೂನಾಂ ವೃಷಾಣಾಂ ಸಹ ವತ್ಸಕೈಃ ।
ಲವಣಂ ತತ್ಪ್ರದಾತವ್ಯಂ ಬ್ರಾಹ್ಮಣೇನಾಭಿಮಂತ್ರಿತಂ ॥ ೧೨ ॥

ಭೋಜನಂ ಗೋರಸಪ್ರಾಯಂ ಬ್ರಾಹ್ಮಣಾಂಶ್ಚಾತ್ರ ಭೋಜಯೇತ್ ।
ಸ್ವಸ್ತಿ ವಾಚ್ಯಂ ತತಃ ಪಶ್ಚಾದ್ದತ್ತದಾಯಾನ್ವಿಸರ್ಜಯೇತ್ ॥ ೧೩ ॥

ನಿತ್ಯಮೇತತ್ತು ವೋ ದಿಷ್ಟಂ ಶಾಂತಿಕರ್ಮ ಶುಭಂ ಗವಾಂ ।
ಅತಃ ಪರಂ ಪ್ರವಕ್ಷ್ಯಾಮಿ ಕರ್ಮ ನೈಮಿತ್ತಿಕಂ ತವ ॥ ೧೪ ॥

---

೧೧. ಇಷ್ಟಾದ ಬಳಿಕ ಹೋ-ಹೋ-ಹೋ-ಹೋ ಎಂದು ಗಟ್ಟಿಯಾಗಿ ಕಿರಿಚಿಕೊಂಡು ಸಿಂಹನಾದ ಮಾಡಬೇಕು. (ಆಳುಗಳೂ—ದನಕಾಯುವವರೆಲ್ಲರೂ ಕೂಗಿಕೊಳ್ಳಬೇಕು.) ಶಂಖಭೇರೀ ನಿನಾದಗಳನ್ನು ಮಾಡಿಸಬೇಕು. ಆ ಮೇಲೆ ಗೂಳಿ-ಕಾಳಗವಾಗಬೇಕು. ದನಕಾಯುವವರು ಜೋಡಿಜೋಡಿಯಾಗಿ ಕುಸ್ತಿ ಮಾಡಬೇಕು.

೧೨. ಎರಡನೆಯ ದಿವಸ ಹಸುಗಳನ್ನೂ ಕರುಗಳನ್ನೂ ಹೋರಿ ಎತ್ತು ಮುಂತಾದುವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಗುಂಪು ಕೂಡಿಸಿ ಅವಕ್ಕೆಲ್ಲಾ ಮಂತ್ರಿಸಿದ ಉಪ್ಪನ್ನು ತಿನ್ನಿಸಬೇಕು.

೧೩. ಆ ದಿವಸ ಬ್ರಾಹ್ಮಣರನ್ನು ಊಟಕ್ಕೆ ಕರೆದು ಹಾಲು ಮೊಸರು ತುಪ್ಪಗಳನ್ನು ಮನದಣಿಯುವಂತೆ ಬಡಿಸಿ ತೃಪ್ತಿಗೊಳಿಸಬೇಕು. ಊಟವಾದ ಮೇಲೆ ವೇದಮಂತ್ರಗಳಿಂದ ಸ್ವಸ್ತಿವಾಚನ ಮಾಡಿಸಬೇಕು. ಈ ರೀತಿ ವ್ರತವನ್ನು ಮುಗಿಸಿ ಉತ್ಸವಕ್ಕೆ ಕರೆಸಿದವರನ್ನೆಲ್ಲಾ ತಾಂಬೂಲಕೊಟ್ಟು ಕಳುಹಿಸಬೇಕು.

೧೪. ಎಲೈ ಪರಶುರಾಮನೇ ! ಕೇಳು. ಇದುವರೆಗೆ ಹೇಳಿದ ಈ ವಿಧಿಯುಂಟಲ್ಲಾ, ಇದಕ್ಕೆ ನಿತ್ಯಗೋಶಾಂತಿಯೆಂದು ಹೆಸರು. ಇದು ಗೋವುಗಳಿಗೆ ಮಂಗಳಪ್ರದವಾದುದು. ಇನ್ನು ಮುಂದೆ ಗೋವುಗಳಿಗೆ ಮಾಡಬೇಕಾದ ನೈಮಿತ್ತಿಕ ಶಾಂತಿಕ್ರಮವನ್ನು ಹೇಳುತ್ತೇನೆ, ಕೇಳು.

**ಧೇನೂನಾಂ ಮಾರಕೇ ಪ್ರಾಪ್ತೇ ತಥಾ ರೋಗಾದ್ಯುಪದ್ರವೇ ।**
**ಕ್ಷೀರಕ್ಷಯೇ ತಥಾಽನ್ಯಸ್ಮಿನ್ಪ್ರಕೃತೇಸ್ತು ವಿಪರ್ಯಯೇ ॥ ೧೫ ॥**

**ತ್ರಿರಾತ್ರೋಪೋಷಿತೋ ವಿದ್ವಾನೇಕರಾತ್ರೋಷಿತೋಽಥವಾ ।**
**ಗವಾಂ ಮಧ್ಯೇ ಶುಭೇ ದೇಶೇ ಸ್ಥಂಡಿಲಂ ಪರಿಕಲ್ಪಯೇತ್ ॥ ೧೬ ॥**

**ಅಷ್ಟಪತ್ರಂ ಲಿಖೇತ್ಪದ್ಮಂ ಕರ್ಣಿಕಾಕೇಸರಾನ್ವಿತಂ ।**
**ಪೂಜಯೇತ್ಕರ್ಣಿಕಾಮಧ್ಯೇ ವಾಸುದೇವಂ ಶ್ರಿಯಾ ಸಹ ॥ ೧೭ ॥**

**ಕೃಸರೈಃ ಪೂಜನಂ ಕಾರ್ಯಂ ದೇವತಾನಾಂ ಯಥಾಕ್ರಮಂ ।**
**ಯಾಸಾಂ ತಾಸಾಂ ಪ್ರವಕ್ಷ್ಯಾಮಿ ತವ ನಾಮಾನಿ ಭಾರ್ಗವ ॥ ೧೮ ॥**

---

೧೫. ಹಸುಗಳಿಗೆ ಏನಾದರೂ ಉಪದ್ರವವುಂಟಾದಾಗಲೂ, ಬಹಳ ಕಷ್ಟವುಂಟಾದಾಗಲೂ, ಹಾಲು ಕಮ್ಮಿಯಾದಾಗಲೂ, ಪ್ರಕೃತವಾಗಿ ನಡೆಯುತ್ತಿರುವ ಕೆಲಸಗಳು ಹೆಚ್ಚುಕಡಿಮೆಯಾದಾಗಲೂ ಈ ನೈಮಿತ್ತಿಕ ಶಾಂತಿಯನ್ನು ಮಾಡಬೇಕು.

೧೬. ಈ ಶಾಂತಿಕರ್ಮವನ್ನಾರಂಭಿಸುವುದಕ್ಕಿಂತ ಮುಂಚೆ ಯಜಮಾನನು ಮೂರು ದಿನ ಅಥವಾ ಒಂದು ದಿನವಾದರೂ ಉಪವಾಸವಿರಬೇಕು. ಶಾಂತಿಕರ್ಮದ ದಿನ ಗೋಸ್ಥಾನದಲ್ಲಿ ಗೋವುಗಳ ಮಧ್ಯದಲ್ಲಿ ಕುಳಿತುಕೊಂಡು ಹೋಮಕ್ಕಾಗಿ ಸ್ಥಂಡಿಲ (ಹೋಮ ಮಾಡುವ ಜಾಗ) ವನ್ನು ನಿರ್ಮಾಣಮಾಡಬೇಕು.

೧೭. ಆ ಸ್ಥಂಡಿಲದಮೇಲೆ ಕರ್ಣಿಕಾಕೇಸರಗಳಿಂದ ಮಾಡಿದ ಅಷ್ಟಪತ್ರ ಪದ್ಮವನ್ನು ಬರೆಯಬೇಕು. ಈ ರೀತಿ ಬರೆದಮೇಲೆ ಆ ಕರ್ಣಿಕೆಯ ಮಧ್ಯದಲ್ಲಿ ಕುಳಿತುಕೊಂಡು ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನನ್ನು ಸ್ಥಾಪಿಸಿ ಪೂಜೆ ಮಾಡಬೇಕು.

೧೮. ಈ ರೀತಿ ದೇವಪ್ರತಿಷ್ಠಾಪನೆ ಮಾಡಿದ ಬಳಿಕ ಯಥಾಕ್ರಮವಾಗಿ ಈ ಕೆಳಗೆ ವಿವರಿಸುವಂತೆ ದೇವತಾವಿಶೇಷಗಳನ್ನು ಸಗಣಿಯ ಉಂಡೆಗಳಲ್ಲಿ ಸ್ಥಾಪಿಸಿ ಪೂಜೆಮಾಡಬೇಕು. ಅವುಗಳು ಯಾವುವು ? ಅವುಗಳ ಹೆಸರೇನೆಂಬುದನ್ನು ವಿವರಿಸುತ್ತೇನೆ, ಕೇಳು.

ಸುಭದ್ರಾಂ ನಾಮ ದಿಗ್ಧೇನುಂ ಪೂರ್ವಭಾಗೇ ಸಮರ್ಚಯೇತ್ ।
ಪೂಜನೀಯಸ್ತತೋ ಬ್ರಹ್ಮಾ ಸುರಭಿಸ್ತದನಂತರಂ ॥ ೧೯ ॥

ತತಃ ಸೂರ್ಯಸ್ತತೋ ಧೇನುರ್ಬಹುರೂಪಾ ದ್ವಿಜೋತ್ತಮ ।
ತತಸ್ತು ಪೃಥಿವೀಂ ದೇವೀಂ ತತೋಽನಂತಂ ಪ್ರಪೂಜಯೇತ್ ॥ ೨೦ ॥

ತತಶ್ಚ ವಿಶ್ವರೂಪಾಕ್ಷಂ ದಿಗ್ಧೇನುಂ ತದನಂತರಂ ।
ತತಃ ಸಿದ್ಧಿಂ ತತೋ ಋದ್ಧಿಂ ತತಃ ಶಾಂತಿಂ ಸಮರ್ಚಯೇತ್ ॥ ೨೧ ॥

ರೋಹಿಣೀ ನಾಮ ದಿಗ್ಧೇನುಸ್ತತಃ ಪೂಜ್ಯಾ ದ್ವಿಜೋತ್ತಮ ।
ತತಶ್ಚಂದ್ರಮಸಂ ದೇವಂ ಮಹಾದೇವ ವೃಷಂ ತತಃ ॥ ೨೨ ॥

ಮಹಾದೇವಂ ತತೋ ದೇವಂ ಪೂಜಯೇತ್ತದನಂತರಂ ।
ಇತ್ಯೇತಾ ದೇವತಾಃ ಪ್ರೋಕ್ತಾಃ ಕೃಸರೇ ತವ ಷೋಡಶ ॥ ೨೩ ॥

---

೧೯. ಮಂಡಲದ ಪೂರ್ವಭಾಗದಲ್ಲಿ ಸುಭದ್ರೆಯೆಂಬ ಹೆಸರಿನ ದಿಗ್ಧೇನುವನ್ನು ಪೂಜೆಮಾಡಬೇಕು. ಅನಂತರ ಬ್ರಹ್ಮನನ್ನು ಪೂಜಿಸಿ, ಆ ಬಳಿಕ ಕಾಮಧೇನುವಿನ ಪೂಜೆಯನ್ನು ಮಾಡಬೇಕು.

೨೦. ಕಾಮಧೇನು ಪೂಜಾನಂತರ ಸೂರ್ಯನ ಪೂಜೆ. ಆ ಬಳಿಕ ನಾನಾ ರೂಪವಾದ ಧೇನುಗಳನ್ನು ಅರ್ಚಿಸಬೇಕು. ಸಮನಂತರದೋಳ್ ಭೂದೇವಿಯನ್ನೂ, ಅದಾದ ಬಳಿಕ ಅನಂತನನ್ನೂ ಪೂಜೆಮಾಡಬೇಕು.

೨೧. ಅನಂತರ ವಿಶ್ವರೂಪಾಕ್ಷಸ್ವಾಮಿಯ ಪೂಜೆ. ಆಮೇಲೆ ದಿಗ್ಧೇನುಪೂಜೆ. ಬಳಿಕ ಸಿದ್ಧಿ, ಋದ್ಧಿ, ಶಾಂತಿದೇವತೆಯರನ್ನು ಪೂಜಿಸಬೇಕು.

೨೨. ರೋಹಿಣಿಯೆಂಬ ಹೆಸರಿನ ಒಂದಾನೊಂದು ದಿಗ್ಧೇನುವುಂಟು. ಅದನ್ನು ಪೂಜಿಸಿದ ಬಳಿಕ ಚಂದ್ರನನ್ನೂ, ಈಶ್ವರ ವಾಹನವಾದ ವೃಷಭವನ್ನೂ ಪೂಜಿಸಬೇಕು.

೨೩. ವೃಷಭಪೂಜೆಯಾದಮೇಲೆ ವೃಷಭವಾಹನನಾದ ಪರಮೇಶ್ವರನನ್ನು ಪೂಜೆಮಾಡಬೇಕು. ಇದುವರೆಗೆ ಹೇಳಿದ ಪ್ರಕಾರವಾಗಿ ಸಗಣಿಯ ಉಂಡೆಗಳಲ್ಲಿ ಮೂರ್ತಿಗಳನ್ನು ರಚಿಸಿ ಅವುಗಳಲ್ಲಿ ದೇವತೆಗಳನ್ನಾವಾಹಿಸಿ ಯಥಾವಿಧಿಯಾಗಿ ಪೂಜಿಸಬೇಕು.

**ಪತ್ರೇಷು ಪೂಜನೀಯಾಶ್ಚ ದಿಕ್ಪಾಲಾಶ್ಚ ಯಥಾದಿಶಂ ।**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ॥ ೨೪ ॥**

**ಪ್ರತ್ಯೇಕಂ ಪೂಜಯೇದ್ರಾಮ ದೇವತಾಂ ಪ್ರಯತೋ ದ್ವಿಜಃ ।**
**ಪೂರ್ಣಕುಂಭಾನಿ ಸರ್ವಾಣಿ ಪ್ರತ್ಯೇಕಂ ವಿನಿವೇದಯೇತ್ ॥ ೨೫ ॥**

**ಭಕ್ತ್ಯಾಸ್ಥಗಿತವಸ್ತ್ರಾಣಿ ವರ್ಧಮಾನ್ಯೈಸ್ಸತಂಡುಲೈಃ ।**
**ಸಹಿರಣ್ಯೈರ್ಯಥಾಶಕ್ತಿ ತತೋ ಹೋಮಂ ಸಮಾರಭೇತ್ ॥ ೨೬ ॥**

**ವೇದಿಂ ಕೃತ್ವಾ ಯಥಾಶಾಸ್ತ್ರಂ ಸಮಿಧ್ಯ ಚ ಹುತಾಶನಂ ।**
**ಏಕೈಕಂ ದೈವತಂ ರಾಮ ಸಮುದ್ದಿಶ್ಯ ಯಥಾವಿಧಿ ॥ ೨೭ ॥**

---

೨೪. ಈ ರೀತಿ ಕೃಸರಗಳಲ್ಲಿ (ಸಗಣಿಯ ಉಂಡೆ) ಮಾಡಿ ಪೂಜಿಸಬೇಕಾದ ದೇವತೆಗಳ ಸಂಖ್ಯೆ ಹದಿನಾರು. ಈ ಪೂಜೆಗಳು ಬೆಳೆದ ಬಳಿಕ ಅಷ್ಟಪತ್ರಗಳಲ್ಲಿಯೂ ಯಥಾಕ್ರಮವಾಗಿ ಅಷ್ಟದಿಕ್ಪಾಲಕರನ್ನೂ ಪೂಜೆಮಾಡಬೇಕು. ಎಲ್ಲಾ ದೇವತೆಗಳಿಗೂ ಸ್ವಲ್ಪವೂ ಬಿಡದೆ ಧ್ಯಾನಾವಾಹನಾದಿಗಳಿಂದ ವಂದಿಸಿ ನಮಸ್ಕಾರಾಂತವಾಗಿ ಷೋಡಶೋಪಚಾರಗಳಿಂದ ಪೂಜೆಮಾಡಬೇಕು.

೨೫. ಎಲ್ಲಾ ದೇವತೆಗಳಿಗೂ ಒಟ್ಟುಗೂಡಿಸಿ ಪೂಜೆಮಾಡಕೂಡದು. ಬೇರೆ ಬೇರೆ ಮಂತ್ರಗಳನ್ನೇ ಹೇಳಿಕೊಂಡು ಪೂಜೆಮಾಡಬೇಕು. ಪ್ರತಿಯೊಂದಕ್ಕೂ ಬೇರೆ ಬೇರೆಯಾಗಿ ಪೂರ್ಣಕುಂಭವನ್ನು ಸಮರ್ಪಿಸಬೇಕು.

೨೬. ಆ ಪೂರ್ಣಕುಂಭಗಳ ಬಾಯಿ ಅಗಲವಾಗಿರಬೇಕು. ಅದರ ತುಂಬಾ ಅಕ್ಕಿಯನ್ನು ತುಂಬಿರಬೇಕು. ಆ ಪೂರ್ಣಕುಂಭದೊಳಗೆ ಒಂದು ಚಿನ್ನದ ಕಾಸನ್ನು ಹಾಕಿರಬೇಕು. ಇದೇ ಪೂರ್ಣಕುಂಭದ ಅರ್ಥವೆಂದು ತಿಳಿದುಕೊಳ್ಳಯ್ಯಾ ! ಇನ್ನು ಮುಂದೆ ಹೋಮಕ್ರಮವನ್ನು ತಿಳಿಸುವೆನು.

೨೭. ಶಾಸ್ತ್ರಾನುಸಾರವಾಗಿ (ಪ್ರಯೋಗವನ್ನನುಸರಿಸಿ) ಮೊದಲು ವೇದಿಕೆಯನ್ನು ನಿರ್ಮಿಸಬೇಕು. ವೇದಿಕೆಯ ಮಧ್ಯದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಬೇಕು. ಈ ರೀತಿ ಸಮಂತ್ರಕವಾಗಿ ಪ್ರತಿಷ್ಠಿಸಿದ ಅಗ್ನಿಮಧ್ಯದಲ್ಲಿ ಪ್ರತಿಯೊಂದು ದೇವತೆಯ

**ಚತುರ್ಥ್ಯಂತೇನ ಧರ್ಮಜ್ಞ ನಾಮ್ನಾ ತು ಪ್ರಣವಾದಿನಾ ।**
**ಹೋಮದ್ರವ್ಯೈಸ್ತಥೈಕೈಕಂ ಶತಸಂಖ್ಯಂ ತು ಹೋಮಯೇತ್ ॥ ೨೮ ॥**

**ಸಮಿಧಃ ಕ್ಷೀರವೃಕ್ಷಸ್ಯ ಅಕ್ಷತಾನಿ ತಿಲಾಂಸ್ತಥಾ ।**
**ಸಿದ್ಧಾರ್ಥಕಾನ್ಯಥಾಜ್ಯಂ ಚ ಪ್ರತ್ಯೇಕಂ ಜುಹುಯಾತ್ಕ್ರಮಾತ್ ॥ ೨೯ ॥**

**ತತೋ ರಕ್ಷೋಹಣೈರ್ಮಂತ್ರೈ ರ್ಜುಹುಯಾದ್ಗೌರಸರ್ಷಪಾನ್ ।**
**ತತಃ ಸಮಾಪಯೇದ್ವಿದ್ವಾನಗ್ನಿಕರ್ಮ ಯಥಾವಿಧಿ ॥ ೩೦ ॥**

---

ಹೆಸರನ್ನೂ ಚತುರ್ಥ್ಯಂತವಾಗಿ (ಚತುರ್ಥೀ ವಿಭಕ್ತಿಯ ಏಕವಚನ) ಉಚ್ಚರಿಸಿ ಹೋಮಮಾಡಬೇಕು.

ಟಿಪ್ಪಣಿ: ಗಂಡು ದೇವತೆಗಳಾದರೆ ಇಂದ್ರಾಯ ಸ್ವಾಹಾ (ಇಂದ್ರನಿಗೋಸ್ಕರ ಈ ಆಹುತಿಯು)—ಅಗ್ನಯೇ ಸ್ವಾಹಾ—ಯಮಾಯ ಸ್ವಾಹಾ—ಚಂದ್ರಮಸೆ ಸ್ವಾಹಾ—ಇತ್ಯಾದಿಯಾಗಿ ಉಚ್ಚರಿಸಬೇಕು. ಸ್ತ್ರೀದೇವತೆಯರಾದರೆ ಗಾಯತ್ರ್ಯೈ ಸ್ವಾಹಾ—ಸಾವಿತ್ರ್ಯೈ ಸ್ವಾಹಾ—ಸರಸ್ವತ್ಯೈ ಸ್ವಾಹಾ—ರೋಹಿಣ್ಯೈ ಸ್ವಾಹಾ—ಇತ್ಯಾದಿಯಾಗಿ ಚತುರ್ಥ್ಯೈಕವಚನವನ್ನೇ ಉಚ್ಚರಿಸಬೇಕು. ಇದೇ ವಿಧಿ.)

೨೮. ಮತ್ತು ಹೋಮಮಾಡುವ ಮೊದಲು ಯಾವ ದೇವತೆಯ ಹೆಸರನ್ನು ಹೇಳಬೇಕಾಗಿದ್ದಾಗ್ಯೂ ಪ್ರಣವ (ಓಂ)ವನ್ನು ಮೊದಲು ಉಚ್ಚರಿಸಲೇ ಬೇಕು. (ಓಂ ಶ್ರಿಯೈ ಸ್ವಾಹಾ—ಓಂ ಗಾಯತ್ರ್ಯೈ ಸ್ವಾಹಾ—ಇತ್ಯಾದಿ, ಇತ್ಯಾದಿ.) ಈ ರೀತಿ ಆಯಾ ದೇವತೆಗಳಿಗೆ ಯಾವ ಯಾವ ಹೋಮದ್ರವ್ಯಗಳುಂಟೋ, ಆ ಹೋಮ ದ್ರವ್ಯಗಳನ್ನು ನೂರು ನೂರು ಬಾರಿ ಹೋಮಮಾಡಬೇಕು.

೨೯. ಹೋಮದ್ರವ್ಯಕ್ಕೋಸ್ಕರ ಅರಳಿ, ಮುತ್ತುಗ ಮುಂತಾದ ಮರಗಳ ಸಮಿತ್ತನ್ನಾಗಲಿ, ಅಕ್ಷತೆ, ಎಳ್ಳು, ಸಾಸುವೆ, ತುಪ್ಪ ಮೊದಲಾಗಿ ಅನ್ವಾಧಾನಮಾಡು ವಾಗ ಯಾವ ಹೋಮದ್ರವ್ಯಗಳಿಂದು ಸಂಕಲ್ಪವನ್ನು ಹೇಳುತ್ತೀವೋ ಆಯಾಯ ಹೋಮದ್ರವ್ಯಗಳಿಂದ ಹೋಮಮಾಡಬೇಕು.

೩೦. ಈ ರೀತಿ ಹೋಮಗಳನ್ನು ಮಾಡಿದ ಬಳಿಕ ರಕ್ಷೋಘ್ನಸೂತ್ರಗಳಲ್ಲಿ ಹೇಳಿರುವ ಮಂತ್ರಗಳಿಂದ ಬಿಳೀ ಸಾಸುವೆಯನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಆ ಮೇಲೆ ಸ್ವಿಷ್ಟಿಕೃದಾದಿ ಹೋಮಗಳಿಂದ ಹೋಮವನ್ನು ಪೂರ್ಣಮಾಡಬೇಕು.

**ಸುವರ್ಣಂ ಚ ತಥಾ ಕಾಂಸ್ಯಂ ಧೇನುಂ ವಸ್ತ್ರಯುಗಂ ತಥಾ ।**
**ಕರ್ತುರ್ದೇಯಮುಪದ್ರಷ್ಟುರ್ವಸ್ತ್ರಯುಗ್ಮಂ ಗುರೋಸ್ತಥಾ ॥ ೩೧ ॥**

**ಭೋಜನಂ ಗೋರಸಪ್ರಾಯಂ ಬ್ರಾಹ್ಮಣಾಂಶ್ಚಾತ್ರ ಭೋಜಯೇತ್ ।**
**ಸ್ವಸ್ತಿ ವಾಚ್ಯಂ ತತಃ ಪಶ್ಚಾದ್ದತ್ತದಾಯಾ ದ್ವಿಜೋತ್ತಮಾಃ ॥ ೩೨ ॥**

**ರಕ್ಷೋಹಣೈಸ್ತಥಾ ಮಂತ್ರೈಃ ಕುರ್ಯುರಭ್ಯುಕ್ಷಣಂ ಗವಾಂ ।**
**ಗವಾಂ ಚ ಪೂಜಾ ಕರ್ತವ್ಯಾ ಗಂಧಮಾಲ್ಯಾನುಲೇಪನೈಃ ॥ ೩೩ ॥**

**ಮೋಕ್ತವ್ಯಾಶ್ಚ ತದಾ ವತ್ಸಾ ಯಥಾಕಾಮಂ ದ್ವಿಜೋತ್ತಮ ।**
**ಶಾಂತಿಕರ್ಮ ಗವಾಮೇತತ್ಸರ್ವೋತ್ಪಾತ ಪ್ರಶಾಂತಯೇ ॥ ೩೪ ॥**

---

೩೧. ಹೋಮಕಾಲದಲ್ಲಿ ಸಾಕ್ಷೀಭೂತನಾಗಿ ಕುಳಿತಿದ್ದ ಉಪದ್ರಷ್ಟು (ಋತ್ವಿಕ್)ವಿಗೆ ಒಂದು ಗೋದಾನವನ್ನು ಕೊಡಬೇಕು. (ಬ್ರಹ್ಮಣೇ ವೃಷಭ ದದ್ಯಾತ್) ಬ್ರಹ್ಮತ್ವವನ್ನು ಮಾಡಿದವನಿಗೆ ಒಂದು ಎತ್ತನ್ನು ಕೊಡಬೇಕೆಂದಂ ಮತ್ತೊಂದು ಪ್ರಯೋಗದಲ್ಲಿ ಹೇಳಿರುತ್ತೆ.) ಗೋವಿನ ಜೊತೆಯಲ್ಲಿ ಹಾಲು ಕರೆಯು ವುದಕ್ಕೆ ಕಂಚಿನ ಪಾತ್ರೆಯನ್ನೂ ಒಂದು ಜತೆ ಧೋತ್ರವನ್ನೂ ಕೊಡಬೇಕು ಪುರೋಹಿತರಿಗೆ ಒಂದು ಜತೆ ಪಂಚೆಯನ್ನು ಕೊಡಬೇಕು.

೩೨. ಆ ದಿವಸ ಒಂದು ಬ್ರಾಹ್ಮಣ ಸಂತರ್ಪಣೆಯನ್ನು ನಡೆಸಬೇಕು. ಒಳ್ಳೇ ಅಡಿಗೆಯನ್ನು ಮಾಡಿಸಿ ಬ್ರಾಹ್ಮಣರು ಊಟಮಾಡುವಾಗ ತುಪ್ಪ ಹಾಲು ಮೊಸರುಗಳನ್ನು ಯಥೇಚ್ಛವಾಗಿ ಬಡಿಸಬೇಕು. ಊಟವಾದ ಮೇಲೆ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಬೇಕು. (ಸ್ವಸ್ತಿ ಹೇಳಿಸ ಬೇಕೆಂದರ್ಥ). ಸ್ವಸ್ತಿ ಹೇಳಿದ ಬ್ರಾಹ್ಮಣರಿಗೆ ಕೈತುಂಬಾ ದಕ್ಷಿಣೆ ಕೊಡಬೇಕು.

೩೩. ಆ ಬಳಿಕ ಗೋಶಾಲೆಗೆ ಪ್ರವೇಶಿಸಿ ಅಲ್ಲಿರುವ ಗೋವುಗಳನ್ನೆಲ್ಲಾ ನೋಡುತ್ತಾ ರಕ್ಷೋಘ್ನ ಸೂತ್ರಗಳನ್ನು ಹೇಳಿಕೊಂಡು ಆ ಮಂತ್ರಪೂತಜಲವನ್ನು ಆ ಗೋವುಗಳ ಮೇಲೆ ಪ್ರೋಕ್ಷಿಸಬೇಕು. ಈ ಮೇರೆ ಗಂಧಮಾಲ್ಯಾನುಲೇಪನಗಳಿಂದ ಗೋಪೂಜೆಯನ್ನು ಬಹಳ ಶ್ರದ್ಧಾಭಕ್ತಿಗಳಿಂದ ನೆರವೇರಿಸಬೇಕು.

೩೪. ಆ ದಿವಸ ಕರುಗಳನ್ನು ಹಗ್ಗದಿಂದ ಕಟ್ಟದೆ ಕತ್ತುಗಳಚಿ ಯಥೇಚ್ಛವಾಗಿ ಕುಣಿದಾಡಿಕೊಂಡಿರುವಂತೆ ಬಿಟ್ಟುಬಿಡಬೇಕು. ಇಷ್ಟು ಕೆಲಸಮಾಡಿದರೆ ಇದು ಗೋಶಾಂತಿಯೆನಿಸಿಕೊಳ್ಳುವುದು. ಈ ಶಾಂತಿಕ್ರಮವನ್ನು ಮಾಡೋಣದರಿಂದ ಹಸುಗಳಿಗೆ ಬರುವ ಉತ್ಪಾತವೂ ಕಷ್ಟವೂ ಪರಿಹಾರವಾಗಿ ಪಶುಸಮೃದ್ಧಿಯೂ ಪಶುಸೌಖ್ಯವೂ ಉಂಟಾಗುವುದು.

**ಕರ್ತವ್ಯಂ ಭೃಗುಶಾರ್ದೂಲ ಪರಮಂ ಕರ್ಮದಾರುಣಂ ।**
**ಅತಃಪರಂ ಪ್ರವಕ್ಷ್ಯಾಮಿ ಕಾಮ್ಯಂ ಕರ್ಮ ತವಾನಘ ॥ ೩೫ ॥**

---

೩೫. ಪರಶುರಾಮ ! ನಾನು ಹೇಳುವ ಮಾತನ್ನು ಕೇಳು. ಈ ಶಾಂತಿ ಕರ್ಮವನ್ನು ಮಾಡುವಾಗ ಕಷ್ಟವು ಹೆಚ್ಚಾದರೂ ಕೊನೆಗೆ ಲೋಕಕಲ್ಯಾಣವಾಗು ವುದರಿಂದ ಇದನ್ನು ಅವಶ್ಯವಾಗಿ ಮಾಡಲೇಬೇಕು. ಇನ್ನು ಮುಂದೆ ಗೋವುಗಳ ವಿಷಯದಲ್ಲಿ ಮಾಡಬೇಕಾದ ಕಾಮ್ಯಕರ್ಮಗಳನ್ನು ಹೇಳುವೆನು, ಕೇಳು.

ಟಿಪ್ಪಣಿ: ಪ್ರತಿದಿನವೂ ಬ್ರಾಹ್ಮಣರು ಜಪತಪಪಾರಾಯಣಗಳನ್ನು ಮಾಡಿದ ಬಳಿಕ ಕಡೆಯಲ್ಲಿ ಸ್ವಸ್ತಿಪ್ರಜಾಭ್ಯಃ ಎಂದು ಮೊದಲು ಮಾಡಿಕೊಂಡು, ಲೋಕಾಸ್ಸಮಸ್ತಾ ಸ್ಸುಖಿನೋ ಭವಂತು, ಎಂದು ಹೇಳಿ ಮುಗಿಸುತ್ತಾರೆ. ಇದು ಆರ್ಷೇಯವಾಗಿ ಇಂದಿಗೂ ನಡೆದು ಬರುತಲಿದೆ. ಗೋಬ್ರಾಹ್ಮಣರೂ ಲೋಕದ ಸಕಲ ಪ್ರಜೆಗಳೂ ಸುಖವಾಗಿರ ಬೇಕಾದರೆ ಮೇಲೆ ವಿವರಿಸಿದ ಅಧ್ಯಾಯಗಳಲ್ಲಿ ವಿವರವಾಗಿ ಹೇಳಿರುವ ಮೇರೆ ಲೋಕ ಸುಖಾಧಾರಪ್ರಾಯರಾದ ಗೋವಿಪ್ರಸಾಧ್ವಿಯರ ಪೂಜೆಯೂ ಗೋಶಾಂತಿಕ್ರಮವೂ ಅವಶ್ಯವೆಂದು ಹೇಳಿದ ಹಾಗಾಯಿತು. ಈ ರೀತಿ ಮಾಡದೆ ಇದ್ದರೆ ಲೋಕಕ್ಕೆ ನಾನಾ ವಿಧ ಕಷ್ಟಗಳು ಪ್ರಾಪ್ತವಾಗುವುವೆಂಬುದು, ಈಗ ನಡೆಯುತ್ತಿರುವ ಸ್ವಧರ್ಮತ್ಯಾಗ ಫಲವೆಂಬುದನ್ನು ಸರ್ವರೂ ಸುಲಭವಾಗಿ ಊಹಿಸಬಹುದು. ಇತ್ತೀಚೆಗೆ ಅನೇಕ ಗೋಕಾಯಿ (ಎಮ್ಮೆ, ಹಸು ಮುಂತಾದುವು)ಗಳು ನಷ್ಟವಾಗಿ ಹೋಗುತ್ತಿರುವುದರಿಂದ ಹಾಲು ಮೊಸರುಗಳು ಸಿಕ್ಕದೆ ಬಹಳ ಕಷ್ಟವು ಪ್ರಾಪ್ತವಾಗಿರುವ ಸಂಗತಿಯೂ ಅನೇಕರಿಗೆ ತಿಳಿದ ವಿಷಯವಾಗಿಯೇ ಇದೆ. ಮುಂದೆ ಹೀಗೆಲ್ಲಾ ಅನರ್ಥಗಳು ಸಂಭವಿಸುವುದೆಂಬ ದಿವ್ಯದೃಷ್ಟಿಯಿಂದ ಹಿಂದೆಯೇ ಮಹರ್ಷಿಗಳು ಇದಕ್ಕೆ ತಕ್ಕ ಪರಿಹಾರೋಪಾಯಗಳನ್ನೂ ಶಾಂತಿಕ್ರಮಗಳನ್ನೂ ವಿಧಾಯಕಮಾಡಿದಾರೆ. ವೇದಶಾಸ್ತ್ರಪುರಾಣಗಳೆಲ್ಲವೂ ಇದೇ ವಿಷಯವನ್ನು ಕುರಿತೇ ನಾನಾ ರೀತಿಯಲ್ಲಿ ಲೋಕೋಪದೇಶಮಾಡಿವೆ. ಈ ಗ್ರಂಥ ಗಳೆಲ್ಲವೂ ಲೋಕಮಾನ್ಯಗಳೆಂದು ವಿದೇಶೀಯ ವಿದ್ವಾಂಸರಿಂದಲೂ ಭಾವಿಸಲ್ಪಟ್ಟು ಈ ಗ್ರಂಥಗಳೆಲ್ಲವೂ ಇಂಗ್ಲೀಷ್ ಮುಂತಾದ ಎಲ್ಲಾ ಭಾಷೆಗಳಿಗೂ ಪರಿವರ್ತನವಾಗಿವೆ, ಆಗುತ್ತಲೂ ಇವೆ. ಈ ವಿಷ್ಣುಧರ್ಮೋತ್ತರ ಪುರಾಣವೂ ಸಹ ಇಂಗ್ಲೀಷಿಗೆ ಪರಿವರ್ತನೆ ಮಾಡಲ್ಪಟ್ಟು ಪ್ರಕಟವಾಗಿದೆಯೆಂಬ ವಿಚಾರವನ್ನು ನಾನು ಕೇಳಿ ತಿಳಿದುಕೊಂಡಿದೇನೆ. ನನಗೆ ಇಂಗ್ಲಿಷ್ ಪರಿಚಯವಿಲ್ಲವಾದ್ದರಿಂದ ಅದರ ಅನುವಾದ ಸ್ವಾರಸ್ಯವು ಹೇಗಿರುವು ದೆಂದು ತಿಳಿಸಲು ಅವಕಾಶವಿಲ್ಲವಾದ್ದರಿಂದಲೂ, ಈಗ ಬರೆದಿರುವ ಈ ಕನ್ನಡ ಅರ್ಥಾನುವಾದವು ಗುರು ಮಹಿಮೆಯಿಂದಲೂ, ಅನೇಕ ಪಂಡಿತ ಪ್ರವೀಣರ ಸಲಹೆ

**ಕರ್ತಾ ತೂಪವಸೇತ್ತತ್ರ ಕಾರಕೈಶ್ಚ ತಥೈವ ಚ ।**
**ಪೂರ್ವಭಾದ್ರಪದಾಯೋಗಮಾಹಿರ್ಬುಧ್ನ್ಯಗತೇ ತಥಾ　　॥ ೩೬ ॥**

**ಸ್ನಾನಂ ನಿಶಾಕರೇ ಕುರ್ಯಾದ್ದ್ವಿತೀಯೇಽಹನಿ ಶಾಸ್ತ್ರವಿತ್ ।**
**ಉದುಂಬರಸ್ಯ ಪತ್ರಾಣಿ ಪಂಚಗವ್ಯಂ ಕುಶೋದಕಂ　　॥ ೩೭ ॥**

---

ಗಳಿಂದಲೂ, ಪ್ರಮಾದವಿಲ್ಲವೆ ಬರೆಯಲ್ಪಟ್ಟಿರುವುದರಿಂದ ಇದರ ಗುಣಗ್ರಹಣೆಯನ್ನೂ, ವಿಮರ್ಶೆಯನ್ನೂ ಸಕಲ ವಿದ್ಯಾಪಾರಂಗತರ ಪರಿಶೀಲನೆಗಾಗಿ ಮಾಸಲಾಗಿಟ್ಟಿದ್ದೇನೆ. ಇದು ಲೋಕಮಾನ್ಯವಾಗಿದೆಯೆಂದೂ ಸರ್ವಾದರಣೀಯವಾದುದೆಂದೂ ಹೆಸರು ಬಂದರೆ ಈ ಅನುವಾದಕ್ಕಾಗಿ ಪಟ್ಟ ಕಷ್ಟವು ಸಾರ್ಥಕವಾಗುವೆಂದು ನಂಬುತ್ತೇನೆ. ಈ ಗ್ರಂಥ ವನ್ನು ಪಠಿಸುವ ಮಹನೀಯರು ಋಷಿವಚನಕ್ಕೆ ಗೌರವ ಕೊಟ್ಟು ಇದರಂತೆ ಲೋಕವು ಅನುವರ್ತಿಸುವಂತೆ ಪ್ರಯತ್ನಪಡುವುದಾದರೆ ಋಷಿಗಳ ಅನುಗ್ರಹಕ್ಕೂ, ಗೋಬ್ರಾಹ್ಮಣರ ಅನುಗ್ರಹಗಳಿಗೂ ಪಾತ್ರರಾಗಿ ದೈವಕೃಪೆಯಿಂದ ಆಯುರಾರೋಗ್ಯ ಭಾಗ್ಯಗಳನ್ನು ಹೊಂದುವುದರಲ್ಲಿ ಅಡ್ಡಿಯಿಲ್ಲ.

೩೬. ಗೋವುಗಳಿಗೆ ನಡೆಸಬೇಕಾದ ಕಾಮ್ಯಕರ್ಮಗಳನ್ನಿನ್ನು ಬರೆಯೋಣ. ಈ ಕಾಮ್ಯಕರ್ಮವನ್ನು ಮಾಡುವ ದಿವಸ ಯಜಮಾನನೂ, ಪುರೋಹಿತನೂ ಉಪವಾಸದಿಂದಿರಬೇಕು. ಪೂರ್ವಾಭಾದ್ರದ ನಕ್ಷತ್ರಯೋಗವಿರುವ ಅಷ್ಟಮಿಯ ದಿವಸ ಈ ಕರ್ಮವನ್ನು ಮಾಡಬೇಕು. ಅಹಿರ್ಬುಧ್ನ್ಯನೆಂದರೆ ಈಶ್ವರನೆಂದು ಅರ್ಥ. (ಅಷ್ಟಮೂರ್ತಿರಹಿರ್ಬುಧ್ನ್ಯಃ ಎಂದು ಅಮರದಲ್ಲಿದೆ) ಈಶ್ವರನು ಅಷ್ಟಮಿಗೆ ಅಧಿದೇವತೆಯಾದ್ದರಿಂದ ಅಹಿರ್ಬುಧ್ನ್ಯತಿಥಿಯೆಂದರೆ ಅಷ್ಟಮಿಯೆಂದು ಇಲ್ಲಿ ಅರ್ಥ ಮಾಡಿಕೊಳ್ಳಬೇಕು.

೩೭. ಇಂತಹ ಅಷ್ಟಮಿಯನ್ನು ನೋಡಿಕೊಂಡಿದ್ದು ಆ ದಿವಸ ಉಪವಾಸ ವಾಗಿದ್ದು ಮಾರನೆಯ ದಿವಸ ಚಂದ್ರೋದಯ ಸಮಯದಲ್ಲಿ (ಇಲ್ಲಿ ಬಹುಳ ಅಷ್ಟಮಿ ಯೆಂದು ಚೆನ್ನಾಗಿ ಗೊತ್ತಾಗುವುದು.) ಸ್ನಾನಮಾಡಿ ಬೆಳಗಾದ ಮೇಲೆ ಶಾಸ್ತ್ರವಿಧಿ ಯನ್ನನುಸರಿಸಿ ಅತ್ತೀ ಎಲೆಗಳ ತುದಿಯಿಂದ ಪಂಚಗವ್ಯವನ್ನೂ, ಕುಶೋದಕವನ್ನೂ ಮಿಶ್ರಮಾಡಿ,

ರೋಚನಾಂ ಚ ಸಮುಂಗಾಂ ಚ ಕ್ಷಿಪೇತ್ಕುಂಭದ್ವಯೇ ತತಃ ।
ಕುಂಭದ್ವಯಂ ಬುಧಃ ಕುರ್ಯಾದ್ಗಂಧಮಾಲ್ಯೋಜ್ಜ್ವಲಂ ದೃಢಂ ॥ ೩೮ ॥

ಅಕಾಲಮೂಲಂ ಸಂಸ್ಥಾಪ್ಯ ಕರ್ತಾ ತೇನ ತದಾ ಭವೇತ್ ।
ಸ್ನಾತ್ವಾ ಗೋಪಾಲಚೀರಾಣಿ ಪರಿಧಾಯ ಸಮಾಹಿತಃ ॥ ೩೯ ॥

ಪೂಜಯೇಚ್ಛಾಪ್ಯಹಿರ್ಬುಧ್ನ್ಯ ಮಾದಿತ್ಯಂಚ ತಥೈವ ಚ ।
ವರುಣಂ ಚ ಶಶಾಂಕಂ ಚ ಗಂಧಮಾಲ್ಯಾನುಸಂಪದಾ ॥ ೪೦ ॥

ಧೂಪದೀಪನಮಸ್ಕಾರೈಸ್ತಥೈವ ಬಲಿಕರ್ಮಣಾ ।
ಅಕ್ಷತಾನಾಂ ಚ ಪಾತ್ರಾಣಿ ತತೋರಾಮ ಚತುರ್ದಶ ॥ ೪೧ ॥

ಅಹಿರ್ಬುಧ್ನ್ಯಾಯ ರುದ್ರಾಯ ಸಫಲಾಂಶ್ಚ ನಿವೇದಯೇತ್ ।
ಖಟ್ವಾಂಗೇನ ತು ದಾತವ್ಯಂ ತಥಾ ಧೂಪಂ ದ್ವಿಜೋತ್ತಮ ॥ ೪೨ ॥

---

೩೮. ಈ ರೀತಿ ಪಂಚಗವ್ಯವನ್ನೂ ಕುಶೋದಕವನ್ನೂ ತುಂಬಿದ ಪಾತ್ರೆಗೆ ಗೋರೋಚನವನ್ನೂ, ಮಂಜಿಷ್ಠೆಯನ್ನೂ ಬೆರೆಸಿ ಅದನ್ನು ಎರಡು ಕಲಶಗಳಿಗೆ ಹಾಕಬೇಕು, ಈ ರೀತಿ ಎರಡು ಕಲಶಗಳು ಸಿದ್ಧವಾದ ಬಳಿಕ, ಆ ಎರಡು ಕಲಶ ಗಳನ್ನು ಗಂಧ ಹೂವುಗಳಿಂದ ಅಲಂಕಾರ ಮಾಡಬೇಕು.

೩೯. ಈ ಎರಡು ಕಲಶಗಳನ್ನು ಒಂದು ಶುದ್ಧವಾದ ಪ್ರದೇಶದಲ್ಲಿಟ್ಟು ಕರ್ತೃ (ಯಜಮಾನ) ವಾದವನು ಆ ಕಲಶತೀರ್ಥದಿಂದ; ಸ್ನಾನಮಾಡಿ ಹಸುವಿನ ಬಾಲದ ರೋಮಗಳಿಂದ ನೇಯ್ದ ಬಟ್ಟೆಯನ್ನುಟ್ಟುಕೊಂಡು ಸಮಾಧಾನ ಮನಸ್ಸಿನಿಂದ ಕೂಡಿದವನಾಗಿ,

೪೦. ಮೊದಲು ಈಶ್ವರನನ್ನೂ, ಆಮೇಲೆ ಸೂರ್ಯನನ್ನೂ, ಬಳಿಕ ವರುಣ ನನ್ನೂ, ಚಂದ್ರನನ್ನೂ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ತಾಂಬೂಲಗಳಿಂದ ಅರ್ಚನೆಮಾಡಬೇಕು.

೪೧. ಆ ಬಳಿಕ ಎಲ್ಲಾ ದೇವತೆಗಳಿಗೂ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಹದಿನಾಲ್ಕು ಅಕ್ಷತೆಯ ಪಾತ್ರೆಗಳನ್ನಿಟ್ಟು ಪೂಜಿಸಬೇಕು.

೪೨. ಪೂಜಾನಂತರ ಈ ಪೂಜಾ ಫಲವನ್ನು ಅಹಿರ್ಬುಧ್ನ್ಯ ನಾಮಕನಾದ ರುದ್ರ (ಈಶ್ವರ) ನಿಗೆ ಸಮರ್ಪಿಸಬೇಕು. ಆಮೇಲೆ ದೇವರಿಗೆ ಧೂಪವನ್ನು (ಧೂಪದ ಹೊಗೆ) ಹಾಕಬೇಕು.

ತತಸ್ತು ಪೂಜಾ ಕರ್ತವ್ಯಾ ದೇವದೇವಸ್ಯ ಚಕ್ರಿಣಃ ।
ಓಂಕಾರಪೂರ್ವಮಾಜ್ಯಂ ಚ ಸರ್ವಾಸಾಂ ಜುಹುಯಾತ್ತತಃ ॥ ೪೩ ॥

ದೇವತಾನಾಂ ಯಥೋಕ್ತಾನಾಮೇಕೈಕಸ್ಯ ಶತಂಶತಂ ।
ಗೋಪಾಲಶಫಶೃಂಗೈಶ್ಚ ತ್ರಿವೃತಂ ಕಾರಯೇನ್ಮಣಿಂ ॥ ೪೪ ॥

ಧಾರಣಂ ತಸ್ಯ ಕರ್ತವ್ಯಂ ಕಂಠೇ ಮೂರ್ಧ್ನ್ಯಥವಾ ಭುಜೇ ।
ಕರ್ತೇ ಚೈವೋಪದ್ರಷ್ಟ್ರೇ ಚ ಶಕ್ತ್ಯಾ ದೇಯಾ ಚ ದಕ್ಷಿಣಾ ॥ ೪೫ ॥

ಬ್ರಾಹ್ಮಣಾನಾಂ ಚ ಸರ್ವೇಷಾಂ ಯಥಾವದನುಪೂರ್ವಶಃ ।

ಅಲಂಘುಯನ್ಸ್ಪದ್ರಪದಾಮಥಾನ್ಯಾಂ
ಕರೋತಿಯಃ ಸ್ನಾನಮಿದಂ ಸದೈವ ।

---

೪೩. ಈ ರೀತಿ ಶಿವಪೂಜೆಯಾದಮೇಲೆ ವಿಷ್ಣುವಿನ ಪೂಜೆಯನ್ನು ಮಾಡಬೇಕು. ಪೂಜಾನಂತರದಲ್ಲಿ ಓಂ ರುದ್ರಾಯ ಸ್ವಾಹಾ, ಓಂ ವಿಷ್ಣವೇ ಸ್ವಾಹಾ ಎಂದು ಹೇಳಿಕೊಂಡು ಆಜ್ಯಹೋಮವನ್ನು ಮಾಡಬೇಕು.

೪೪. ಯಾವ ಯಾವ ದೇವತೆಗಳನ್ನು ಪೂಜೆಮಾಡಿರುತ್ತಾನೋ ಆಯಾ ದೇವತೆಗಳಿಗೆಲ್ಲಾ ಅವರವರ ಹೆಸರು ಹೇಳಿ ನೂರು ನೂರು ಆಜ್ಯಾಹುತಿಗಳನ್ನು ಕೊಡಬೇಕು. ಆ ಬಳಿಕ ಗೋವಿನ ಬಾಲದ ಕೂದಲು, ಗೋಶೃಂಗ, (ಪುಡಿ) ಗಳಿಂದ ಮೂರು ಸುತ್ತು ದಾರವನ್ನು ಹೊಸೆದು ಅದರ ಕಂಕಣವನ್ನು ಮಾಡಬೇಕು.

೪೫. ಅದನ್ನು ಕತ್ತಿಗಾಗಲೀ ತೋಳಿಗಾಗಲೀ ಕಟ್ಟಿಕೊಳ್ಳಬೇಕು. ಪುರೋಹಿತರಿಗೂ, ಋತ್ವಿಜರಿಗೂ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಕೊಟ್ಟು ತೃಪ್ತಿಪಡಿಸಬೇಕು.

೪೬. ಹಿಂದೆ ಹೇಳಿದಂತೆ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಬೇಕು. ಸ್ವಸ್ತಿವಾಚನವಾಗಬೇಕು. ಇದು ಗೋಕಾಮ್ಯಸ್ನಾನ ಶಾಂತಿಯೆಂದು ಹೇಳಿಸಿಕೊಳ್ಳುವುದು,

೪೭. ಇದನ್ನು ಪೂರ್ವಭಾದ್ರಪದಸ್ನಾನವಿಧಿಯೆಂದು ಕರೆಯಬಹುದು. ಇದುವರೆಗೆ ಹೇಳಿದ ಈ ವಿಧಿಯಿಂದ ಯಾರು ಸ್ನಾನಮಾಡಿ ಈ ಶಾಂತಿ ಕರ್ಮವನ್ನು

**ಭವಂತಿತಸ್ಯಾಯುತಶಶ್ಚ ಗಾವಃ**
**ಪರಾಮುವಾಪ್ನೋತಿ ತಥೈವ ವೃದ್ಧಿಂ ॥ ೪೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ಪುಷ್ಕರೋಪಾಖ್ಯಾನೆ ಗವಾಂ**
**ಶಾಂತಿಕರ್ಮನಾಮ ಚತುಶ್ಚತ್ವಾರಿಂಶತ್ತಮೋಽಧ್ಯಾಯಃ**

---

ಮಾಡಿ ಕಂಕಣಧಾರಣ ಮಾಡುವರೋ ಅಂತಹವರು ಹತ್ತುಸಾವಿರ ಹಸುಗಳನ್ನು ಕಟ್ಟಿ ಬಹಳ ಸೌಖ್ಯವನ್ನು ಅನುಭವಿಸುವರಲ್ಲದೆ ಮುಂದೆ ಮುಂದೆ ಅವರಿಗೆ ಗೋಸಂಪತ್ತು ಹೆಚ್ಚುತ್ತಲೇ ಬರುವುದೇ ಹೊರತು ಸ್ವಲ್ಪವೂ ಕಡಮೆಯಾಗುವುದಿಲ್ಲ.

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಗೋಶಾಂತಿಕರ್ಮವೆಂಬ ಹೆಸರಿನ
ನಲವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಪಂಚಚತ್ವಾರಿಂಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

**ರಾಜ್ಞಾಂ ತುರಂಗಮಾಯತ್ತೋ ವಿಜಯೋ ಭೃಗುನಂದನ ।**
**ತಸ್ಮಾತ್ಸರ್ವಪ್ರಯತ್ನೇನ ತುರಂಗಾಣಾಂ ಸಮುರ್ಜನಂ ॥ ೧ ॥**

**ರಾಜ್ಞಾ ಯತ್ನವತಾ ಭಾವ್ಯಂ ಪಾಲನೇ ಚ ವಿಶೇಷತಃ ।**
**ತಾವನ್ತಸ್ತುರಗಾ ಧಾರ್ಯಾ ಯಾವತಾಂ ಪೋಷಣಂ ಸುಖಂ ॥ ೨ ॥**

**ಕರ್ತುಂ ಶಕ್ಯಂ ನ ಧಾರ್ಯಾಸ್ತೇ ದುಃಖಿತಾಃ ಕ್ಷುಧಿತಾಸ್ತಥಾ ।**
**ದುಃಖಿತಾಸ್ತೇ ಶ್ರಿಯಂ ಲೋಕೇ ವಿನಿಘ್ನಂತಿ ಜಯಂ ತಥಾ ॥ ೩ ॥**

---

## ನಲವತ್ತೈದನೆಯ ಅಧ್ಯಾಯವು

ಪುಷ್ಕರನು ಪುನಃ ಹೇಳುತ್ತಾನೆ:— ಮಹಾರಾಜನು ಜಯಶಾಲಿಯಾಗಿರಬೇಕಾದರೆ ಕುದುರೆಗಳ ಮೂಲಕವೇ ಆಗಬೇಕಾಗಿರುವುದರಿಂದ ಸಕಲ ಪ್ರಯತ್ನಗಳಿಂದಲೂ ಕುದುರೆಗಳನ್ನು ಸಾಕಿಕೊಂಡಿರಬೇಕಾದುದು ಮುಖ್ಯ.

೨. ತನ್ನ ಅಶ್ವಾಲಯದಲ್ಲಿ ಕಟ್ಟಿರುವ ಕುದುರೆಗಳನ್ನು ತುಂಬಾ ಚೆನ್ನಾಗಿ ಸಾಕಬೇಕಾದುದು ಅತ್ಯವಶ್ಯಕವಾದುದರಿಂದ ಎಷ್ಟು ಕುದುರೆಗಳನ್ನು ಚೆನ್ನಾಗಿ ಆಹಾರ ಕೊಟ್ಟು ಸಾಕಬಹುದೋ ಅಷ್ಟೇ ಕುದುರೆಗಳನ್ನು ಮಹಾರಾಜನಾದವನು ಇಟ್ಟುಕೊಂಡಿರಬೇಕು.

೩. ಹೆಚ್ಚು ಕುದುರೆಗಳಿಗೆ ಒಳ್ಳೇ ಆಹಾರವನ್ನು ಹೊಟ್ಟೆ ತುಂಬಾ ಹಾಕಿ ಸಾಕುವುದಕ್ಕೆ ಶಕ್ತಿಯಿಲ್ಲದೆ ಹೋಗುವುದಾದರೆ ಸ್ವಲ್ಪ ಕುದುರೆಗಳನ್ನೇ ಕಟ್ಟಬೇಕು. ಕುದುರೆಗಳು ಆಹಾರವಿಲ್ಲದೆ ಹಸಿದುಕೊಂಡು ದುಃಖಿಸುತ್ತಿರಬಾರದು. ಹಾಗೇನಾದರೂ ಕುದುರೆಗಳು ದುಃಖಪಟ್ಟರೆ ಐಶ್ವರ್ಯಕ್ಕೂ ಹಾನಿ ಬರುವುದಲ್ಲದೆ ವಿಜಯವೂ ದುರ್ಲಭವಾಗುವುದು.

ಧಾರಣೀಯಾಃ ಸುವಿಹಿತಾ ವಿಧಿನಾ ಯವಸಾದಿತಾಃ ।
ವಿಧೃತಾಸ್ತೇ ತಥಾ ಕುರ್ಯುರ್ಲೋಕದ್ವಯಜಯಂ ತಥಾ ॥ ೪ ॥

ಮಂಗಲ್ಯಾಸ್ತೇ ಪವಿತ್ರಾಸ್ತೇ ರಜಸ್ತೇಷಾಂ ತಥೈವ ಚ ।
ಕೈವಲ್ಯಸ್ಯೈವ ತೇ ಭಕ್ತಾ ದೇವಸ್ಯ ಪರಮೇಷ್ಠಿನಃ ॥ ೫ ॥

ಅನ್ತೇ ಮಧ್ಯೇ ತಥಾ ತೇನ ನಾನುಜ್ಞಾತಾ ದಿವೌಕಸಾಂ ।
ತತೋಽಶ್ವಮೇಧತುರಗಸ್ತಸ್ಯೈವೈಕಸ್ಯ ಹೂಯತೇ ॥ ೬ ॥

ಸರ್ವರತ್ನಾಧಿಕೋ ಜಾತಸ್ತುರಗೋಽಮೃತಮಂಥನಾತ್ ।
ಉಚ್ಚೈಃಶ್ರವಾಸ್ತೇನ ಹಯಃ ಸರ್ವರತ್ನೋತ್ತಮಃ ಸ್ಮೃತಃ ॥ ೭ ॥

---

೪. ಲಕ್ಷಣವಾದ ಕುದುರೆಗಳನ್ನು ಕಾಪಾಡಿಕೊಂಡು ಅವಕ್ಕೆ ಒಳ್ಳೇ ಹುರುಳಿಯನ್ನೂ, ಹುಲ್ಲನ್ನೂ ಕೊಟ್ಟು ತೃಪ್ತಿಪಡಿಸುತ್ತಿದ್ದರೆ ಅಂತಹ ಕುದುರೆಗಳು ಈ ಲೋಕ ಪರಲೋಕಗಳಲ್ಲಿ ಜಯವನ್ನುಂಟುಮಾಡುವುವು.

೫. ಕುದುರೆಗಳು ಮಂಗಳಕರವಾದ ಪ್ರಾಣಿಗಳು, ಮತ್ತು ಪರಿಶುದ್ಧವಾದುವು. ಈ ಕುದುರೆಗಳು ಬ್ರಹ್ಮನ ಭಕ್ತ ಪ್ರಾಣಿಗಳಾದ್ದರಿಂದ ಇವು ಬ್ರಹ್ಮಕೈವಲ್ಯವನ್ನೂ ಸಹ ಕೊಡಬಲ್ಲುವು.

೬. ಕುದುರೆಗಳು ಮಧ್ಯದಲ್ಲೂ, ಕಡೆಯಲ್ಲೂ ದೇವತೆಗಳ ಅಪ್ಪಣೆಯಿಲ್ಲದೆ ಕೈವಲ್ಯಪದವಿಯನ್ನು ಕೊಡಲಾರವಾದ್ದರಿಂದ ಈ ಕುದುರೆಗಳಲ್ಲಿ ಅಶ್ವಮೇಧ ಯಾಗಾರ್ಹವಾದ ಕುದುರೆಯೂ ಸಹ ಇರುತ್ತದೆ. ಆದ್ದರಿಂದ ಅಶ್ವಮೇಧಯಾಗವು ಈ ಕುದುರೆಯ ವಧೆಯಿಂದಲೇ ಮಾಡಲ್ಪಡಬೇಕು.

೭. ಸಮುದ್ರಮಥನ ಕಾಲದಲ್ಲಿ ಹುಟ್ಟಿದ ಅಶ್ವರತ್ನವು ಸಕಲ ರತ್ನಗಳಿಗೂ ಶ್ರೇಷ್ಠವಾದ ರತ್ನವೆನಿಸಿಕೊಂಡಿದೆ. ಇದಕ್ಕೋಸ್ಕರವಾಗಿಯೇ ಆ ಕುದುರೆಗೆ ಉಚ್ಚೈಶ್ರವಸ್ಸೆಂಬ ಹೆಸರು ಬಂದಿದೆ.

**ಸಪಕ್ಷಾ ದೇವವಾಹ್ಯಾಸ್ತೇ ಮನುಷ್ಯಾಣಾಮಪಕ್ಷಕಾಃ ।**
**ಪದ್ಮನಾ ಶಾಲಿಹೋತ್ರೇಣ ವಾಹನಾರ್ಥಂ ಪುರಾ ಕೃತಾಃ ॥ ೮ ॥**

**ನೀರಾಜಯಂತಿ ತೇ ದೇಶಾನ್ಹ್ರೇಷಿತೈರ್ಬಲಶಾಲಿನಃ ।**
**ಗಂಧರ್ವಾಸ್ತೇ ವಿನಿರ್ದಿಷ್ಟಾಃ ಶ್ರಿಯಃ ಪುತ್ರಾ ಜಿತಶ್ರಮಾಃ ॥ ೯ ॥**

**ಪ್ರಧಾನಮಂಗಂ ಸೈನ್ಯಸ್ಯ ಶೋಭಾ ಚ ಪರಮಾ ಹಯಾಃ ।**
**ಸುದೂರಗಮನೇ ಯುದ್ಧೇ ಯಾನಶ್ರೇಷ್ಠಾಸ್ತುರಂಗಮಾಃ ॥ ೧೦ ॥**

**ವಲ್ಗನ್ತಮುಚ್ಚೈಸ್ತುರಗಂ ಚಾಮರಾಪೀಡಧಾರಿಣಂ ।**
**ಆರುಹ್ಯ ಯಾ ಭವೇತ್ತುಷ್ಟಿರ್ನಸಾ ರಾಮ ತ್ರಿವಿಷ್ಟಪೇ ॥ ೧೧ ॥**

---

೮. ದೇವತೆಗಳು ಕುಳಿತು ಸವಾರಿಮಾಡುವ ಕುದುರೆಗಳಿಗೆಲ್ಲಾ ರೆಕ್ಕೆಗಳಿವೆ. ಮನುಷ್ಯರು ಸವಾರಿಮಾಡುವ ಕುದುರೆಗಳಿಗೆ ರೆಕ್ಕೆಗಳಿಲ್ಲ. ಪೂರ್ವದಲ್ಲಿ ಶಾಲಿಹೋತ್ರನೆಂಬ ಬ್ರಾಹ್ಮಣನಿಂದ ಈ ಕುದುರೆಗಳು ಜನರ ಸವಾರಿಗೋಸ್ಕರವೇ ನಿರ್ಮಿತವಾಗಿವೆ.

೯. ಬಲವಾದ ಹೇಷಾರವವನ್ನು ಮಾಡುವ ಕುದುರೆಗಳಾದರೋ ಮಹಾಬಲ ಪರಾಕ್ರಮದಿಂದೊಡಗೂಡಿದವುಗಳಾಗಿ ಎಲ್ಲ ದೇಶಗಳಲ್ಲೂ ಸಂಚರಿಸಿ ಜಯವನ್ನು ತರತಕ್ಕವುಗಳಾಗಿರುವುವು. ಇವುಗಳಿಗೆ ಗಂಧರ್ವಾಶ್ವಗಳೆಂದು ಹೆಸರು. ಇವುಗಳು ಲಕ್ಷ್ಮಿಯ ಪುತ್ರರುಗಳು. ಇವುಗಳು ಎಷ್ಟೇ ಶ್ರಮವನ್ನಾಗಲೀ ಸಹಿಸಬಲ್ಲುವು.

೧೦. ಕುದುರೆಗಳು ರಾಜರ ಚತುರಂಗಬಲಗಳಲ್ಲಿ ಒಂದಂಗವಾಗಿವೆ. ಕುದುರೆಗಳು ಪರಮಸಂಪತ್ಕರವಾದ ಪ್ರಾಣಿಗಳು. ಯುದ್ಧಮಾಡುವುದಕ್ಕೆ ಹೊರಟಾಗಲೂ ದೂರಪ್ರಯಾಣಮಾಡಬೇಕಾದಾಗಲೂ ಕುದುರೆಗೆ ಸಮಾನವಾದ ಮತ್ತೊಂದು ಯಾವ (ಪ್ರಯಾಣಸಾಧನ) ಪ್ರಾಣಿ ಇಲ್ಲವೇ ಇಲ್ಲ.

೧೧. ಕಡಿವಾಣವನ್ನು ಹಾಕಿ ಅದನ್ನು ಹಿಡಿದುಕೊಂಡು ಅದರ ಮೇಲೆ ಕುಳಿತು, ಕುದುರೆಯು ಹೇಷಾರವವನ್ನು ಮಾಡುತ್ತಿರುವಾಗ ಎರಡು ಕಡೆಗಳಲ್ಲೂ ಚಾಮರಗಳಿಂದ ಬೀಸಿಸಿಕೊಳ್ಳುತ್ತಾ ಸವಾರಿಮಾಡಿಕೊಂಡು ಹೋಗುವ ಪುಣ್ಯವು ಮೂರುಲೋಕಗಳಲ್ಲೆಲ್ಲಿಯೂ ಇಲ್ಲ.

ಸನ್ನದ್ಧಪುರುಷಾರೂಢೈಃ ಸುಸನ್ನದ್ಧೈಸ್ತುರಂಗಮೈಃ ।
ದೃಷ್ಟ್ವೈರೇವಾರಿಸೈನ್ಯಸ್ಯ ಪತಂತಿ ಹೃದಯಾನ್ಯಲಂ ॥ ೧೨ ॥

ತುರಂಗಪಾತೋದ್ಧೃತ ಧೂಲಿದಂಡಂ
ಯಸ್ಯಾತಪತ್ರಾನುಕೃತಿಂ ಕರೋತಿ ।
ನಭಃ ಸಮುಗ್ರಾ ವಸುಧಾ ತು ತಸ್ಯ
ಶೈಲಾವತಂಸಾ ಭವತೀಹ ವಶ್ಯಾ ॥ ೧೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಅಶ್ವಪ್ರಶಂಸಾ ನಾಮ ಪಂಚಚತ್ವಾರಿಂಶತ್ತಮೋಽಧ್ಯಾಯಃ**

---

೧೨. ಕುದುರೆಗಳ ಮೇಲೆ ಸಾಲಂಕೃತರಾದ ಸವಾರರು ಕುಳಿತು ವಿಜಯ ಯಾತ್ರೆಗೋಸ್ಕರ ಹೋಗುತ್ತಿರುವಾಗ ಅವರ ಮುಖವನ್ನು ನೋಡಿದೊಡನೆಯೇ ಶತ್ರುಗಳ ಎದೆಯು ಬಿಚ್ಚಿಹೋಗುವುದು. ಈ ಚೋದ್ಯವನ್ನು ಕೇಳಯ್ಯಾ! ಪರಶುರಾಮ ! !

೧೩. ಯಾವ ಮಹಾರಾಜನು ಕುದುರೆಯ ಮೇಲೆ ಕುಳಿತುಕೊಂಡು ಸವಾರಿ ಮಾಡುತ್ತಾ ಹೋಗುವಾಗ ಆಕುದುರೆಯಕಾಲಿನ ತುಳಿತದಿಂದ ಎದ್ದ ಧೂಳುಮೇಲಕ್ಕೆ ಹಾರಿ ಛತ್ರಾಕಾರವಾಗಿ ಪರಿಣಮಿಸಿ ನಭೋಂತರಾಳವನ್ನು ಮುಟ್ಟುವುದೋ, ಅಂತಹ ಮಹಾರಾಜನಿಗೆ ಶೈಲಗಳಿಂದಲಂಕೃತವಾದ ಈ ಸಮುಸ್ತಭೂಮಂಡಲವೂ ವಶ್ಯವಾಗುವುದೆಂದು ತಿಳಿದುಕೋ! ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ದ್ವಿತೀಯ ಖಂಡದಲ್ಲಿ ಅಶ್ವಪ್ರಶಂಸೆಯೆಂಬ ಹೆಸರಿನ ನಲವತ್ತೈದನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಷಟ್‌ಚತ್ವಾರಿಂಶತ್ತಮೋಽಧ್ಯಾಯಃ

---

### ಪುಷ್ಕರ ಉವಾಚ

ಅತಃ ಪರಂ ಪ್ರವಕ್ಷ್ಯಾಮಿ ಶೃಣು ತೇಷಾಂ ಚಿಕಿತ್ಸಿತಂ ।
ವೃಷೋ ನಿಂಬಬೃಹತ್ಯೌ ಚ ಗುಡೂಚೀ ಚ ಸಮಾಂಸಿಕಾ ॥ ೧ ॥

ಶಿಂಖಾಣಕಹರಾ ಪಿಂಡೀ ಸ್ವೇದಸ್ಯ ಶಿರಸಸ್ತಥಾ ।
ಯಾವಶೂಕಂ ಸಮುದನಂ ಪಿಪ್ಪಲೀ ವಿಶ್ವಭೇಷಜಂ ॥ ೨ ॥

ಸರ್ಷಪಾ ಗೃಹಧೂಮಶ್ಚ ನಿರ್ಗುಂಡೀ ಸುರಸಾ ವಚಾ ।
ನಿಂಬಾಪತ್ರಯುತಾ ಪಾಯೌ ವರ್ತಿಃ ಶೂಲವಿನಾಶಿನೀ ॥ ೩ ॥

---

### ನಲವತ್ತಾರನೆಯ ಅಧ್ಯಾಯವು

೧. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ:—ಎಲೈ ಪರಶುರಾಮನೇ! ಕುದುರೆಗಳಿಗೇನಾದರೂ ಖಾಯಿಲೆಬಂದಾಗ ಅವುಗಳ ಔಷಧಕ್ರಮಗಳನ್ನು ಈಗ ಇನ್ನುಮುಂದೆ ವಿವರಿಸುತ್ತೇನೆ, ಕೇಳು

೨. ಕುದುರೆಗಳ ಮೂತಿ (ತಲೆ) ಯು ಬೆವರು (ನೋಯ) ತ್ತಿದ್ದರೆ ಆಡುಸೋಗೆಸಪ್ಪು, ಬೇವಿನಸಪ್ಪು, ಹೆಗ್ಗುಳದಬೇರು, ಅಮೃತವಳ್ಳಿ, ಜಟಾಮಾಂಸಿಯನ್ನು ಸಹ ಕುಟ್ಟಿ ಅರೆದು ಉಂಡೆಮಾಡಿ ತಿನ್ನಿಸಿದರೆ ಶಿರೋರೋಗ ಪರಿಹಾರವಾಗುವುದು.

೩. ಯವಕ್ಷಾರ, ನುಗ್ಗಾರಿಕಾಯಿ, ಹಿಪ್ಪಲಿ, ಶುಂಠಿ, ಸಾಸಿವೆ, ಇಲ್ಲಣ, ಪಿಕ್ಕೆ, ತುಲಸಿ, ಬಜೆ, ಬೇವಿನಸಪ್ಪು, ಇವುಗಳನ್ನು ಅರೆದು ಬತ್ತಿಮಾಡಿ ಗುದದ್ವಾರದಲ್ಲಿ ಪ್ರಯೋಗಿಸಿದರೆ ಹೊಟ್ಟೇನೋವು ಪರಿಹಾರವಾಗುವುದು.

ಹಿಂಗುಂ ಪುಷ್ಕರಮೂಲಂ ಚ ನಾಗರಂ ಸಾಮ್ಲವೇತಸಂ ।
ಪಿಪ್ಪಲೀಸೈಂಧವಯುತಂ ಶೂಲಘ್ನಂ ತೂಷ್ಣವಾರಿಣಾ ॥ ೪ ॥

ನಾಗರಾತಿವಿಷೌ ಮುಸ್ತಾ ಸಾನಂತಾ ಬಿಲ್ವಮಾಲಕಾ ।
ಕ್ವಾಥೋ ಮಾಂಸಂ ಪಿಬೇದ್ವಾಜೀ ಸರ್ವಾತೀಸಾರನಾಶನಂ ॥ ೫ ॥

ಪ್ರಿಯಂಗುಶಾರಿವಾಭ್ಯಾಂ ಚ ಯುಕ್ತಮಾಜಂ ಶೃತಂ ಪಯಃ ।
ಪರ್ಯಾಪ್ತಶರ್ಕರಂ ಪೀತ್ವಾ ಶ್ರಮಾದ್ವಾಜ್ಯವಮುಚ್ಯತೇ ॥ ೬ ॥

ದ್ರೋಣಿಕಾಯಾಂ ತು ದಾತವ್ಯಾ ತೈಲವಸ್ತಿಸ್ತುರಂಗಮೇ ।
ಕೋಷ್ಠಜಾಶ್ಚ ಶಿರಾವೇಧ್ಯಾಸ್ತೇನ ತಸ್ಯ ಸುಖಂ ಭವೇತ್ ॥ ೭ ॥

ದಾಡಿಮಂ ತ್ರಿಫಲಾಂವ್ಯೋಷಂ ಗುಡಂ ಚ ಸಮಭಾಗಿಕಂ ।
ಪಿಂಡಮೇತತ್ಪ್ರದಾತವ್ಯಮಶ್ವಾನಾಂ ಕಾಸನಾಶನಂ ॥ ೮ ॥

---

೪. ಇಂಗು, ತಾವರೇಗೆಡ್ಡೆ, ಶುಂಠಿ, ವಾಟೀಹುಳಿ, ಹಿಪ್ಪಲಿ, ಸೈಂಧವಲವಣ ಗಳನ್ನು ಕುಟ್ಟಿ ಅರೆದು ಬಿಸಿನೀರಿಗೆಬೆರಸಿ ಕುಡಿಸಿದರೆ ಹೊಟ್ಟೆನೋವು ಗುಣವಾಗುವುದು.

೫. ಶುಂಠಿ, ಅತಿಬಜೆ, ಕೊನ್ನಾರಿಗೆಡ್ಡೆ, ತುರುಚಿಸಪ್ಪು, ಬಿಲ್ವಪತ್ರೆಚಕ್ಕೆ, ಇವುಗಳನ್ನು ಪುಡಿಮಾಡಿ ಇದರ ಕಷಾಯಮಾಡಿಕೊಂಡು ಒಂದುತಿಂಗಳು ಕುದುರೆಗೆ ಕುಡಿಸಿದರೆ ಅತಿಸಾರವು (ಭೇದಿ) ಸಹ ನಿಂತುಹೋಗುತ್ತದೆ.

೬. ಗೌಲ (ಪ್ರೆಂಖಣದ ಚಟ್ಟು), ಸೊಗದೇಬೇರು, ಕಾದ ಆಡಿನಹಾಲು ಇವುಗಳಿಗೆ ಸರಿಯಾಗಿ ಸಕ್ಕರೆಬೆರಸಿ ಕುದುರೆಗಳಿಗೆ ಕುಡಿಸಿದರೆ ಆಯಾಸವು ಪರಿಹಾರ ವಾಗುವುದು.

೭. ಅಗಲವಾದ ಪೀಪಾಯಿಯಲ್ಲಿ ಎಣ್ಣೆಯನ್ನು ಹಾಕಿ ಕುದುರೆಗೆ ವಸ್ತಿಕರ್ಮ ವನ್ನು (ಪಿಚಕಾರಿ) ಮಾಡಿದರೆ ಎಲವು ಪಕ್ಕೆಸಂಬಂಧವಾದ ರೋಗಗಳೂ ತಲೆನೋವೂ ಸಹ ಗುಣವಾಗುವುದು.

೮. ದಾಡಿಂಬೀಸಿಪ್ಪೆ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಕಾಯಿ, ಶುಂಠಿ, ಹಿಪ್ಪಲಿ, ಮೆಣಸುಗಳ ಪುಡಿಮಾಡಿ ಬೆಲ್ಲದಹುಡಿಗೆ ಬೆರಸಿ ಉಂಡೆಮಾಡಿ ತಿನ್ನಿಸಿದರೆ ಕುದುರೆಯ ಕಾಸವು (ಕೆಮ್ಮಲು) ನಾಶವಾಗುವುದು.

**ಪ್ರಿಯಂಗುರೋಧ್ರಮಧುಭಿಃ ಪಿಬಂತಿಸ್ಮ ರಸಂ ಹಯಾಃ ।**
**ಕ್ಷೀರಂ ವಾಮಂ ಚ ಕಾಲೋಢ್ಯಂ ಕಶ್ಮಲಾದ್ವಿಪ್ರಮುಚ್ಯತೇ ॥ ೯ ॥**

**ಪ್ರಸ್ಕನ್ನೇಷು ಚ ಸರ್ವೇಷು ಶ್ರೇಯ ಆದೌ ವಿಶೋಷಣಂ ।**
**ಅಭ್ಯಂಗೋದ್ವರ್ತನಸ್ನೇಹನಸ್ಯ ವರ್ತಿಕ್ರಮಸ್ತತಃ ॥ ೧೦ ॥**

**ಪ್ರಸ್ಕನ್ನಂ ಪ್ರಶಮಂ ಯಾತಿ ಯದಿ ನಾನೇನ ಕರ್ಮಣಾ ।**
**ಉರಸ್ಯುಪಾಂತಪಾರ್ಶ್ವೇ ಚ ತತೋ ವಿಸ್ರಾವಯೇಚ್ಛಿರಾಂ ॥ ೧೧ ॥**

**ಜ್ವಲಿತಾನಾಂ ತುರಂಗಾಣಾಮಯಮೇವ ಕ್ರಿಯಾಕ್ರಮಃ ।**
**ನಸ್ಯಮೇಕಂ ವಿನಾರಾಮ ಸರ್ವಮೇತತ್ಪ್ರಶಸ್ಯತೇ ॥ ೧೨ ॥**

**ರೋಧ್ರಂಕರಂಜಯೋರ್ಮೂಲಂ ಮಾತುಲುಂಗಾಗ್ನಿನಾಗರಾಃ ।**
**ಕುಷ್ಠಹಿಂಗುವಚಾರಾಸ್ನಾ ಲೇಪೋಽಯಂ ಶೋಫನಾಶನಃ ॥ ೧೩ ॥**

---

೯. ಗೌಲ (ಸುಗಂಧದ್ರವ್ಯ), ಲೋಧ್ರ, ಜೇನುತುಪ್ಪದ ರಸಗಳನ್ನು ಹಸು ವಿನ ಹಾಲಿಗೆಬೆರಸಿ ಚೆನ್ನಾಗಿಕಲಕಿ ಕುದುರೆಗಳಿಗೆ ಕುಡಿಸಿದರೆ ಹೊಟ್ಟೆಯಲ್ಲಿರುವ ಕಲ್ಮಷಗಳೆಲ್ಲಾ ನಾಶವಾಗುವುವು.

೧೦. ಕುದುರೆಗಳ ಮೂಳೆಗಳು ಜಾರಿದಸಂದರ್ಭದಲ್ಲಿ ಮೊದಲು ಭೇದಿಗೆ ಕೊಡಬೇಕು. ಆ ಬಳಿಕ ಅಭ್ಯಂಗನ, ಉಜ್ಜುವುದು, ಸ್ನಾನ, ಎಣ್ಣೆಹಚ್ಚುವುದು, ನಶ್ಯವರ್ತಿಚಿಕಿತ್ಸೆಗಳನ್ನು ಮಾಡಬೇಕು.

೧೧. ಇದರಿಂದ ಜಾರಿದಮೂಳೆ ಸರಿಯಾಗದೆಹೋದರೆ ಮೂಳೆಯು ಮುರಿದ ಸ್ಥಳಗಳಲ್ಲೂ, ಎದೆಯಲ್ಲೂ, ಪಕ್ಕೆಗಳ ನರಗಳಲ್ಲೂ ಚೆನ್ನಾಗಿ ಉಜ್ಜಬೇಕು. (ನೀವಬೇಕು).

೧೨. ಕುದುರೆಗಳಿಗೆ ಜ್ವರ ಬಂದ ಸಂದರ್ಭದಲ್ಲಿಯೂ ಸಹ ಮೇಲೆ ಬರೆದ ಔಷಧವನ್ನೇ ಹೊಟ್ಟೆಗೆ ಕೊಡಬಹುದು. ಈ ಸಂದರ್ಭದಲ್ಲಿ ನಶ್ಯಕ್ರಿಯೆಯನ್ನು ಮಾತ್ರ ಮಾಡಬಾರದು.

೧೩. ಲೋಧ್ರದ ಚಕ್ಕೆ, ಹೊಂಗೇಬೇರು, ಮಾದಳದಹಣ್ಣು, ಚಿತ್ರಮೂಲ, ಶುಂಠಿ, ಚಂಗಲಕೋಷ್ಟ, ಇಂಗು, ಬಜೆ, ಸಣ್ಣರಾಸ್ಮೆಯನ್ನು ಪುಡಿಮಾಡಿ ಕಲಸಿ ಲೇಪಿಸಿದರೆ ಕುದುರೆಗಳ ಶೋಭೆ(ಮೈ ಊದುವಿಕೆ)ಯ ರೋಗವು ವಾಸಿಯಾಗುವುದು.

ಸಮಾಸೇನ ಶಿರಾಂ ವಿಧ್ಯಾದ್ದೇಯಾವ್ಯಾಪಿ ಜಲೌಕಸಃ ।
ತ್ರ್ಯಹೇತ್ರ್ಯಹೇವಾ ಧರ್ಮಜ್ಞ ನಸ್ಯಕರ್ಮಸಮಾಚರೇತ್ ॥ ೧೪ ॥

ಮಂಜಿಷ್ಠಾ ಮಧುಕಂ ದ್ರಾಕ್ಷಾ ಬೃಹತ್ಯೌ ರಕ್ತಚಂದನಂ ।
ತ್ರಪುಸೀಬೀಜಮೂಲಾನಿ ಶೃಂಗಾಟಕಕಶೇರುಕಂ ॥ ೧೫ ॥

ಅಜಾಪಯಃ ಶೃತಮಿದಂ ಸುಶೀತಂ ಶರ್ಕರಾನ್ವಿತಂ ।
ಪೀತ್ವಾ ನಿರಶನೋ ವಾಜೀ ರಕ್ತಮೇಹಾತ್ಪ್ರಮುಚ್ಯತೇ ॥ ೧೬ ॥

ಮನ್ಯಾಹನುನಿಗಾಲಸ್ಥಃ ಶಿರಃಶೋಫೋ ಗಲಗ್ರಹಃ ।
ಅಭ್ಯಂಗಃ ಕಟುತೈಲೇನ ತತ್ರ ತೇಷ್ವೇವ ಶಸ್ಯತೇ ॥ ೧೭ ॥

---

೧೪-೧೫. ಕುದುರೆಯ ಅಸ್ಥಿರೋಗಗಳಿಗೆ ಅವುಗಳ ನರಗಳನ್ನು ಚೆನ್ನಾಗಿ ಎಣ್ಣೆಯಿಂದ ತಿಕ್ಕಬೇಕು. ಪೀನಸರೋಗಗಳಿಗೆ ನಶ್ಯಕರ್ಮವನ್ನಾಚರಿಸಬೇಕು. ಈ ನಶ್ಯವನ್ನು ಮೂರುದಿನಗಳಿಗೊಮ್ಮೆ ಕುದುರೆಗಳಿಗೆ ಮೂಸಿಸುತ್ತಲೇ ಇರಬೇಕು. ಆ ನಶ್ಯಮಾಡುವ ಕ್ರಮವೇನೆಂದರೆ :—ಮಂಜಿಷ್ಠೆ, ಅತಿಮಧುರ, ದ್ರಾಕ್ಷಿ, ಹೆಗ್ಗುಳ್ಳ, ಕೆಂಪುಗಂಧದ ಚಕ್ಕೆ, ತಪಸೀಬೀಜ, ಅದರಬೇರು, ಕರ್ಕಾಟಕಶೃಂಗಿ, ಕಶೇರುಕೆಯ ಬೀಜಗಳನ್ನು ಕುಟ್ಟಿ ಪುಡಿಮಾಡಿ ನುಣ್ಣಗೆ ಶೋಧಿಸಿ ನಶ್ಯದಂತೆ ಮಾಡಿಟ್ಟುಕೊಂಡಿದ್ದು ಕುದುರೆಗಳ ಮೂಗಿಗೆ ಮೂಸಿಸಬೇಕು.

೧೬. ಕುದುರೆಗೆ ರಕ್ತಮೇಹ ರೋಗವೇನಾದರೂ ಪ್ರಾಪ್ತವಾದರೆ ಹಸೀ ಆಡಿನ ಹಾಲನ್ನು ಚೆನ್ನಾಗಿ ಕಾಯಿಸಿ ಸಕ್ಕರೆ ಬೆರಸಿ ಕುಡಿಸಬೇಕು. ಇತರ ಆಹಾರವೇನನ್ನೂ ಕೊಡದೆ ಇದ್ದರೆ, ಈ ಕ್ಷೀರಪಾನದಿಂದಲೇ ರೋಗವು ಗುಣವಾಗುವುದು.

೧೭. ದವಡೆ, ಕತ್ತು ಮುಂತಾದ ಸ್ಥಳಗಳಲ್ಲೇನಾದರೂ ಕುದುರೆಗಳಿಗೆ ಬಾಧೆಯಾದರೆ ಕಯ್ಯೆಣ್ಣೆಯನ್ನು ಚೆನ್ನಾಗಿ ಉಜ್ಜಿ ಬಿಸಿನೀರಿನಿಂದ ಅಭ್ಯಂಗನಸ್ನಾನ ಮಾಡಿಸಿದರೆ ಗುಣವಾಗುವುದು.

ಯವ್ಯೈಃ ಸ್ನಿಗ್ಧಕುಲತ್ಥೈಶ್ಚ ತತಃ ಸ್ವೇದಂ ಪ್ರಯೋಜಯೇತ್ ।
ಮೃದೂಕೃತೇ ತತಃ ಶೋಫೇ ನಸ್ಯಕರ್ಮ ಸಮಾಚರೇತ್ ॥ ೧೮ ॥

ವಚಾ...............ಸೈಂಧವಂ ಸ್ವರಸೋ ರಸಃ ।
ಕೃಷ್ಣಾಹಿಂಗುಯುತೈರೇಭಿಃ ಕೃತ್ವಾ ನಸ್ಯಂ ನ ಸೀದತಿ ॥ ೧೯ ॥

ನಿಶಾ ಜ್ಯೋತಿಷ್ಮತೀ ಪಾಠಾ ಕೃಷ್ಣಾ ಕುಷ್ಠಾ ವಚಾ ಮಧು ।
ಜಿಹ್ವಾಸ್ತಂಭೇ ಚ ಲೇಪೋಽಯಂ ಗುಡಮೂತ್ರಯುತೋ ಹಿತಃ ॥ ೨೦ ॥

ತಿಲೈರ್ಯುಕ್ತಾ ರಜನ್ಯಾ ಚ ನಿಂಬಪತ್ರೈಶ್ಚ ಯೋಜಿತಾ ।
ಕ್ಷೌದ್ರೇಣ ಶೋಧಿನೀ ಪಿಂಡೀ ಸರ್ಪಿಷಾ ವ್ರಣರೋಪಿಣೀ ॥ ೨೧ ॥

---

೧೮. ಅಕ್ಕಿ, ಹುರುಳಿಗಳನ್ನು ನೆನೆಸಿ ಚೆನ್ನಾಗಿ ತಿರುವಿ ನುಣ್ಣಗೆ ಮಾಡಿಕೊಂಡು ಮೈ ಬೆವರುತ್ತಿರುವ ಶೋಭೆರೋಗವಿರುವ ಕುದುರೆಗೆ ನುಣ್ಣಗೆ ಲೇಪಿಸಬೇಕು. ಅದರಿಂದ ಚರ್ಮವು ಮೃದುವಾಗಿ ಹದವಾಗುತ್ತದೆ. ಆ ಬಳಿಕ ಮೇಲೆ ವಿವರಿಸಿದ ನಶ್ಯಕರ್ಮವನ್ನು ಮಾಡಬೇಕು. ಹೀಗೆ ಮಾಡಿದರೆ ಗುಣವಾಗುವುದು.

೧೯. ಬಜೆ, ಸೈಂಧವಲವಣ, ತುಲಸಿಸಪ್ಪಿನ ರಸ, ಹಿಪ್ಪಲಿ, ಇಂಗುಗಳನ್ನು ಬೆರಸಿ ಕುಟ್ಟಿ ನುಣ್ಣಗೆ ಪುಡಿಮಾಡಿ ಈ ನಶ್ಯವನ್ನು ಮೂಸಿಸಿದರೂ ಸಹ ಕುದುರೆಯ ಪೀನಸರೋಗವು ವಾಸಿಯಾಗುತ್ತದೆ.

೨೦. ಅರಿಶಿನ, ಜ್ಯೋತಿರ್ಲತೆ (ಗಂಗುಂಗೀ), ಅಗಿಲುಶುಂಠಿ, ಹಿಪ್ಪಲಿ, ಚಂಗಲಕೋಷ್ಠ, ಬಜೆ ಇವುಗಳ ಚೂರ್ಣವನ್ನು ಜೇನುತುಪ್ಪದೊಡನೆ ಬೆರಸಿ, ಬೆಲ್ಲದ ಹುಡಿ, ಗಂಜಲಕ್ಕೆ ಸೇರಿಸಿ (ಕಲಸಿ) ನಾಲಿಗೆಗೆ ಲೇಪಿಸಿದರೆ ಕುದುರೆಗಳ ನಾಲಿಗೆ ಸಂಬಂಧವಾದ ಸಕಲ ರೋಗಗಳೂ ಪರಿಹಾರವಾಗುವುವು.

೨೧. ಕುದುರೆಗಳಿಗೆ ಗಾಯಗಳೇನಾದರೂ ಆದರೆ ಎಳ್ಳು, ಅರಿಶಿನವನ್ನು ಬೆರಸಿ ಅರೆದು ಬೇವಿನಸಪ್ಪಿನ ರಸಕ್ಕೆ ಬೆರಸಿ ಜೇನುತುಪ್ಪದಲ್ಲಿ ಕಲಸಿ, ಅದನ್ನು ತುಪ್ಪ ಸೇರಿಸಿ ಉಂಡೆಮಾಡಿ ಅದನ್ನು ಗಾಯದಮೇಲೆ ಹಚ್ಚುತ್ತಾ (ಲೇಪಿಸುತ್ತಾ) ಬಂದರೆ ಗಾಯಗಳು ಮಾಯುವುವು.

ಅಭಿಘಾತೇನ ಖಂಜಂತಿ ಯೇನಾಶ್ವಾಸ್ತೀವ್ರವೇದನಾಃ ।
ಪರಿಷೇಕಕ್ರಿಯಾ ತೇಷಾಂ ತೈಲೇನಾಶು ರುಜಾಪಹಾ ॥ ೨೨ ॥

ದೋಷಕೋಪಾಭಿಘಾತಾಭ್ಯಾಂ ತಿಲಜೇ ಜೃಂಭತೇ ಸದಾ ।
ಶಾಂತಿರ್ಮಧ್ವಾಜ್ಯಬಂಧಾಭ್ಯಾಂ ಪಕ್ವಂ ಭಿನ್ನೇ ವ್ರಣೇ ಕ್ರಮಃ ॥ ೨೩ ॥

ಅಶ್ವತ್ಥೋದುಂಬರಪ್ಲಕ್ಷಮಧೂಕವಟಕಲ್ಕಕೈಃ ।
ಪ್ರಭೂತಸಲಿಲಃ ಕ್ವಾಥಃ ಸುಖೋಷ್ಣೋ ವ್ರಣಶೋಧನಃ ॥ ೨೪ ॥

ಶತಾಹ್ವಾ ನಾಗರಂ ರಾಸ್ನಾ ಮಂಜಿಷ್ಠಾಕುಷ್ಠಸೈಂಧವೈಃ ।
ದೇವದಾರುವಚಾಯುಗ್ಮರಜನೀರಕ್ತಚಂದನೈಃ ॥ ೨೫ ॥

---

೨೨. ಕುದುರೆಗಳು ಬಹು ದೂರ ಹೋಗಿ ಬಳಲಿ ಬಂದ ಸಮಯದಲ್ಲಿ ಅವು ಬಹಳ ಆಯಾಸದಿಂದ ಬೆಚ್ಚಿ ಬೀಳುತ್ತವೆ. ಅಂತಹ ಸಮಯದಲ್ಲಿ ಅವುಗಳ ಮೈ ಕಾಲುಗಳನ್ನೆಲ್ಲಾ ಎಣ್ಣೆಯಿಂದ ತಿಕ್ಕಿ ಬಿಸಿನೀರನ್ನು ಹಿತವಾಗುವಂತೆ ಹಾಕುತ್ತಾ (ಪರಿಷೇಕಕ್ರಿಯೆಯನ್ನು ಮಾಡುತ್ತಾ) ಬಂದರೆ ಎಂತಹ ತೀವ್ರವೇದನೆಯೂ ಗುಣವಾಗುವುದು.

೨೩. ಮೈ ಕೈ ಬಿರಿದುಹೋಗಿದ್ದರೆ ಅಥವಾ ಮೂಳೆ ಮುಂತಾದುವು ಮುರಿದು ಹೋಗಿದ್ದ ಸಂದರ್ಭದಲ್ಲಿ ತುಪ್ಪ, ಜೇನುತುಪ್ಪಗಳನ್ನು ಕಲಸಿ ಹಚ್ಚಿದರೆ ಗುಣವಾಗುವುದು. ಇತರ ರೋಗಗಳಿಗೂ, ಕೋಪ, ಆಯಾಸವಿದ್ದಾಗಲೂ ಎಣ್ಣೆ ಹಚ್ಚಬೇಕು.

೨೪. ಗಾಯಗಳು ವಾಸಿಯಾಗಬೇಕಾದರೆ ಅರಳಿ, ಅತ್ತಿ, ಗೋಣಿ, ಹಿಪ್ಪೆ, ಆಲದ ಮರದ ಚಕ್ಕೆಗಳನ್ನು ನೀರಿಗೆ ಹಾಕಿ ಕಷಾಯಮಾಡಿ ಸುಖೋಷ್ಣವಾಗಿ ಗಾಯದಮೇಲೆ ಸವರುತ್ತಾ ಬಂದರೆ ಗಾಯವು ಮಾಯುವುದು.

೨೫-೨೬. ಸಬ್ಬಸಿಗೆ, ಶುಂಠಿ, ರಾಸ್ನೆ, ಮಂಜಿಷ್ಠೆ, ಚಂಗಲಕೋಷ್ಠ, ಸೈಂಧವ ಲವಣ, ದೇವದಾರು, ಬಿಳೀಬಜೆ, ಬಜೆ, ಅರಿಶಿನ, ಕೆಂಪು ಚಂದನ ಇವುಗಳ ಕಷಾಯ ಮಾಡಿ, ಎಣ್ಣೆ ಬೆರಸಿ, ಅಮೃತವಳ್ಳಿಹಾಲು ಬೆರಸಿ, ಅಶಕ್ತಿಯುಳ್ಳ ಕೃಶವಾದ ಮತ್ತು ಕ್ಷೀಣಿಸುತ್ತಿರುವ ಕುದುರೆಗಳಿಗೆ ವಸ್ತಿಪ್ರಯೋಗ ಮಾಡಿದರೂ, ನಶ್ಯಕರ್ಮ

ತೈಲಂ ಸಿದ್ಧಂ ಕಷಾಯೇಣ ಗುಡೂಚ್ಯಾ ಪಯಸಾ ಸಹ ।
ಪ್ರಕ್ಷೇಪಣೇ ವಸ್ತಿ ನಸ್ಯೇ ಚ ಯೋಜ್ಯಂ ಸರ್ವತ್ರ ಲಂಘನೇ ॥ ೨೬ ॥

ರಕ್ತಸ್ರಾವೋ ಜಲೌಕಾಭಿರ್ನೇತ್ರಾಂತೇ ನೇತ್ರರೋಗಿಣಃ ।
ಖದಿರೋದುಂಬರಾಶ್ವತ್ಥಕಷಾಯೇಣ ಚ ಧಾವನಂ ॥ ೨೭ ॥

ಧಾತ್ರೀದುರಾಲಭಾತಿಕ್ತಾಪ್ರಿಯಂಗುಂಕುಂಕುಮೈಃ ಸಮೈಃ ।
ಗುಡೂಚ್ಯಾ ಕೃತಕಃ ಕಲ್ಕೋ ಹಿತಮುಷ್ಣಾವಲಂಬಿತೇ ॥ ೨೮ ॥

ಉಪಾಂತೇ ಚ ಶಿರಾಸ್ರಾವೇ ಮುಷ್ಕಶೋಫೇ ತಥೈವ ಚ ।
ಕ್ಷಿಪ್ರಕಾರಿಣಿ ದೋಷೇ ಚ ಸದ್ಯೋ ವೇಧನಮಿಷ್ಯತೇ ॥ ೨೯ ॥

ಗೋಶಕೃತ್ಸರ್ಜಿಜಾಕುಷ್ಠರಜನೀತಿಲಸರ್ಷಪೈಃ ।
ಗವಾಂ ಮೂತ್ರೇಣ ಪಿಷ್ಟೈಶ್ಚ ಮರ್ದನಂ ಕಂಡುನಾಶನಂ ॥ ೩೦ ॥

---

ಮಾಡಿದರೂ ಗುಣವಾಗುವುದು. ಇಂತಹ ಸಂದರ್ಭದಲ್ಲಿ ಕುದುರೆಗಳಿಗೆ ಆಹಾರ ಕೊಡಕೂಡದು.

೨೭. ರಕ್ತ ಸುರಿಯುತ್ತಿರುವಾಗಲೂ, ಕಣ್ಣಿನಲ್ಲಿ ನೀರು ಸುರಿಯುತ್ತಿರುವಾಗಲೂ ಸಹ ಕಗ್ಗಲಿ, ಅತ್ತಿ, ಅರಳಿ ಚಕ್ಕೆಗಳ ಕಷಾಯದಿಂದ ಕಣ್ಣನ್ನು ತೊಳೆಯುತ್ತಾ ಬಂದರೆ ಜಲಸ್ರಾವ ರಕ್ತಸ್ರಾವಗಳು ನಿಲ್ಲುವುವು.

೨೮. ನೆಲ್ಲಿಕಾಯಿ, ತುರುಚಿಸಪ್ಪು, ಕಟುಕರೋಹಿಣಿ, ಪ್ರೇಂಖಣ ಮತ್ತು ಕುಂಕುಮಕೇಸರಿ ಹೂವನ್ನು ಸಹ ಸಮಭಾಗವಾಗಿ ಸೇರಿಸಿ ಅಮೃತವಳ್ಳಿಯೊಡನೆ ಬೆರಸಿ ಅರೆದು ಕಲ್ಕ್ಯಮಾಡಿ ಅದನ್ನು ತಿನ್ನಿಸಿದರೆ, ಅದರಿಂದ ಕುದುರೆಗಳಿಗೆ ಅತೀ ಉಷ್ಣವಾಗಿದ್ದರೆ ಅದು ಕೂಡಲೆ ತಂಪು ಮಾಡುವುದು.

೨೯. ಮತ್ತು ಈ ಕಲ್ಕ್ಯ ಸೇವನೆ ಮಾಡಿಸೋಣದರಿಂದ ಕುದುರೆಗಳ ಶಿರೋವೇದನೆಯೂ, ವೃಷಣಗಳು ಊದಿಕೊಳ್ಳುವಿಕೆಯೂ, ಇನ್ನೂ ಸಣ್ಣ ಸಣ್ಣ ರೋಗಗಳೂ ಸಹ ಗುಣವಾಗುವುವು.

೩೦. ಕುದುರೆಗಳಿಗೆ ತಿಮಿರ (ಕಡಿತ) ಹತ್ತಿದಾಗ ಹಸುವಿನ ಸಗಣಿ, ರಾಳ, ಚಂಗಲಕೋಷ್ಠ, ಸರ್ಜಕ್ಷಾರ, ಅರಿಶಿನ, ಎಳ್ಳು, ಸಾಸುವೆಗಳನ್ನು ಹಸುವಿನ ಗಂಜಳದಲ್ಲಿ ಅರೆದು ನುಣ್ಣಗೆ ಮಾಡಿ ಕಡಿತದ ಜಾಗದಲ್ಲಿ ಲೇಪಿಸುತ್ತಾ ಬಂದರೆ ಕಡಿತ ಹೋಗುವುದು.

**ಸಿತಾಮಧುಯುತಃ ಕ್ವಾಥೋ ವಾಶಿಕಾಯಾಃ ಸಶರ್ಕರಃ ।**
**ರಕ್ತಪಿತ್ತಹರಃ ಪಾನಾದಶ್ವಕರ್ಣಾತ್ತಥೈವ ಚ ॥ ೩೧ ॥**

**ಆಮೇ ಪರಿಣತೇ ಪಕ್ವಂ ಪಕ್ವಮಾಂಸೇ ಜರಾಂ ಗತೇ ।**
**ಪಕ್ವಮಾಂಸಯುತಂ ನೇಷ್ಟಂ ಸರ್ವಂ ಜೀರ್ಣಂ ಪ್ರಶಸ್ಯತೇ ॥ ೩೨ ॥**

**ಸಪ್ತಮೇ ಸಪ್ತಮೇ ದೇಯಮಶ್ವಾನಾಂ ಲವಣಂ ದಿನೇ ।**
**ತಥಾ ಭುಕ್ತವತಾಂ ದೇಯಾ ಪರಿಪಾನೇ ತು ವಾರುಣೀ ॥ ೩೩ ॥**

**ಜೀವನೀಯೈಃ ಸುಮಧುರೈರ್ಮೃದ್ವೀಕಾಶರ್ಕರಾಯುತೈಃ ।**
**ಸಪಿಪ್ಪಲೀಕೈಃ ಶರದಿ ಪ್ರತಿಮಾನಂ ಸಪದ್ಮಕಂ ॥ ೩೪ ॥**

**ವಿಳಂಗಪಿಪ್ಪಲೀಧಾನ್ಯಾ ಶತಾಹ್ವಾರೋಧ್ರಸೈಂಧವೈಃ ।**
**ಸಾವಿತ್ರಕೈಸ್ತುರಂಗಾಣಾಂ ಪ್ರತಿಪಾನಂ ಹಿಮಾಗಮೇ ॥ ೩೫ ॥**

---

೩೧-೩೨. ರಕ್ತ ಪಿತ್ಥವುಂಟಾದಾಗಲೂ (ಮೂಗಿನಲ್ಲಿ ರಕ್ತಸೋರುತ್ತಿದ್ದರೆ ಅಥವಾ ಬೀಳುತ್ತಿದ್ದರೆ), ಅಜೀರ್ಣರೋಗದಿಂದ ಕುದುರೆಗಳ ಮಾಂಸಕೋಶವು ಕೆಟ್ಟು ಹೋಗಿದ್ದಾಗಲೂ ಸಹ ಆಡುಸೋಗೆಸಪ್ಪಿನ ರಸಕ್ಕೆ ಸಕ್ಕರೆ ಜೇನುತುಪ್ಪಗಳನ್ನು ಬೆರಸಿ ಕಷಾಯಮಾಡಿ ಕುಡಿಸಿದರೆ ಗುಣವಾಗುವುದು.

೩೩. ಮತ್ತು ಕುದುರೆಗಳ ಅಜೀರ್ಣರೋಗಕ್ಕೆ ಇನ್ನೊಂದು ಔಷಧವನ್ನು ಹೇಳುತ್ತೇನೆ, ಕೇಳು. ಏಳೇಳುದಿನಕ್ಕೊಂದು ದಿವಸದಂತೆ ಉಪ್ಪಿನ ಪುಡಿಯನ್ನು ತಿನ್ನಿಸಿ ಅದನ್ನು ತಿಂದ ಬಳಿಕ ಸ್ವಲ್ಪ ಮದ್ಯವನ್ನು ಕುಡಿಸುತ್ತ ಬಂದರೆ ಜೀರ್ಣಶಕ್ತಿ ಯುಂಟಾಗುವುದು.

೩೪. ಶರದೃತುವಿನಲ್ಲಿ ಕುದುರೆಗಳಿಗೆ ಜೀವನೀಯಗಣ ಮತ್ತು ದ್ರಾಕ್ಷಿ, ಸಕ್ಕರೆ, ಹಿಪ್ಪಲಿ, ತಾವರೆ ದಂಟಿನಿಂದ ಘಟ್ಟಿಯಾಗಿ ಕಲ್ಕಮಾಡಿ ನೀರಿಗೆ ಬೆರಸಿ ಆ ಮಧುರವಾದ ಪಾನಕವನ್ನು ಕುಡಿಸಿದರೆ ಯಾವ ರೋಗವಾದರೂ ಗುಣವಾಗುವುದು.

೩೫. ವಾಯುವಿಳಂಗ, ಹಿಪ್ಪಲಿ, ಕೊತ್ತಂಬರಿ, ಸಪ್ಪಸಿಗೆ, ಲೋಧ್ರ, ಸೈಂಧವ ಲವಣ ಮತ್ತು ಸಾವಿತ್ರಕ ದ್ರವ್ಯಗಳಿಂದ ಪಾನೀಯ ವಸ್ತುವನ್ನು ನಿರ್ಮಿಸಿ ಅದನ್ನು ಹೇಮಂತ ಋತುವಿನಲ್ಲಿ ಕುದುರೆಗಳಿಗೆ ಪಾನಮಾಡಿಸುತ್ತಾ ಬಂದರೆ ಯಾವ ವಿಧವಾದ ಬಾಯಾರಿಕೆಯ ರೋಗಬಾಧೆಯೂ ತಟ್ಟುವುದಿಲ್ಲ.

ಲೋಧ್ರಂ ಪ್ರಿಯಂಗುಕಾ ರಾಸ್ನಾ ಪಿಪ್ಪಲೀವಿಶ್ವಭೇಷಜೈಃ ।
ಸಕ್ಷೌದ್ರೈಃ ಪ್ರತಿಪಾನಂ ಸ್ಯಾದ್ವಸಂತೇ ಕಫನಾಶನಂ ॥ ೩೬ ॥

ಪ್ರಿಯಂಗುಪಿಪ್ಪಲೀರೌದ್ರ್ಯಯಷ್ಟ್ಯಾಹ್ವೈಃ ಸಮಹೌಷಧೈಃ ।
ನಿದಾಘೇ ಸಗುಡಾ ದೇಯಾ ಮದಿರಾ ಪ್ರತಿಪಾನಕೇ ॥ ೩೭ ॥

ಭದ್ರಕಾಷ್ಠಾ ಸಲವಣಂ ಪಿಪ್ಪಲ್ಯಾ ವಿಶ್ವಭೇಷಜಂ ।
ಭವೇತ್ತೈಲಯುತೈರೇಭಿಃ ಪ್ರತಿಪಾನಂ ಘನಾಗಮೇ ॥ ೩೮ ॥

ನಿದಾಘಾವೃತಪಿತ್ತಾನಾಂ ಕ್ಷರನ್ಮಂದೋಷ್ಣಶೋಣಿತಾಃ ।
ಪ್ರಾವೃಡ್ಭಿನ್ನಪುರೀಷಾಶ್ಚ ಪಿಬೇಯುರ್ವಾಜಿನೋ ಘೃತಂ ॥ ೩೯ ॥

ಪಿಬೇಯುರ್ವಾಜಿನಸ್ತೈಲಂ ಕಫವಾಯ್ವಧಿಕಾಸ್ತು ಯೇ ।
ಸ್ನೇಹವ್ಯಾಪದ್ಭವೇದ್ಯೇಷಾಂ ತೇಷಾಂ ಕಾರ್ಯಂ ವಿರೂಕ್ಷಣಂ ॥ ೪೦ ॥

---

೩೬. ಲೋಧ್ರ, ಪ್ರೇಂಖಣ, ರಾಸ್ಮೆ, ಹಿಪ್ಪಲಿ, ಶುಂಠಿಗಳ ಚೂರ್ಣಮಾಡಿ ಆ ಕಷಾಯಕ್ಕೆ ಜೇನುತುಪ್ಪ ಬೆರಸಿ ಪಾನಮಾಡಿಸಿದರೆ(ತಿನ್ನಿಸಿದರೆ)ವಸಂತ ಋತುವಿನಲ್ಲಿ ಕುದುರೆಗಳಿಗೆ ಕಫ (ಶ್ಲೇಷ್ಮ) ಕಟ್ಟುವುದಿಲ್ಲ.

೩೭. ಪ್ರೇಂಖಣ, ಹಿಪ್ಪಲಿ, ಬಜೆ, ಅತಿಮಧುರ, ಶುಂಠೀ ಇವುಗಳ ಕಷಾಯಕ್ಕೆ ಬೆಲ್ಲದಹುಡಿಬೆರಸಿ ಸ್ವಲ್ಪ ಮದ್ಯವನ್ನು ಮಿಶ್ರಮಾಡಿ ಪಾನಮಾಡಿದರೆ ಗ್ರೀಷ್ಮಋತುವಿನಲ್ಲಿ ಕುದುರೆಗಳು ಯಾವ ರೋಗವೂ ಇಲ್ಲದೆ ಸುಖವಾಗಿರುವುವು. ಬಾಯಾರಿಕೆ ಇರುವುದಿಲ್ಲ.

೩೮. ಭದ್ರಕಾಷ್ಠ, (ದೇವದಾರು) ಚಕ್ಕೆಗೆ ಉಪ್ಪು, ಹಿಪ್ಪಲಿ, ಶುಂಠೀಪುಡಿಗಳನ್ನು ಬೆರಸಿ ತೈಲದೊಡನೆ ಬೆರಸಿ ವರ್ಷಋತುವಿನಲ್ಲಿ ಕುದುರೆಗಳಿಗೆ ಕುಡಿಸುತ್ತಿದ್ದರೆ ಆರೋಗ್ಯಲಾಭವುಂಟಾಗುತ್ತದೆ.

೩೯-೪೧. ಬೇಸಿಗೆಯ ಕಾಲದಲ್ಲಿ ಪಿತ್ತಪ್ರಕೋಪವಾಗಿ ಅನಂತರ ಮಂದವಾಗಿಯೂ ಉಷ್ಣವಾಗಿಯೂ ರಕ್ತಸ್ರಾವವಾಗುತ್ತಿದ್ದು, ಶತದ್ರುತುವಿನಲ್ಲಿ ಭೇಧಿಯಾಗುತ್ತಿರುವ ಸಂದರ್ಭದಲ್ಲಿ ಆ ಕುದುರೆಗೆ ಘೃತವನ್ನಾಗಲೀ ತೈಲವನ್ನಾಗಲೀ ಕೊಡ (ಕುಡಿಸ) ಬೇಕು. ಶ್ಲೇಷ್ಮ ಹೆಚ್ಚಾದಾಗಲೂ, ವಾಯು ಪ್ರಕೋಪವಾದಾಗಲೂ

ತ್ರ್ಯಹಂ ಯವಾಗೂ ರೂಕ್ಷಾ ಸ್ಯಾತ್ಸರಾ ಚ ಲವಣಾನ್ವಿತಾ ।
ಭೋಜನೇ ತಕ್ರಸಂಯುಕ್ತಂ ಹ್ಯೇಷ ವೈ ರೂಕ್ಷಣೇ ವಿಧಿಃ ॥ ೪೧ ॥

ಪ್ರಾಯೋಗಿಕಸ್ತಥಾ ದೇಯೋ ವಸ್ತಿಸ್ತಸ್ಯ ನಿರತ್ಯಯಃ ।
ಯೇ ಪಿಬಂತಿ ಹಯಾಃ ಸ್ನೇಹಂ ತೇಷಾಂ ವಸ್ತಿಂ ನ ದಾಪಯೇತ್ ॥ ೪೨ ॥

ಶರನ್ನಿದಾಘಯೋಃ ಸರ್ಪಿಸ್ತೈಲಂ ಶೀತವಸಂತಯೋಃ ।
ವರ್ಷಾಸು ಶಿಶಿರೇ ಚೈವ ವಸ್ತಿ ದೇಯವಿಹೇಷ್ಯತೇ ॥ ೪೩ ॥

ಗುರ್ವಭಿಷ್ಯಂದಿಭಕ್ತಾನಿ ವ್ಯಾಯಾಮಃ ಸ್ನಾನಮಾತಪಂ ।
ಪಾಯುರ್ವಸ್ತಿಂ ಚ ವಾಹಸ್ಯ ಸ್ನೇಹಪೀಡಸ್ಯ ವರ್ಜಿತಂ ॥ ೪೪ ॥

---

ಸಹ ಈ ಎಣ್ಣೆಯನ್ನು ಹೊಟ್ಟೆಗೆಕುಡಿಸಿ ಅದು ದೇಹದಲ್ಲೆಲ್ಲಾ ವ್ಯಾಪಿಸಿ ಜಿಡ್ಡಾಗುವಂತೆ ಮಾಡಬೇಕು. ಈ ವಿಧವಾದ ಚಿಕಿತ್ಸೆಗೆ ವಿರೂಕ್ಷಣವೆಂದು ಹೇಳುವರು. ರೂಕ್ಷಣೆಯ ವಿಧಿಯು ಹೇಗೆಂದರೆ:—ಬಿಸಿಗಂಜಿಗೆ ಸ್ವಲ್ಪ ಉಪ್ಪನ್ನೂ ಮದ್ಯವನ್ನೂ ಮಜ್ಜಿಗೆಯನ್ನೂ ಬೆರಸಿ ಅದನ್ನು ಮೂರುದಿವಸ ಹೊಟ್ಟೆಗೆ ಕೊಡಬೇಕು. ಇದಕ್ಕೆ ರೂಕ್ಷಣವಿಧಿಯೆಂದು ಹೇಳುವರು.

೪೨. ಈ ರೀತಿ ಮಾಡದೇಹೋದರೆ ಇನ್ನೊಂದು ಬಸ್ತಿ (ಪಿಚಕಾರೀ) ಕ್ರಮವನ್ನಾದರೂ ಮಾಡಬಹುದು. ಅದರ ಕ್ರಮವೇನೆಂದರೆ:—ಮೇಲೆ ಹೇಳಿದ ಔಷಧವನ್ನೇ ಗುದದ್ವಾರದಲ್ಲಿ ಪಿಚಕಾರೀ (ಎನಿಮಾ) ಹಾಕಿ ಶೋಧಿಸಬೇಕು. ಹೊಟ್ಟೆಗೆ ಎಣ್ಣೆಕೊಡುವ ಸಂದರ್ಭದಲ್ಲಿ ಈ ವಸ್ತಿಪ್ರಯೋಗವನ್ನು ಮಾಡಕೂಡದು.

೪೩. ಈ ಉಷ್ಣವಿದ್ದ ಕುದುರೆಗಳಿಗೆ ಶರದೃತು ಗ್ರೀಷ್ಮಋತುಗಳಲ್ಲಿ ಘೃತವನ್ನೂ, ಹೇಮಂತ ವಸಂತಋತುಗಳಲ್ಲಿ ತೈಲವನ್ನೂ, ವರ್ಷಋತು, ಶಿಶಿರಋತುಗಳಲ್ಲಿ ವಸ್ತಿಪ್ರಯೋಗವನ್ನೂ ಮಾಡಬೇಕು.

೪೪. ಬಹಳವಾಗಿ ಕುದುರೆಗೆ ಆಯಾಸವಾಗುತ್ತಿದ್ದರೆ, ಹೆಚ್ಚಾಗಿ ತಿಂಡಿ ಬಿದ್ದಿದ್ದರೆ ಆತಪಸ್ನಾನ (ಬಿಸಿಲಿನಲ್ಲಿ ಕಟ್ಟುವುದು) ಮಾಡಿಸಿ ವಿಶ್ರಾಂತಿಕೊಡಬೇಕು. ಎಣ್ಣೆ ಮತ್ತು ಘೃತಗಳು ಕೂಡದು. ಪಾಯುವಸ್ತಿಕ್ರಮವನ್ನು ಸಕೃದಾವರ್ತಿ ಮಾಡಬಹುದು.

**ಸ್ನಾನಂ ಪಾನಂ ಸಕೃದ್ದೃಷ್ಟಮಶ್ವಾನಾಂ ಸಲಿಲಾಗಮೇ ।**
**ಅತ್ಯರ್ಥದುರ್ದಿನೇ ಕಾಲೇ ಸ್ನಾನಮೇಕಂ ಪ್ರಶಸ್ಯತೇ ॥ ೪೫ ॥**

**ಯುಕ್ತಶೀತಾತಪೇ ಕಾಲೇ ದ್ವಿಃ ಪಾನಂ ಲವಣಂ ಸಕೃತ್ ।**
**ಗ್ರೀಷ್ಮೇ ತ್ರಿಃ ಸ್ನಾನಪಾನಂ ಸ್ಯಾಚ್ಚಿರಂ ತಸ್ಯಾವಗಾಹನಂ ॥ ೪೬ ॥**

**ನಿಸ್ತುಷಾಣಾಂ ಪ್ರದಾತವ್ಯಂ ಯವಾನಾಂ ಚತುರಾಢಕಂ ।**
**ವಿವರ್ಣವ್ರೀಹಿಮೌದಾಲಾಕಲಾನಾಂ ವಾಪಿ ದಾಪಯೇತ್ ॥ ೪೭ ॥**

**ಅಹೋರಾತ್ರೇಣ ಚಾಂದ್ರಸ್ಯ ಯವಸಸ್ಯ ತುಲಾ ದಶ ।**
**ಅಷ್ಟೌಶುಕ್ಲಸ್ಯ ದಾತವ್ಯಾ ಶ್ಚತಸ್ರೋಥ ಬುಸಸ್ಯ ವಾ ॥ ೪೮ ॥**

---

೪೫. ವರ್ಷಋತುವಿನ ದಿನಗಳಲ್ಲಿ ಸ್ನಾನಪಾನಗಳನ್ನು ಬಹುಮಿತವಾಗಿ ಕುದುರೆಗಳಿಗೆ ಮಾಡಿಸಬೇಕು. ವಿಪರೀತವಾಗಿ ಮೇಘಾವೃತವಾದ ದಿನಗಳಲ್ಲಿ ಒಂದೇಸಲ ಸ್ನಾನಮಾಡಿಸುವುದು ಒಳ್ಳೆಯದು.

೪೬. ಶೀತಕಾಲದಲ್ಲಿ ಪ್ರತಿದಿನವೂ ಎರಡುಹೊತ್ತೂ ನೀರಿಗೆ ಸ್ವಲ್ಪ ಉಪ್ಪನ್ನು ಬೆರಸಿ ಎರಡುಸಲ ಕುಡಿಸಬೇಕು. ಗ್ರೀಷ್ಮಋತುವಿನಲ್ಲಿ ಮೂರುಬಾರಿ ಸ್ನಾನಪಾನ ಗಳನ್ನು ಮಾಡಿಸಬಹುದು ಅವಗಾಹನ ಸ್ನಾನವನ್ನು ಎಲ್ಲೋ ಒಂದುಬಾರಿ ಮಾತ್ರ ಮಾಡಿಸುವುದು ಒಳ್ಳೆಯದು.

೪೭. ಯವಧಾನ್ಯವನ್ನು ಚೆನ್ನಾಗಿಕುಟ್ಟಿ ಹೊಟ್ಟುತೆಗೆದು ನಾಲ್ಕು ಕೊಳಗ ಗಳಷ್ಟು ಸಿದ್ಧಮಾಡಿಟ್ಟುಕೊಳ್ಳಬೇಕು. ಅಥವಾ ಭತ್ತದಹೊಟ್ಟು ತೆಗೆದು, ಅದನ್ನು ಸಿದ್ಧಪಡಿಸಿಟ್ಟುಕೊಂಡು ಇರಬೇಕು. ಅದನ್ನಾಡಿಸಿ ತಿನ್ನಬೇಕು.

೪೮. ೧೦ ಸೇರು ಅಥವಾ ೧೨ ಸೇರು ಅಥವಾ ಇದಕ್ಕೆ ಹೆಚ್ಚುಕಡಮೆಯಾಗಿ ಬೂಸವ(ಗೋಧಿ ಹೊಟ್ಟು) ನ್ನಾಗಲೀ ಅಥವಾ ಒಳ್ಳೇ ಹಸೀಹುಲ್ಲನ್ನಾಗಲೀ ತಿನ್ನಿಸಿದರೆ ಇದರಡಿ ವಿವರಿಸಿದಂತೆ ಗುಣವಾಗುತ್ತದೆ.

ದೂರ್ವಾಃಪಿತ್ತಂ ಬ್ರುಸಃ ಕಾರ್ಶ್ಯಂ ತದ್ವುಸಃ ಶ್ಲೇಷ್ಮಸಂಚಯಂ ।
ನಾಶಯತ್ಯರ್ಜುನಃಶ್ವಾಸಂ ತಥಾ ಮಾಷೋ ಬಲಕ್ಷಯಂ ॥ ೪೯ ॥

ವಾತಿಕಾಃ ಪೈತ್ತಿಕಾಶ್ಚೈವ ಶ್ಲೇಷ್ಮಜಾಃ ಸಾನ್ನಿಪಾತಿಕಾಃ ।
ನ ರೋಗಾಃ ಪೀಡಯಿಷ್ಯಂತಿ ದೂರ್ವಾಹಾರಂ ತುರಂಗಮಂ ॥ ೫೦ ॥

ದ್ವೌ ರಜ್ಜುಬಂಧೌ ದುಷ್ಟಾನಾಂ ಪಕ್ಷಯೋರುಭಯೋರಪಿ ।
ಪಶ್ಚಾದ್ಬಂಧಶ್ಚ ಕರ್ತವ್ಯೋ ಹರಕೀಲವ್ಯಪಾಶ್ರಯಃ ॥ ೫೧ ॥

ಕೇಶಾನುರೂಪಮಾಸ್ಯಸ್ಯ ಕೇಶಪುಚ್ಛಪ್ರಕಲ್ಪನಂ ।
ಛೇದಃ ಖುರಪ್ರವೃದ್ಧೌ ಚ ವರ್ಜಯೇತ್ತು ಕನೀನಿಕಾಂ ॥ ೫೨ ॥

---

೪೯. ದೂರ್ವೆ (ಹುಲ್ಲು) ಯಿಂದ ಪಿತ್ತನಾಶವಾಗುವುದು. ಬೂಸಾ (ಗೋಧಿ ಹಿಟ್ಟು) ತಿನ್ನಿಸಿದರೆ ಕೃಶತ್ವನಾಶವಾಗಿ ದೇಹಪುಷ್ಟಿಯಾಗುವುದು. ಮತ್ತಿಚಕ್ಕೆಯ ಕಷಾಯದಿಂದ ಶ್ಲೇಷ್ಮ ಪರಿಹಾರವಾಗುವುದು. ಉದ್ದು ತಿನ್ನಿಸಿದರೆ ಬಲಬರುವುದು.

೫೦. ಪ್ರತಿದಿನವೂ ಒಳ್ಳೆಯ ಹುಲ್ಲನ್ನು ತಿನ್ನುತ್ತಿರುವ ಕುದುರೆಗೆ ವಾತ ಪಿತ್ಥ ಶ್ಲೇಷ್ಮಸಂಬಂಧವಾದ ರೋಗಗಳಾಗಲೀ ಸಾನ್ನಿಪಾತಕಗಳಾಗಲೀ ಯಾವಾಗಲೂ ಸಂಭವಿಸುವುದೇ ಇಲ್ಲ.

೫೧. ತುಂಟಕುದುರೆಗಳಾದರೆ ಎರಡುಕಡೆಗಳಲ್ಲಿಯೂ ಹಗ್ಗಹಾಕಿ (ಮುಂಗಾಲು ಹಿಂಗಾಲುಗಳನ್ನು) ಕಟ್ಟಿಹಾಕಬೇಕು. ಈ ರೀತಿ ಕಟ್ಟಿಹಾಕಿದ ಮೇಲೆ ಅವಕ್ಕೆ ಎಂತಹ ಔಷಧಚಿಕಿತ್ಸೆಯನ್ನಾದರೂ ನಡೆಸಬಹುದು.

೫೨. ಮುಖಸೌಂದರ್ಯವೂ ಬಾಲದ ಸೌಂದರ್ಯವೂ ಕೆಡದಂತೆ ಮುಖದ ಮೇಲೂ ಬಾಲದಲ್ಲೂ ಹೆಚ್ಚಾಗಿ ಹುಟ್ಟಿರುವ ಕೂದಲನ್ನು ಆಗಿಂದಾಗ್ಗೆ ಕತ್ತರಿಸುತ್ತಿರುವುದೊಳ್ಳೆಯದು. ಕುದುರೆಗಳ ಕಾಲಿನ ಗೊರಸುಗಳಿಗೆ ಲಾಳ ಕಟ್ಟುವಾಗ ಕಿರುಬೆರಳು ಸೋಕಬಾರದು.

ಯತ್ನೋಽಪಯನ್ಯಸ್ತಯವಸಃ ಕೃತಧೂಪನಭೂಮಯಃ ।
ವಸೇಯುಃ ಸಂಭೃತೇಸ್ಥಾನೇ ಪ್ರದೀಪೈಃ ಸಾರ್ವರಾತ್ರಿಕೈಃ　　॥ ೫೩ ॥

ಶಾಖಾಮೃಗೋಜಾಃ ಕೃಕವಾಕವಶ್ಚ
ಧಾರ್ಯಾಶ್ಚ ಶಾಲಾಸು ತಥೈವ ಧೇನುಃ ।
ಕುರ್ಯುರ್ನಿಶೀಥೇ ಪುರುಷಾಃ ಸಶಸ್ತ್ರಾಃ
ಸಂರಕ್ಷಣಂ ರಾಮ ತುರಂಗಮಾಣಾಂ　　॥ ೫೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಅಶ್ವಚಿಕಿತ್ಸಾ ನಾಮ ಷಟ್‌ಚತ್ವಾರಿಂಶತ್ತಮೋಽಧ್ಯಾಯಃ

---

೫೩. ಕುದುರೆ ಕಟ್ಟುವ ಜಾಗವು ಕಶ್ಮಲವಿಲ್ಲದೆ ಇರಬೇಕು. ನಿರ್ಮಲವಾದ ಪ್ರದೇಶದಲ್ಲಿ ತಿನ್ನುವ ಹುಲ್ಲನ್ನು ಹಾಕಬೇಕು. ಆ ಸ್ಥಳದಲ್ಲಿ ಧೂಪದ ಹೊಗೆಯನ್ನು ಹಾಕುತ್ತಿರಬೇಕು. ರಾತ್ರಿಹೊತ್ತು ಕುದುರೆಯ ಲಾಯದಲ್ಲಿ ದೀಪವನ್ನು ಹತ್ತಿಸಿಡಬೇಕು.

೫೪. ಆ ಕುದುರೆ ಲಾಯದಲ್ಲಿ ಒಂದು ಕಪಿ, ಒಂದು ಅಥವಾ ಹೆಚ್ಚಾದ ಆಡುಗಳು, ಒಂದು ಅಥವಾ ಹೆಚ್ಚು ಕೋಳಿಗಳು, ಒಂದು ಹಸುವನ್ನೂ ಸಹ ಕಟ್ಟಬೇಕು. ಮತ್ತು ಇಡೀ ರಾತ್ರಿಯೂ ಸಹ ಶಸ್ತ್ರಸಜ್ಜಿತರಾದ ಸಿಪಾಯಿಗಳು ಆ ಲಾಯದಲ್ಲಿ ಕಾವಲಿರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೇ ಖಂಡದಲ್ಲಿ ಅಶ್ವಚಿಕಿತ್ಸೆಯೆಂಬ ಹೆಸರಿನ
ನಲವತ್ತಾರನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತಚತ್ವಾರಿಂಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

ನಿತ್ಯಂ ನೈಮಿತ್ತಿಕಂ ಕಾಮ್ಯಂ ಶಾಂತಿಕರ್ಮ ನಿಬೋಧ ಮೇ ।
ಪಂಚಮೀಷು ಚ ಸರ್ವಾಸು ಶ್ರೀಧರಂ ಪೂಜಯೇದ್ಭೃಶಂ ॥ ೧ ॥

ಶ್ರಿಯಶ್ಚ ಪೂಜನಂ ಕಾರ್ಯಂ ಹಯರಾಜ್ಞಸ್ತಥೈವ ಚ ।
ರಾಮೋಚ್ಚೈಃಶ್ರವಸೋ ನಿತ್ಯಂ ಗಂಧಮಾಲ್ಯಾನುಲೇಪನೈಃ ॥ ೨ ॥

ಧೂಪದೀಪನಮಸ್ಕಾರೈಸ್ತಥಾ ಚೈವಾನ್ನಸಂಪದಾ ।
ಶರದ್ವಸಂತಯೋಃ ಕಾರ್ಯಮೇಕದಂತಸ್ಯ ಪೂಜನಂ ॥ ೩ ॥

---

### ನಲವತ್ತೇಳನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಇನ್ನು ಮುಂದೆ ಕುದುರೆಗಳ ಕ್ಷೇಮಕ್ಕೋಸ್ಕರ ಮಾಡುವ ನಿತ್ತನೈಮಿತ್ತಿಕಕಾಮ್ಯಗಳೆಂಬ ಮೂರು ವಿಧವಾದ ಶಾಂತಿಕರ್ಮಗಳನ್ನು ಮಾಡುವ ಕ್ರಮವನ್ನೂ ಹೇಳುತ್ತೇನೆ, ಕೇಳು. ಎಲ್ಲಾ ಪಂಚಮೀ ದಿವಸಗಳಲ್ಲಿಯೂ ಇದಕ್ಕಾಗಿ ಶ್ರೀಧರಸ್ವಾಮಿಯನ್ನು ಪೂಜಿಸಬೇಕು.

೨. ಮತ್ತು ಲಕ್ಷ್ಮೀಪೂಜೆಯನ್ನು ಸಹಾ ಮಾಡಬೇಕು. ಮತ್ತು ಪಟ್ಟದ ಕುದುರೆಯನ್ನು ಸಹ ಪೂಜಿಸಬೇಕು. ಎಲೈ ಪರಶುರಾಮನೇ! ಕೇಳು. ಇದಕ್ಕಾಗಿ ಪ್ರತಿದಿವಸವೂ ಉಚ್ಚೈಃಶ್ರವಸ್ಸಿನ ಪೂಜೆಯು ಪ್ರತಿದಿವಸವೂ ಮಾಡಲ್ಪಡಬೇಕು.

೩. ಶರದೃತು ಮತ್ತು ವಸಂತಋತುವಿನ ಪಂಚಮಿಯ ದಿನಗಳಲ್ಲಿ ಗಣಪತಿಯನ್ನು ಗಂಧಪುಷ್ಪ ಧೂಪದೀಪನೈವೇದ್ಯ ತಾಂಬೂಲಾದಿಗಳಿಂದ ಯಥಾವಿಧಾನವಾಗಿ ಅರ್ಚಿಸಬೇಕು.

ಪ್ರತಿಪತ್ಪಂಚಮೀ ಷಷ್ಠೀ ಸಪ್ತಮೀ ದ್ವಾದಶೀ ತಥಾ ।
ಪ್ರಶಸ್ತಾಸ್ತಿಥಯೋ ರಾಮ ಸೂರ್ಯವಾರೋ ವಿಶೇಷತಃ ॥ ೪ ॥

ಕೃತ್ತಿಕಾಂ ರೋಹಿಣೀಂ ಭಾಗ್ಯಂ ಚಾರ್ಯಮ್ಣಂ ಅಶ್ವಿನೀಂ ತಥಾ ।
ತ್ವಾಷ್ಟ್ರಂ ಸಾವಿತ್ರಮಾದಿತ್ಯಂ ವಾಯವ್ಯಂ ಚ ಭೃಗೂತ್ತಮ ॥ ೫ ॥

ನಕ್ಷತ್ರಾಣಿ ಪ್ರಶಸ್ತಾನಿ ಶುಕ್ಲಪಕ್ಷಸ್ತಥೈವ ಚ ।
ಉದ್ಯಾನೇಷು ವಿಚಿತ್ರೇಷು ನದೀನಾಂ ಪುಲಿನೇಷು ಚ ॥ ೬ ॥

ದೇವತಾಯತನಂ ರಾಮ ಪೂಜನಂ ತಸ್ಯ ಕಾರಯೇತ್ ।
ಅರ್ಘ್ಯಧೂಪನಮಸ್ಕಾರದೀಪಪುಷ್ಪಾನ್ನಸಂಪದಾ ॥ ೭ ॥

ಕುಲ್ಮಾಷೋಲ್ಲೋಪಿಕಾಭಕ್ಷ್ಯ ಮದ್ಯಮಾಂಸಸುರಾಸವೈಃ ।
ಓದನೈಃ ಪರಮಾನ್ನೇವ ಫಲೈಃ ಕಾಲೋದ್ಭವೈಃ ಶುಭೈಃ ॥ ೮ ॥

---

೪. ಮೇಲ್ಕಂಡ ಪೂಜೆಯನ್ನು ಮಾಡುವುದಕ್ಕೆ ಯೋಗ್ಯವಾದ ತಿಥಿಗಳಾವುವೆಂದರೆ:—ಪಾಡ್ಯಮಿ, ಪಂಚಮಿ, ಷಷ್ಟಿ, ಸಪ್ತಮಿ, ದ್ವಾದಶಿ ಮತ್ತು ಭಾನುವಾರ. ಇವುಗಳಲ್ಲಿ ಭಾನುವಾರದ ಪೂಜೆಯು ಮಹಾವಿಶೇಷವಾದದ್ದು.

೫. ಇನ್ನು ಪೂಜಾರ್ಹವಾದ ನಕ್ಷತ್ರಗಳನ್ನು ತಿಳಿಸುತ್ತೇನೆ, ಕೇಳು.—ಕೃತ್ತಿಕೆ, ರೋಹಿಣಿ, ಮೃಗಶಿರ, ಉತ್ತರೆ, ಅಶ್ವಿನಿ, ಚಿತ್ತೆ, ಹಸ್ತ, ರೇವತಿ, ಸ್ವಾತಿ,—ಈ ನಕ್ಷತ್ರಗಳು ಪೂಜೆಗೆ ಶ್ರೇಷ್ಠಗಳು.

೬. ಪ್ರತಿ ತಿಂಗಳ ಶುಕ್ಲಪಕ್ಷದ ಯಾವ ಯಾವ ತಿಥಿಗಳಲ್ಲಿ ಈ ನಕ್ಷತ್ರಗಳ ಯೋಗವಿದೆಯೋ ಅದನ್ನು ನೋಡಿಕೊಂಡು ಪೂಜೆಮಾಡಬೇಕು. ಪೂಜೆಮಾಡುವುದಕ್ಕೆ ಪ್ರಶಸ್ತವಾದ ಸ್ಥಳಗಳಾವುವೆಂದರೆ :—ವಿಚಿತ್ರವಾಗಿಯೂ ಮನೋಹರವಾಗಿಯೂ ಇರುವ ಉದ್ಯಾನವನಗಳು, ನದಿಯ ಮರಳು ದಿಣ್ಣೆಗಳು. ಮತ್ತು ದೇವಸ್ಥಾನಗಳಲ್ಲೂ ಈ ಪೂಜೆಯನ್ನು ಮಾಡಬೇಕು.

೭-೯. ಆಸನಪಾದ್ಯಾರ್ಘ್ಯಗಳಿಂದಲೂ ಗಂಧಪುಷ್ಪಾದಿಗಳಿಂದಲೂ ಧೂಪದೀಪ ನೈವೇದ್ಯ ತಾಂಬೂಲಾದಿಗಳಿಂದಲೂ ಭಕ್ತಿಪೂರ್ವಕವಾಗಿ ಪೂಜೆಮಾಡಬೇಕು. ಹಲಸಂದೆ ಒಡೆ ಮತ್ತು ವಿವಿಧ ಮಾಂಸಾಸವಗಳನ್ನೂ, ವಿಧವಿಧವಾದ ಪಕ್ವಾನ್ನ

**ನೃತ್ತಗೀತೇನ ವಾದ್ಯೇನ ಶಂಖಶಬ್ದೈಸ್ತಥೈವ ಚ ।**
**ಸಾವಿತ್ರೈಶ್ಚ ತಥೈವಾಜ್ಯಂ ಜುಹುಯಾಜ್ಜಾತವೇದಸಿ ॥ ೯ ॥**

**ಓಂಕಾರಪೂರ್ವಂ ಚ ತಥಾ ರೇವಂತಾಯ ಪುನಃ ಪುನಃ ।**
**ದ್ವಿಜಾತಿಪೂಜನಂ ಕಾರ್ಯಂ ಮಾಲ್ಯಮೋದಕಚಂದನೈಃ ॥ ೧೦ ॥**

**ದಕ್ಷಿಣಾಭಿಶ್ಚ ಧರ್ಮಜ್ಞ ಯಥಾವದನುಪೂರ್ವಶಃ ।**
**ನಾರೀಷು ವರ್ಜಯೇತ್ಸರ್ವಂ ರೇವಂತಸ್ಯ ನಿವೇದಿತಂ ॥ ೧೧ ॥**

**ಏವಂ ಸಂಪೂಜಿತೋ ದದ್ಯಾತ್ತುರಂಗಮಶತಾನ್ಯಪಿ ।**
**ಬಲಂ ತೇಜಸ್ತಥಾಽರೋಗ್ಯಂ ತುರಂಗಾಣಾಂ ಚ ಭಾರ್ಗವ ॥ ೧೨ ॥**

---

ಗಳನ್ನೂ, ಆ ಕಾಲದಲ್ಲಿ ದೊರೆಯುವ ಹಣ್ಣುಹಂಪಲುಗಳನ್ನೂ ತಂದು ನೈವೇದ್ಯ ಮಾಡಬೇಕು. ಬಳಿಕ ನೃತ್ಯಗೀತವಾದ್ಯಗಳಿಂದಲೂ ಶಂಖಭೇರೀನಿನಾದಗಳಿಂದಲೂ ಉಪಚಾರಮಾಡಬೇಕು. ಆ ಮೇಲೆ ಪೂಜೆ ಬೆಳೆದ ಬಳಿಕ ಅಗ್ನಿಮುಖದಲ್ಲಿ ಗಾಯತ್ರೀಮಂತ್ರಗಳಿಂದ ಆಜ್ಯಹೋಮ ಮಾಡಬೇಕು.

೧೦. ಮೇಲೆ ಹೇಳಿದ ಪೂಜೋಪಚಾರಗಳೂ ಹೋಮಗಳೂ ರೇವಂತನಿಗೋಸ್ಕರ ಮಾಡಲ್ಪಡಬೇಕು. (ರೇವಂತನ ಚರಿತ್ರೆಯನ್ನು ಈ ಪುರಾಣದ ಮತ್ತೊಂದು ಕಡೆ ನೋಡಿರಿ.) ಹೋಮಮಂತ್ರವನ್ನು ಉಚ್ಚರಿಸುವಾಗಲೆಲ್ಲಾ ಪ್ರಣವ (ಓಂಕಾರ) ಪೂರ್ವಕವಾಗಿಯೇ ಹೇಳಬೇಕು. ಆ ಮೇಲೆ ಬ್ರಾಹ್ಮಣ ಸಮಾರಾಧನೆಯಾಗಬೇಕು. ಅವರನ್ನು ಗಂಧಪುಷ್ಪಾಕ್ಷತೆಗಳಿಂದಭ್ಯರ್ಚಿಸಿ ವಿವಿಧ ಭಕ್ಷ್ಯಗಳನ್ನು ಮಾಡಿಸಿ ಊಟಮಾಡಬೇಕು.

೧೧. ಊಟ ಮಾಡಿದ ಮೇಲೆ ಫಲತಾಂಬೂಲದಕ್ಷಿಣೆಗಳನ್ನು ಕೊಡಬೇಕು. ರೇವಂತನಿಗೆ ನಿವೇದನವಾದ ಅನ್ನ ಭಕ್ಷ್ಯಾದಿಗಳನ್ನೆಲ್ಲಾ ಹೆಂಗಸರು ಊಟಮಾಡಬೇಕು.

೧೨. ರೇವಂತನಿಗೆ ಈ ರೀತಿ ಪೂಜೆಮಾಡಿದ ಬಳಿಕ ಒಂದುನೂರು ಕುದುರೆಗಳನ್ನು ದಾನಕೊಡಬೇಕು. ಈ ಕುದುರೆಗಳು ಒಳ್ಳೇ ಬಲಶಾಲಿಗಳಾಗಿಯೂ ತೇಜಶ್ಶಾಲಿಗಳಾಗಿಯೂ ಆರೋಗ್ಯಶಾಲಿಗಳಾಗಿಯೂ ಇರಬೇಕು.

**ಆಶ್ವಯುಕ್ಶುಕ್ಲಪಕ್ಷಸ್ಯ ಪಂಚದಶ್ಯಾಂ ನರೋತ್ತಮ ।**
**ತುರಂಗಮಾಣಾಂ ಕರ್ತವ್ಯಂ ಶಾಂತಿಕಂ ತನ್ನಿಬೋಧ ಮೇ ॥ ೧೩ ॥**

**ದಿಗೀಶಾನೀಂ ವಿನಿಷ್ಕ್ರಮ್ಯ ಗ್ರಾಮೋದ್ದೇಶೇ ಮನೋರಮೇ ।**
**ಪ್ರಾಗುದಕ್ಪ್ರವಣೇ ರಾಮ ಸ್ಥಂಡಿಲಂ ಪರಿಕಲ್ಪಯೇತ್ ॥ ೧೪ ॥**

**ನಾಸತ್ಯೌ ವರುಣಂ ದೇವಂ ತಥೈವಾಶ್ವಯುಜೇ ದ್ವಿಜ ।**
**ಪೂಜಯೇತ್ಪ್ರಯತೋ ವಿದ್ವಾನ್ ಗಂಧಮಾಲ್ಯಾನುಲೇಪನೈಃ ॥ ೧೫ ॥**

**ಧೂಪದೀಪೈರ್ನಮಸ್ಕಾರೈಸ್ತಥಾ ಚಾನ್ನೇನ ಭೂರಿಣಾ ।**
**ಸಮುಲ್ಲಿಖ್ಯ ತತೋ ವೇದಿಂ ಶಾಖಾಭಿಃ ಪರಿವಾರಯೇತ್ ॥ ೧೬ ॥**

**ಸಮಂತತಸ್ತಥಾಽದ್ರಾರ್ಭಿ ವರ್ಸ್ತ್ರೈಶ್ಚಾಪ್ಯಹತೈಸ್ತಥಾ ।**
**ಘಟಾನ್ಸರ್ವರಸೈಃ ಪೂರ್ಣಾನ್ದಿಕ್ಷು ದದ್ಯಾದ್ಯಥಾವಿಧಿ ॥ ೧೭ ॥**

---

೧೩. ಇದುವರೆಗೆ ಹೇಳಿದ್ದೆಲ್ಲಾ ರೇವಂತಪೂಜಾಶಾಂತಿಕ್ರಮವೆನಿಸಿಕೊಂಡಿತು. ಇನ್ನು ಅಶ್ವಶಾಂತಿಕ್ರಮವನ್ನು ಹೇಳುತ್ತೇನೆ. ಆಶ್ವಯುಜ ಶುದ್ಧ ಪೂರ್ಣಿಮೆಯ ದಿವಸ ಅಶ್ವಶಾಂತಿಯಾಗಬೇಕು. ಅದರ ವಿಧಿಯೇನೆಂದರೆ:—

೧೪. ಊರಹೊರಗೆ ಸುಂದರವಾದ ಒಂದು ಪ್ರದೇಶದಲ್ಲಿ ದಿಗೀಶಾನೀ ದೇವತೆಯನ್ನು ತೆಗೆದುಕೊಂಡು ಹೋಗಿ ಪೂರ್ವೋತ್ತರ-ಸಂಸ್ಥೆಯಾಗಿ ಸ್ಥಂಡಿಲ (ಹೋಮ ಸ್ಥಳವನ್ನು ನಿರ್ಮಿಸಬೇಕು. ಅಲ್ಲಿ ದಿಗೀಶಾನಿಯನ್ನೂ ಅಶ್ವಿನೀ ದೇವತೆಗಳನ್ನೂ ವರುಣನನ್ನೂ ಪ್ರತಿಷ್ಠೆಮಾಡಬೇಕು. ಈ ರೀತಿ ಪ್ರತಿಷ್ಠಿತ ದೇವತೆಗಳೆಲ್ಲರಿಗೂ ಷೋಡಶೋಪಚಾರ ಪೂಜೆಮಾಡಬೇಕು.

೧೫-೧೬. ಧೂಪದೀಪನೈವೇದ್ಯತಾಂಬೂಲ ಪ್ರದಕ್ಷಿಣನಮಸ್ಕಾರಗಳೆಲ್ಲಾ ಆದ ಮೇಲೆ ಅಗ್ನಿವೇದಿಕೆಯನ್ನು ಸಿದ್ಧಪಡಿಸಬೇಕು.

೧೭. ವೇದಿಕೆಯ ಸುತ್ತಲೂ ದಿಕ್ಪಾಲಕರಿಗೆ (ದಿಕ್ಪಾಲಕ ಕಲಶಗಳಿಗೆ) ಹರಿಯದೆ ಇರುವ ಹೊಸ ಜೋಡೀವಸ್ತ್ರಗಳನ್ನು ಹೊದಿಸಿ ಆ ಕಲಶಗಳಿಗೆಲ್ಲಾ ಸಕಲೌಷಧರಸಗಳನ್ನೂ ಸಕಲ ತೀರ್ಥಗಳನ್ನೂ ತುಂಬಿ ಎಲ್ಲಾ ದಿಕ್ಕುಗಳಲ್ಲೂ ಸರಿಯಾಗಿ ಇಡಬೇಕು.

**ವಿದಿಕ್ಷು ಚ ತಥಾ ದದ್ಯಾದ್ಧ್ವಜಛತ್ರಾಣಿ ಬುದ್ಧಿಮಾನ್ ।**
**ತತಃ ಸಮುಪಧಾಯಾಗ್ನಿಂ ಜಯಪ್ರಭೃತಿಭಿಃ ಪುನಃ ॥ ೧೮ ॥**

**ಹುತ್ವೋಕ್ತದೇವತಾಲಿಂಗೈರ್ಮಂತ್ರೈಶ್ಚ ಜುಹುಯಾತ್ ಘೃತಂ ।**
**ತತಃ ಸಂಪೂಜನೀಯಾಸ್ತು ಗಂಧಮಾಲ್ಯೈಸ್ತುರಂಗಮಾಃ ॥ ೧೯ ॥**

**ಸನ್ನದ್ಧಪುರುಷಾರೂಢಾಃ ಸುಸನ್ನದ್ಧಾಸ್ತುರಂಗಮಾಃ ।**
**ಸಾಯುಧೈಃ ಪುರುಷೈಃ ಸಾರ್ಧಂ ವಹ್ನಿಂ ಕುರ್ಯುಃ ಪ್ರದಕ್ಷಿಣಂ ॥ ೨೦ ॥**

**ತ್ರಿಃ ಪರಿಕ್ರಾಮತೋ ವಹ್ನಿಂ ಕ್ಷ್ವೇಡೋತ್ಕೃಷ್ಟನಿನಾದಿತೈಃ ।**
**ಶಂಖವಾದ್ಯರವೋನ್ಮಿಶ್ರೈರ್ನೇತವ್ಯಾ ಸ್ವಗೃಹಂ ತತಃ ॥ ೨೧ ॥**

---

೧೮. ಬಳಿಕ ಆಗ್ನೇಯಾದಿ ವಿದಿಕ್ಕುಗಳಲ್ಲೂ ಕಲಶಗಳನ್ನಿಟ್ಟು ಈರೀತಿ ಅಷ್ಟ ದಿಕ್ಪಾಲಕರನ್ನು ಸ್ಥಾಪಿಸಿದನಂತರ ಅದರ ಬಳಿ ಧ್ವಜಛತ್ರಾದಿಗಳನ್ನಿಟ್ಟು ಅಲಂಕಾರ ಮಾಡಬೇಕು. ಆಮೇಲೆ ಅಗ್ನಿಯನ್ನು ಪ್ರಜ್ವಲನಗೊಳಿಸಿ ಜಯಾದಿಹೋಮವನ್ನು ಮಾಡಬೇಕು.

೧೯. ಅನ್ವಾಧಾನದಲ್ಲಿ ಸಂಕಲ್ಪ ಮಾಡುವಾಗ ಹೇಳಿರುವ ದೇವತೆಗಳನ್ನು ಆಯಾಯ ಲಿಂಗಗಳ ಚತುರ್ಥ್ಯೇಕವಚನದಲ್ಲಿ ಉಚ್ಚರಿಸಿ ಆಯಾಯ ದೇವತೆಗಳಿಗೋಸ್ಕರ ಆಜ್ಯಹೋಮವನ್ನು ಮಾಡಬೇಕು. ಪೂರ್ಣಾಹುತಿಯಾದ ಬಳಿಕ ಅಶ್ವಗಳನ್ನು ಕಟ್ಟಿರುವ ಜಾಗಕ್ಕೆ ಬಂದು ಗಂಧಮಾಲ್ಯಾದಿಗಳಿಂದ ಅಶ್ವಪೂಜೆಯನ್ನು ಮಾಡಬೇಕು.

೨೦. ಅಶ್ವಪೂಜಾನಂತರ ಅಶ್ವಗಳನ್ನು ಸವಾರಿಗೆ ಸಿದ್ಧವಾಗಿರುವಂತೆ ಜೀನು ರಿಕಾಪು ಕಡಿವಾಣಗಳಿಂದ ಅಲಂಕರಿಸಿ, ಅದರ ಮೇಲೆ ಅಶ್ವಾರೋಹಿ(ಸವಾರರು) ಗಳು ಅಲಂಕೃತರಾಗಿ ಕುಳಿತು ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು ಯಜ್ಞೇಶ್ವರನ ಸುತ್ತಲೂ ಮೂರು ಬಾರಿ ಪ್ರದಕ್ಷಿಣೆಯಾಗಿ ಬರಬೇಕು.

೨೧. ಈ ರೀತಿ ಸವಾರರು ಪ್ರದಕ್ಷಿಣೆಯಾಗಿ ಬರುತ್ತಿರುವಾಗ ಕುದುರೆ ಸವಾರರೂ ಇತರರೂ ಸಹ ಘಟ್ಟಿಯಾಗಿ ದಶದಿಕ್ಕುಗಳೂ ಮೊಳಗುವಂತೆ ಸಿಂಹನಾದ ಮಾಡಬೇಕು. ಆ ಮೇಲೆ ಕುದುರೆಗಳೂ ಸವಾರರೂ ಮೆರೆವಣಿಗೆ ಮಾಡಿಕೊಂಡು ಬಾಜಾ ಬಜಂತ್ರಿ-ಓಲಗ ತಾಳ ಮೇಳಗಳೊಡನೆ ಮನೆಗಳಿಗೆ ಹೋಗಬೇಕು.

**ರಸಾನಿ ತಾನಿ ವಾಸಾಂಸಿ ಗೌಃ ಕಾಂಸ್ಯಂ ಕನಕಂ ತಥಾ ।**
**ದಕ್ಷಿಣಾಯೈ ಪ್ರದಾತವ್ಯಂ ಕರ್ತುರ್ದ್ವಿಜವರೋತ್ತಮ ॥ ೨೨ ॥**

**ಕರ್ಮಣಾಽನೇನ ಭವತಿ ಪ್ರಭೂತಂ ರಾಮ ವಾಹನಂ ।**
**ಹೃಷ್ಟಪುಷ್ಟಂ ಚ ಧರ್ಮಜ್ಞ ಗದಾಽಮಯವಿವರ್ಜಿತಂ ॥ ೨೩ ॥**

**ನಿತ್ಯಮೇತತ್ತವೋದ್ದಿಷ್ಟಂ ಶೃಣು ನೈಮಿತ್ತಿಕಂ ತಥಾ ।**
**ಅಶ್ವಾನಾಂ ಮಾರಕೇ ಪ್ರಾಪ್ತೇ ವ್ಯಾಧೌ ವಾಽಪ್ಯತಿದಾರುಣೇ ॥ ೨೪ ॥**

**ಪ್ರಕೃತೇಶ್ಚ ವಿಪರ್ಯಾಸೇ ತಥಾ ಭೃಗುಕುಲೋದ್ಭವ ।**
**ಹಯಚಾರೇ ಶುಭೇ ದೇಶೇ ಸ್ಥಂಡಿಲಂ ಪರಿಕಲ್ಪಯೇತ್ ॥ ೨೫ ॥**

---

೨೨. ಪೂಜೆಗೋಸ್ಕರ ಇಟ್ಟಿದ್ದ ಜಲಪೂರಿತ ಕಲಶಗಳನ್ನೂ ಅದಕ್ಕೆ ಹೊದ್ದಿಸಿದ್ದ ವಸ್ತ್ರಗಳನ್ನೂ ಹಸುವನ್ನೂ, ಅದರೊಡನೆ ಕಂಚಿನಪಾತ್ರೆಯನ್ನೂ ಚಿನ್ನದನಾಣ್ಯದ ದಕ್ಷಿಣೆಯನ್ನೂ ಪುರೋಹಿತನಿಗೂ ಋತ್ವಿಕ್ಕುಗಳಿಗೂ ಕೊಡಬೇಕು.

೨೩. ಈ ರೀತಿ ಶಾಂತಿಮಾಡೋಣದರಿಂದ ವಾಹನಾದಿಗಳು ಅಪರಿಮಿತವಾಗಿ ಅಭಿವೃದ್ಧಿಹೊಂದುತ್ತವೆ. ಮತ್ತು ಆ ಅಶ್ವಾದಿಗಳಿಗೆ ಯಾವ ವಿಧವಾದ ರೋಗವೂ ತಗಲದೆ ಅವು ಹೃಷ್ಟಪುಷ್ಟವಾಗಿ ಆರೋಗ್ಯಭಾಗ್ಯದಿಂದ ಕೂಡಿರುತ್ತವೆ.

೨೪. ಇದುವರಿವಿಗೆ ನಿನಗೆ ಹೇಳಿದ ಶಾಂತಿಕ್ರಮವು ನಿತ್ಯಶಾಂತಿಯೆನಿಸಿ ಕೊಂಡಿತು. ಇನ್ನು ನೈಮಿತ್ತಿಕಶಾಂತಿಕ್ರಮವನ್ನು ಹೇಳುವೆನು, ಕೇಳು. ಕುದುರೆಗಳಿಗೆ ಮರಣಸಂಕಟವುಂಟಾದಾಗಲೂ ಭಯಂಕರವಾದ ವ್ಯಾಧಿಯುಂಟಾದಾಗಲೂ ಈ ನೈಮಿತ್ತಿಕ ಶಾಂತಿಯನ್ನು ಮಾಡಬೇಕು.)

೨೫. ನಡೆದುಕೊಂಡು ಸರಿಯಾಗಿ ಹೋಗುತ್ತಿರುವ ಕ್ರಮದಲ್ಲಿ ಏನಾದರೂ ವ್ಯತ್ಯಾಸವೊದಗಿದಾಗಲೂ ಈ ಶಾಂತಿಯನ್ನು ಕೈಗೊಳ್ಳಬೇಕು. ಕುದುರೆಗಳು ಸಂಚರಿಸುತ್ತಿರುವ ಮಂಗಳಕರವಾದ ಪ್ರದೇಶದಲ್ಲಿ ಸ್ಥಂಡಿಲ (ಪೂಜಾಸ್ಥಾನವನ್ನು ಕಲ್ಪನೆ ಮಾಡಬೇಕು.

**ವಿನ್ಯಸೇತ್ಕಮಲಂ ತತ್ರ ತನ್ಮಧ್ಯೇ ಪೂಜಯೇದ್ಧರಿಂ ।**
**ಶ್ರಿಯಂ ಚ ದೇವೀಂ ತತ್ರೈವ ಕೇಸರೇಷು ಚ ದೇವತಾಃ ॥ ೨೬ ॥**

**ಬ್ರಹ್ಮಾಣಂ ಶಂಕರಂ ಸೋಮಮಾದಿತ್ಯಂ ಚ ತಥಾಽಶ್ವಿನೌ ।**
**ರೇವನ್ತಮುಚ್ಚೈಃಶ್ರವಸಂ ದಿಕ್ಪಾಲಾಂಶ್ಚ ದಲೇಷ್ವಪಿ ॥ ೨೭ ॥**

**ಸರ್ವೇಷಾಂ ಪೂಜನಂ ಕಾರ್ಯಂ ಗಂಧಧೂಪಾನ್ನಸಂಪದಾ ।**
**ದೀಪಮಾಲ್ಯನಮಸ್ಕಾರ ಪುಷ್ಪಮೂಲ್ಯೈಃ ಸಗೋರಸೈಃ ॥ ೨೮ ॥**

**ಪ್ರತ್ಯೇಕಂ ಪೂರ್ಣಕುಂಭೈಶ್ಚ ಗಂಧಮಾಲ್ಯಾದ್ಯಲಂಕೃತೈಃ ।**
**ತಥಾ ಪಿಹಿತವಸ್ತ್ರೈಶ್ಚ ವರ್ಧಮಾನೈಃ ಸತಂಡುಲೈಃ ॥ ೨೯ ॥**

**ತಥಾ ಪ್ರತಿಸರಾಸೂತ್ರೈಃ ಪತಾಕಾಭಿಶ್ಚ ಭಾರ್ಗವ ।**
**ತಸ್ಯೈವೋತ್ತರತೋ ವೇದಿಂ ಕಲ್ಪಯಿತ್ವಾ ಯಥಾವಿಧಿ ॥ ೩೦ ॥**

---

೨೬. ಅಲ್ಲೊಂದು ಕಮಲದಳವನ್ನು ಬರೆಯಬೇಕು. ಆ ದಳಮಧ್ಯದಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ಮತ್ತು ಆ ಮೇಲೆ ಅದೇ ದಳದಲ್ಲೇ ಶ್ರೀಮನ್ಮಹಾ ಲಕ್ಷ್ಮಿಯನ್ನೂ ಸಹ ಪೂಜಿಸಿ ಆ ದಳದ ಕೇಸರಗಳಲ್ಲಿ ಇದರಡಿ ವಿವರಿಸುವ ದೇವತಾ ಪೂಜೆಗಳನ್ನು ಮಾಡಬೇಕು.

೨೭. ಆ ಅಷ್ಟದಳಗಳಲ್ಲೂ ಕ್ರಮವಾಗಿ ಬ್ರಹ್ಮ-ಈಶ್ವರ-ಚಂದ್ರ-ಸೂರ್ಯ-ಅಶ್ವಿನೀ ದೇವತೆಗಳು-ರೇವಂತ-ಉಚ್ಚೈಃಶ್ರವಸ್ಸು-ಅಷ್ಟದಿಕ್ಪಾಲಕರುಗಳನ್ನು ಪೂಜೆ ಮಾಡಬೇಕು.

೨೮. ಈ ಸಕಲ ದೇವತೆಗಳಿಗೂ ಕ್ರಮವಾಗಿ ಗಂಧ-ಪುಷ್ಪ-ಧೂಪ-ದೀಪ-ನೈವೇದ್ಯ-ತಾಂಬೂಲಾದಿ ಷೋಡಶೋಪಚಾರಗಳಿಂದಲೂ ಪೂಜೆಮಾಡಬೇಕು. ನೈವೇದ್ಯಕ್ಕೆ ಹಾಲು ಮೊಸರುಗಳನ್ನಿಡಬೇಕು.

೨೯. ಪ್ರತಿಯೊಂದಕ್ಕೂ ಪೂರ್ಣಕಲಶವನ್ನಿಟ್ಟು ಆ ಕಲಶಕ್ಕೆ, ಕಟ್ಟಿದ ಹೂವನ್ನು ಸುತ್ತಿ ಅಲಂಕರಿಸಿ ಕುಂಕುಮ ಗಂಧಾಕ್ಷತೆಗಳಿಂದಲಂಕರಿಸಿ ಅದರೊಳಗೆ ಅಕ್ಕಿಯನ್ನು ತುಂಬಿ ಕಲಶಕ್ಕೆ ವಸ್ತ್ರದ ಜೋಡಿಯನ್ನು ಹೊದಿಸಬೇಕು.

೩೦. ಆ ಕಲಶವನ್ನು ರಕ್ಷಾಸೂತ್ರ (ಹಸೀನೂಲು) ಗಳಿಂದ ಸುತ್ತಬೇಕು. ಪಕ್ಕದಲ್ಲಿ ಧ್ವಜವನ್ನು ನೆಡಬೇಕು. ಈ ರೀತಿ ಮಾಡಿ ಪೂಜೆ ಬೆಳೆದ ಬಳಿಕ ಈ ಕಲಶಗಳ ಉತ್ತರದಿಕ್ಕಿನಲ್ಲಿ ಅಗ್ನಿಕುಂಡವನ್ನು ನಿರ್ಮಾಣಮಾಡಬೇಕು.

**ತತಃ ಸಮುಪಧಾಯಾಗ್ನಿಂ ಯಥೋಕ್ತಾನಾಂ ಪೃಥಕ್ಪೃಥಕ್ ।**
**ತತೋಽಗ್ನಿಹವನಸ್ಯಾನು ಕಾಂಸ್ಯಂ ಗಾಂ ಕಾಂಚನಂ ತಥಾ ॥ ೩೧ ॥**

**ದೇಯಂ ವಸ್ತ್ರಯುಗಂಕರ್ತ್ರೇ ಕಾರಯಿತ್ರೇ ತಥೈವ ಚ ।**
**ಕರ್ಮೈತತ್ಸರ್ವರೋಗಘ್ನಂ ಸರ್ವಬಾಧಾ ವಿನಾಶನಂ ॥ ೩೨ ॥**

**ಉಪೋಷಿತೇನ ಕರ್ತವ್ಯಂ ಬ್ರಾಹ್ಮಣೇನ ಯಥಾವಿಧಿ ।**
**ಉಪೋಷಿತಸ್ತದಾ ತಿಷ್ಠೇದ್ಯಜಮಾನೋಽಪಿ ಭಾರ್ಗವ ॥ ೩೪ ॥**

**ಅತಃಪರಂ ಪ್ರವಕ್ಷ್ಯಾಮಿ ಕಾಮ್ಯಂಕರ್ಮ ತವಾನಘ ।**
**ಉಪೋಷಿತಸ್ತದಾ ತಿಷ್ಠೇದ್ಯಜಮಾನಪುರೋಹಿತೌ ॥ ೩೪ ॥**

---

೩೧. ಅಗ್ನಿಕುಂಡದಲ್ಲಿ ಆವಾಹಿತರಾದ ದೇವತೆಗಳಿಗೆಲ್ಲಾ ಆಜ್ಯದ್ರವ್ಯದಿಂದ ಬೇರೆ ಬೇರೆಯಾಗಿ ಹೋಮವನ್ನು ಮಾಡಬೇಕು. ಹೋಮಕರ್ಮವು ಮುಗಿದ ಬಳಿಕ ಒಂದು ಗೋದಾನ ಮಾಡಬೇಕು. ಈ ಗೋವಿಗೆ ವಸ್ತ್ರಯುಗ್ಮವನ್ನು ಹೊದ್ದಿಸಿರಬೇಕು. ಗೊದಾನದ ಜತೆಯಲ್ಲಿ ಹಾಲುಕರೆಯುವ ಒಂದು ಕಂಚಿನ ಚೊಂಬನ್ನೂ ಸಹ ಕೊಡಬೇಕು.

೩೨. ಈ ಗೋದಾನವು ಪುರೋಹಿತರಿಗೆ ಸಲ್ಲತಕ್ಕದ್ದು. ಋತ್ವಿಕ್ಕುಗಳಿಗೂ ಸಹ ಯಥೋಚಿತವಾಗಿ ದಕ್ಷಿಣೆಯನ್ನು ಕೊಡಬೇಕು. ಈ ನೈಮಿತ್ತಿಕಕರ್ಮಾಚರಣೆಯಿಂದ ಸಕಲ ವಿಧವಾದ ಅಶ್ವರೋಗಗಳೂ ಪರಿಹಾರವಾಗುವುವು.

೩೩. ಈ ಶಾಂತಿಕ್ರಮವನ್ನು ಮಾಡುವ ಯಜಮಾನನೂ ಮಾಡಿಸುವ ಪುರೋಹಿತನೂ ಸಹ ಉಪೋಷ್ಯದಿಂದಿದ್ದು ಈ ಕೆಲಸ ಮಾಡಬೇಕು.

೩೪. ಇನ್ನು ಮುಂದೆ ಅಶ್ವಗಳಿಗೆ ಸಂಬಂಧಪಟ್ಟ ಕಾಮ್ಯಕರ್ಮಗಳನ್ನು ತಿಳಿಸುತ್ತೇನೆ, ಕೇಳು. ಈ ಕಾಮ್ಯಕರ್ಮವನ್ನು ಅಶ್ವಿನೀನಕ್ಷತ್ರದ ದಿವಸ ಮಾಡಬೇಕು. ಅದರ ಹಿಂದಿನ ದಿವಸವಾದ ರೇವತೀ (ಪೌಷ್ಣ) ನಕ್ಷತ್ರದ ದಿವಸ ಯಜಮಾನ ಪುರೋಹಿತರಿಬ್ಬರೂ ಉಪವಾಸದಿಂದಿರಬೇಕು.

**ಅಶ್ವಾನವಾಪ್ನೋತಿ ಸಹಸ್ರಸಂಖ್ಯಾನ್**
**ಕುಲೋದ್ಭವಾನ್ವೀರ್ಯ ಬಲೋಪಪನ್ನಾನ್ ॥ ೪೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಅಶ್ವಾನಾಂ ಶಾಂತಿಕರ್ಮ ವಿಧಾನಂನಾಮ ಸಪ್ತಚತ್ವಾರಿಂಶತ್ತಮೋಽಧ್ಯಾಯಃ**

---

ಶಾಂತಿಗಳನ್ನೂ ಮಾಡುತ್ತ ಯಾರು ಬರುವರೋ ಅವರು ಅಶ್ವಾಭಿವೃದ್ಧಿಯನ್ನು ಸಹಸ್ರಸಹಸ್ರಗಟ್ಟಲೆಯಾಗಿ ಪಡೆಯುತ್ತಾರೆ. ಆ ರೀತಿ ಹೆಚ್ಚುವ ಕುದುರೆಗಳೆಲ್ಲವೂ ವೀರ್ಯಾಯುರಾರೋಗ್ಯಗಳಿಂದ ಕೂಡಿ ಸುಖವಾಗಿರುತ್ತವೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ ದ್ವಿತೀಯ ಖಂಡದಲ್ಲಿ ಅಶ್ವಶಾಂತಿಕರ್ಮವಿಧಾನವೆಂಬ ಹೆಸರಿನ ನಲವತ್ತೇಳನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯ
## ಅಷ್ಟಚತ್ವಾರಿಂಶತ್ತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಕುಂಜರಾಃ ಪರಮಾ ಶೋಭಾ ಶಿಬಿರಸ್ಯ ಬಲಸ್ಯ ಚ ।**
**ಆಯಾತಿ ಕುಂಜರೇಷ್ವೇವ ವಿಜಯಃ ಪೃಥಿವೀಕ್ಷಿತಾಂ ॥ ೧ ॥**

**ತೇಷಾಂ ಸಂಗ್ರಹಣೇ ಯತ್ನಂ ಪಾಲನೇ ಚ ಭೃಗೂತ್ತಮ ।**
**ಯಥಾವನ್ನೃಪತಿಃ ಕುರ್ಯಾದ್ಗಂಧರ್ವಾಃ ಕುಂಜರಾ ಮತಾಃ ॥ ೨ ॥**

---

## ನಲವತ್ತೆಂಟನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ :—ಇನ್ನು ಮುಂದೆ ಆನೆಗಳ ವಿಷಯವನ್ನು ಹೇಳುತ್ತೇನೆ. ಕೇಳಯ್ಯಾ ! ಪರಶುರಾಮ ! ಕುದುರೆಗಳಂತೆ ಆನೆಗಳೂ ಸಹ ಬಹಳ ಸೊಗಸಾದ ಪ್ರಾಣಿಗಳು. ಚತುರಂಗಬಲಗಳಲ್ಲಿ ಇವುಗಳೂ ಸೇರಿವೆ. ಇವುಗಳನ್ನೆ ಸಂರಕ್ಷಿಸುವುದಕ್ಕೋಸ್ಕರ ಗಜಶಾಲೆಯನ್ನು ಪ್ರತ್ಯೇಕವಾಗಿ ಕಟ್ಟಿಸಬೇಕು. ಮಹಾರಾಜರುಗಳಿಗೆ ಈ ಆನೆಗಳು ವಿಜಯವನ್ನುಂಟುಮಾಡತಕ್ಕ ಪ್ರಾಣಿಗಳು. ಜಯವು ಇವುಗಳಿಂದಲೇ ಉಂಟಾಗುತ್ತದೆ.

೨. ಆದ್ದರಿಂದ ಆನೆಗಳನ್ನು ಅವಶ್ಯವಾಗಿ ರಾಜನು ಸಂರಕ್ಷಿಸಿ ಇಟ್ಟುಕೊಂಡಿರಬೇಕು. ಮತ್ತು ಅವುಗಳನ್ನು ಚೆನ್ನಾಗಿ ಪೋಷಿಸಬೇಕು. ಆನೆಗಳು. ಗಂಧರ್ವರಿಗೆ ಇಷ್ಟವಾದ ವಾಹನಗಳು.

ಜಯಂತಾತ್ತ ತಥಾ ಧಾರ್ಯಾ ಯಾವತಾಂ ಪೋಷಣಂ ಸುಖಂ ।
ಕರ್ತುಂ ಶಕ್ಯಂ ನ ಧಾರ್ಯಾಸ್ತೇ ಕ್ಷುಧಿತಾ ದುಃಖಿತಾಸ್ತಥಾ ॥ ೩ ॥

ದುಃಖಿತಾಸ್ತೇ ನೃಣಾಂ ಹನ್ಯುಃ ಕುಲಾನಿ ಚ ಭೃಗೂತ್ತಮ ।
ತಸ್ಮಾತ್ತೇಷಾಂ ಸುಖಂ ಕಾರ್ಯಂ ಯಶಃ ಶ್ರೀ ವಿಜಯಪ್ರದಂ ॥ ೪ ॥

ಸನ್ನದ್ಧಪುರುಷಾರೂಢೈಃ ಸುಸನ್ನದ್ಧೈಸ್ತುರಂಗಮೈಃ ।
ಅನಲ್ಪೈರಪಿ ಯದ್ಯುಕ್ತಂ ಬಲಂ ಪರಬಲಪ್ರಣುತ್ ॥ ೫ ॥

ತದ್ವೈಕಸ್ಯಾಪಿ ಸಮರೇ ಕುಂಜರಸ್ಯ ಸವರ್ಮಣಃ ।
ನ ಶಕ್ಯಂ ಪ್ರಮುಖೇ ಸ್ಥಾತುಂ ವೇಗಾದಾಪತತೋ ದ್ವಿಜ ॥ ೬ ॥

ಅಭಿನ್ನಾನಾಂ ತು ಸಂಘಾನಾಂ ಸಂಹೃತಾನಾಂ ಚ ಭೇದನಂ ।
ಏಕಃ ಕ್ರುದ್ಧೋ ರಣೇ ಕುರ್ಯಾತ್ಕುಂಜರಃ ಸಾಧು ಚೋದಿತಃ ॥ ೭ ॥

---

೩. ಆದ್ದರಿಂದ ಆನೆಗಳನ್ನು ಗಂಧರ್ವರೆಂದೂ, ಜಯಂತರೆಂದೂ ಕರೆಯುತ್ತಾರೆ. ಎಷ್ಟಾನೆಗಳನ್ನು ಸಂರಕ್ಷಿಸುವ ಶಕ್ತಿಯಿದೆಯೋ ಅಷ್ಟೇ ಆನೆಗಳನ್ನು ರಾಜನಾದವನು ಕಟ್ಟಿಕೊಳ್ಳಬೇಕು. ಅದಕ್ಕಿಂತ ಹೆಚ್ಚು ಆನೆಗಳನ್ನು ಕಟ್ಟಿಕೊಂಡಿರಬಾರದು. ಆನೆಗಳು ಹಶುವಿನಿಂದ ದುಃಖಪಟ್ಟರೆ ಶ್ರೇಯಸ್ಸಾಗುವುದಿಲ್ಲ.

೪. ಆನೆಗಳು ಕ್ಷುದ್ಬಾಧೆಯಿಂದ ದುಃಖಪಟ್ಟರೆ ಅದು ಮನುಷ್ಯರ ವಂಶವನ್ನೇ ತೊಡೆದುಬಿಡುವುದು. ಆದ್ದರಿಂದ ಅವುಗಳನ್ನು ಸುಖವಾಗಿ ಸಾಕುವ ಪ್ರಯತ್ನ ಮಾಡಬೇಕು. ಆನೆಗಳು ಸುಖವಾಗಿದ್ದರೆ ಕೀರ್ತಿಲಕ್ಷ್ಮಿಯೂ, ವಿಜಯಲಕ್ಷ್ಮಿಯೂ ಕರಗತವಾಗುವುವು.

೫-೬. ಯುದ್ಧರಂಗದಲ್ಲಿ ಸುಸಜ್ಜಿತವಾದ ಆನೆಯೊಂದಿದ್ದರೆ ಸಾಕು. ಆ ಆನೆಯ ಮುಂದೆ ಸನ್ನದ್ಧಪುರುಷರಿಂದ ಆರೋಹಿಸಲ್ಪಟ್ಟ ಸುಸಜ್ಜಿತವಾದ ಕುದುರೆಗಳೆಷ್ಟೇ ಬಂದರೂ ಅವು ಅದರ ಮುಂದೆ ನಿಲ್ಲಲಾರವು. ಆ ಆನೆಯು ವೇಗದಿಂದ ನುಗ್ಗಿತೆಂದರೆ ಎಷ್ಟೋ ಕುದುರೆಗಳಾದರೂ ಸಹ ಪುಡಿಪುಡಿಯಾಗಿ ಹೋಗುವುವು.

೭. ಎಷ್ಟೇ ಕುದುರೆಗಳು ಒಟ್ಟೊಟ್ಟಿಗೆ ಗುಂಪು ಗುಂಪಾಗಿ ಸೇರಿಕೊಂಡಾಗ್ಗೂ ಒಂದಾನೆ ಕೋಪಿಸಿಕೊಂಡು ಆ ಗುಂಪಿನಮೇಲೆ ಬಿದ್ದಿತೆಂದರೆ ಎಲ್ಲ ಕುದುರೆಗಳೂ ಭೇದಿಸಿಹೋಗುತ್ತವೆ. (ಚಲ್ಲಾಪಿಲ್ಲಿಯಾಗಿ ಓಡಿಹೋಗುತ್ತವೆ.)

ಮದಕ್ಲಿನ್ನಕಪೋಲಸ್ಯ ಕಿಂಚಿದಂಚಿತಚಕ್ಷುಷಃ ।
ಬೃಹದಾಭೋಗಶುಂಡಸ್ಯ ಕಃ ಶೋಭಾಂ ಕಥಿತುಂ ಕ್ಷಮಃ ॥ ೮ ॥

ವೇಗೇನ ಧಾವಮಾನಸ್ಯ ಪ್ರಸಾರಿತಕರಸ್ಯ ಚ ।
ಕಃ ಸಮರ್ಥಃ ಪುರಃ ಸ್ಥಾತುಂ ಸ್ತಬ್ಧಕರ್ಣಸ್ಯ ದಂತಿನಃ ॥ ೯ ॥

ಯಸ್ಯ ಫೂತ್ಕಾರಮಾತ್ರೇಣ ತುರಂಗಮಶತಾನ್ಯಪಿ ।
ಸ್ವಾರೂಢಾನ್ಯಪಿ ವೇಗೇನ ವಿದ್ರವಂತಿ ದಿಶೋ ದಶ ॥ ೧೦ ॥

ತತ್ಸೈನ್ಯಂ ಕುಂಜರಾ ಯತ್ರ ಸ ನೃಪೋ ಯಸ್ಯ ಕುಂಜರಾಃ ।
ಮೂರ್ತಿಮಾನ್ವಿಜಯೋ ರಾಮ ಕುಂಜರಾ ಮದಗರ್ವಿತಾಃ ॥ ೧೧ ॥

---

೮. ಮದೋದಕಧಾರೆಯಿಂದ ಶೋಭಿಸುವ ಗಂಡಸ್ಥಳವುಳ್ಳ, ಚಿಕ್ಕ ಚಿಕ್ಕ ಕಣ್ಣುಗಳುಳ್ಳ ಘಟಸರ್ಪದಂತೆ ಸೊಂಡಿಲನ್ನುಳ್ಳ ಆನೆಯ ಕಾಂತಿಯನ್ನು ವರ್ಣಿಸಲು ಯಾವನು ತಾನೇ ಸಮರ್ಥನಾದಾನು ?

೯. ಬಲುವೇಗದಿಂದೋಡಿಬರುತ್ತಿರುವ, ಸೊಂಡಿಲನ್ನೆತ್ತಿಕೊಂಡು ಕಿವಿಯನ್ನು ಅಲ್ಲಾಡಿಸದೆ ಮುಂದೆ ನುಗ್ಗುವ, ಆನೆಯ ಮುಂದೆ ನಿಲ್ಲಲು ಯಾರಿಗೆ ತಾನೇ ಶಕ್ತಿಯಿದ್ದೀತು ?

೧೦. ಒಂದೇ ಒಂದು ಆನೆಯು ಫೂತ್ಕಾರ ಶಬ್ದವನ್ನು ಮಾಡಿತೆಂದರೆ ನೂರಾರು ಕುದುರೆಗಳು ತಮ್ಮ ತಮ್ಮ ಸವಾರರನ್ನು ಕೆಳಕ್ಕೆ ಕೆಡವಿಕೊಂಡು ಅಥವಾ ಮೇಲೆ ಅವರು ಕೂತಿದ್ದ ಹಾಗೆಯೇ ದಿಕ್ಕಾಪಾಲಾಗಿ ಓಡಿಹೋಗುವುದರಲ್ಲಾಶ್ಚರ್ಯ ವೇನಿದೆ ?

೧೧. ಇಂತಹ ಪರಾಕ್ರಮಶಾಲಿಗಳಾದ ಆನೆಗಳ ಭಾರೀ ಸೈನ್ಯವು ಯಾವ ರಾಜನ ವಶದಲ್ಲಿರುತ್ತದೆಯೋ ಅಂತಹ ರಾಜನ ಮದಗರ್ವಿತಗಳಾದ ಆನೆಗಳನ್ನು ಮೂರ್ತಿಮತ್ತಾದ ವಿಜಯಮೂರ್ತಿ (ರೂಪ) ಗಳೆಂದೇ ತಿಳಿಯಬೇಕು.

**ಸಪಕ್ಷಾ ದೇವವಾಹ್ಯಾಸ್ತೇ ಮನುಜಾನಾಂ ತ್ವಪಕ್ಷಕಾಃ ।**
**ವಾಹನಾರ್ಥಂ ಕೃತಾ ರಾಮ ಸ್ವಯಮೇವ ತು ವೇಧಸಾ ॥ ೧೨ ॥**

**ದೃಷ್ಟ್ವಾ ಪತಾಕಾಭಿರಲಂಕೃತಂ ತು**
**ನಾಗೇಂದ್ರಸೈನ್ಯಂ ಪ್ರಬಲಂ ಯಥಾಽದ್ರಿಂ ।**
**ಪತಂತಿ ಶೀಘ್ರಂ ಹೃದಯಾನ್ಯರೀಣಾಂ ।**
**ತಸ್ಮಾತ್ಪ್ರಧಾನಾಃ ಸತತಂ ಗಜೇಂದ್ರಾಃ ॥ ೧೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಗಜಪ್ರಶಂಸಾ ನಾಮ ಅಷ್ಟಚತ್ವಾರಿಂಶತ್ತಮೋಽಧ್ಯಾಯಃ**

---

೧೨. ದೇವತೆಗಳೂ, ಗಂಧರ್ವರೂ ಕುಳಿತು ಸವಾರಿಮಾಡುವ ಆನೆಗಳಿಗೆ ರೆಕ್ಕೆಗಳಿರುತ್ತವೆ. ಮನುಷ್ಯರು ಕುಳಿತುಕೊಳ್ಳುವ ಆನೆಗಳಿಗೆ ರೆಕ್ಕೆಗಳಿರುವುದಿಲ್ಲ. ಇಂತಹ ಆನೆಗಳನ್ನು ದೇವತೆಗಳ ಮತ್ತು ಮನುಷ್ಯರ ಉಪಯೋಗಕ್ಕಾಗಿ ಪ್ರಪಂಚವನ್ನು ಸೃಷ್ಟಿಸಿದಾಗ ಬ್ರಹ್ಮನು, ತಾನೇ ಇವುಗಳನ್ನು ಸೃಷ್ಟಿಮಾಡಿದನು.

೧೩. ಸವಾರರು ಬಾವುಟಗಳನ್ನು ಹಿಡಿದುಕೊಂಡು ಆನೆಗಳ ಮೇಲೆ ಕುಳಿತುಕೊಂಡು ಹೊರಟಿರುವುದನ್ನು ನೋಡಿದರೆ ದೊಡ್ಡ ದೊಡ್ಡ ಬೆಟ್ಟಗಳೇ ನಡೆದುಕೊಂಡು ಬರುತ್ತಲಿವೆಯೋ ಎಂಬಂತೆ ಕಾಣುತ್ತಲಿರುವಲ್ಲಿ, ಇಂತಹ ಆನೆಗಳ ಪಡೆಯನ್ನು ನೋಡಿದ ಮಾತ್ರದಿಂದಲೇ ಶತ್ರುರಾಜರ ಎದೆಗಳು ಒಡೆದು ಕೆಳಗೆ ಬಿದ್ದು ಹೋಗುತ್ತವೆ. ಆದ್ದರಿಂದ ಗಜಶ್ರೇಷ್ಠಗಳು ಸೈನ್ಯದಲ್ಲಿ ಮುಖ್ಯ ಸ್ಥಾನವನ್ನು ಪಡೆದಿವೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಎರಡನೆಯ ಖಂಡದಲ್ಲಿ ಗಜಪ್ರಶಂಸೆಯೆಂಬ ಹೆಸರಿನ ನಲವತ್ತೆಂಟನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಅಥೈಕೋನಪಂಚಾಶತ್ತಮೋಽಧ್ಯಾಯಃ

**ಪುಷ್ಕರ ಉವಾಚ**

**ಅತಃ ಪರಂ ಪ್ರವಕ್ಷ್ಯಾಮಿ ಕುಂಜರಾಣಾಂ ಚಿಕಿತ್ಸಿತಂ ।**
**ಪಾಕಲೇಷು ತು ಸರ್ವೇಷು ಕರ್ತವ್ಯಮನುವಾಸರಂ ॥ ೧ ॥**

**ಘೃತತೈಲಪರೀಷೇಕಃ ಸ್ಥಾನಂ ವಾತವಿವರ್ಜಿತಂ ।**
**ಸ್ಕಂಧೇಷು ಚ ತಥಾ ಕಾರ್ಯಾ ಕ್ರಿಯಾ ಪಾಕಲವದ್ದ್ವಿಜ ॥ ೨ ॥**

---

## ನಲವತ್ತೊಂಬತ್ತನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಎಲೈ ಪರಶುರಾಮನೇ! ಕೇಳು. ಇನ್ನು ಮುಂದೆ ನಿನಗೆ ಗಜಚಿಕಿತ್ಸಾಕ್ರಮವನ್ನು ಹೇಳುತ್ತೇನೆ. ಪ್ರತಿಯೊಂದು ವಾರದಲ್ಲೂ ಪಾಕಲೀಯ ಗಜಚಿಕಿತ್ಸಾ ಕ್ರಮದಂತೆ ಆನೆಗಳಿಗೆ ಚಿಕಿತ್ಸೆ ಮಾಡಬೇಕು. (ಪಾಕಲಾಚಾರ್ಯರು ಗಜಚಿಕಿತ್ಸೆಯ ವಿಷಯದಲ್ಲಿ ಒಂದು ವೈದ್ಯಗ್ರಂಥವನ್ನು ಬರೆದಿದಾರೆ. ಅದರಲ್ಲಿ ಈ ವಿಚಾರವನ್ನು ವಿಸ್ತಾರವಾಗಿ ಬರೆದಿರುತ್ತಾರೆ.)

೨. ಸಾಮಾನ್ಯವಾಗಿ ಆನೆಗಳಿಗೇನಾದರೂ ವ್ಯಾಧಿ ಪ್ರಾಪ್ತವಾದರೆ ಮೇಲೆ ವಿವರಿಸಿದ ಪಾಕಲೀಯ ವೈದ್ಯಶಾಸ್ತ್ರಾನುಸಾರವಾದ ಘೃತ ತೈಲಗಳಿಂದ ಅದರ ಮೈಯನ್ನು ಚೆನ್ನಾಗಿ ಉಜ್ಜಬೇಕು. ಆ ರೀತಿ ಉಜ್ಜುವಾಗ ಗಾಳಿಸಂಚಾರವಿಲ್ಲದ ಜಾಗದಲ್ಲಿ ಅದನ್ನು ನಿಲ್ಲಿಸಬೇಕು. ಮತ್ತು ಕತ್ತಿನ ಮೇಲೆಲ್ಲಾ ಚೆನ್ನಾಗಿ ತಿಕ್ಕಬೇಕು.

**ಗೋಮೂತ್ರಂ ಪಾಂಡುರೋಗೇ ತು ರಜನೀಭಿರ್ಯುತಂ ಹಿತಂ।**
**ಆನಾಹೇ ತೈಲಸಿಕ್ತಸ್ಯ ನಿವಾತಸ್ಥಂ ಪ್ರಶಸ್ಯತೇ ॥ ೩ ॥**

**ಲವಣೈಃ ಪಂಚಭಿರ್ಮಿಶ್ರಾ ಪ್ರತಿಪಾನಾಯ ವಾರುಣೀ।**
**ವಿಡಂಗತ್ರಿಫಲಾವ್ಯೋಷಸೈಂಧವೈಃ ಕವಲಾಃ ಕೃತಾಃ ॥ ೪ ॥**

**ಮೂರ್ಛಾಸ್ವಭೋಜಯೇನ್ನಾಗಂ ಕ್ಷೌದ್ರತೋಯಂ ತು ಪಾಯಯೇತ್।**
**ಅಭ್ಯಂಗಃ ಶಿರಸಃ ಕಾರ್ಯೋ ನಸ್ಯಶ್ಚೈವ ಪ್ರಶಸ್ಯತೇ ॥ ೫ ॥**

---

೩. ಆನೆಗಳಿಗೆ ಶೋಭೆಯುಂಟಾದರೆ ಅಥವಾ ಹೊಟ್ಟೆಯುಬ್ಬರಿಸಿಕೊಂಡಿದ್ದರೆ ಅರಿಶಿನ, ಮರದರಿಶಿನದ ಚೂರ್ಣಗಳನ್ನು ಗೋಮೂತ್ರದಲ್ಲಿ ಅರೆದು ಮೈಗೆಲ್ಲಾ ಲೇಪನಮಾಡಬೇಕು. ಹೊಟ್ಟೆಯುಬ್ಬರವಿದ್ದರೆ ಇದನ್ನು ಎಣ್ಣೆಯಲ್ಲಿ ಕಲಸಿ ಲೇಪ ಹಾಕಬೇಕು.

೪. ಆಗಿಂದಾಗ್ಗೆ ಆನೆಗಳಿಗೆ ಜ್ಞಾನತಪ್ಪಿ ಮೂರ್ಛೆಯುಂಟಾಗುತ್ತಿದ್ದರೆ ಸೈಂಧವ ಲವಣ, ಬಿಡಾಲಲವಣ, ಕಾಚುಲವಣ, ಸೌವರ್ಚಲಲವಣ ಮತ್ತು ಸಮುದ್ರಲವಣ ಗಳೆಂಬ ಪಂಚಲವಣಗಳನ್ನು ಪುಡಿಮಾಡಿ ಅದನ್ನು ಮದ್ಯಕ್ಕೆ ಬೆರಸಿ ಕುಡಿಸಿದರೆ ಅಥವಾ ಈ ಪಂಚಲವಣದ ಪುಡಿಯನ್ನೂ, ವಾಯುವಿಳಂಗ, ತಾರೆಕಾಯಿ, ನೆಲ್ಲಿಕಾಯಿ, ಅಳಲೆಕಾಯಿ, ಮೆಣಸು, ಹಿಪ್ಪಲಿ, ಶುಂಠಿಗಳ ಪುಡಿಯನ್ನೂ ಪಂಚಲವಣ ಚೂರ್ಣಕ್ಕೆ ಬೆರಸಿ ಮಾತ್ರೆಗಳನ್ನು ಮಾಡಿ ತಿನ್ನಿಸಿದರೆ ಗುಣವಾಗುವುದು.

೫. ಈ ರೀತಿ ಮೂರ್ಛೆ ಬೀಳುತ್ತಿರುವ ಆನೆಗಳಿಗೆ ಆಹಾರವನ್ನು ಕೊಡ ಕೂಡದು. ಜೇನುತುಪ್ಪಕ್ಕೆ ನೀರನ್ನು ಬೆರಸಿ ಅದನ್ನು ಮಾತ್ರ ಕುಡಿಸುತ್ತಿರಬೇಕು. ಶಿರಸ್ಸಿನ ಮೇಲೆ ಎಣ್ಣೆ ತಿಕ್ಕಿ ಬಿಸಿ ನೀರನ್ನು ಸುರಿದು ಈ ಮೇರೆ ಅಭ್ಯಂಗ ಮಾಡಿಸುತ್ತಿರಬೇಕಲ್ಲದೆ ಪಾಕಲಾಚಾರ್ಯರು ಹೇಳಿರುವ ನಸ್ಯಕ್ರಿಯೆಯನ್ನು ಸಹ ಮಾಡಬೇಕು.

ಟಿಪ್ಪಣಿ :—ಪಾಲಕಾಪ್ಯಾಚಾರ್ಯರು ತಾವು ಬರೆದಿರುವ ಹಸ್ತ್ಯಾಯುರ್ವೇದ ಗ್ರಂಥದಲ್ಲಿ ಇದೇ ಚಿಕಿತ್ಸಾವಿಷಯದಲ್ಲಿ ಏನು ಬರೆದಿರುವರೆಂಬುದನ್ನು ನೋಡಿರಿ. ಅಥವಿವಿಧ ಹಸ್ತಿಮೂರ್ಛಾ ಚಿಕಿತ್ಸಾ :—ಕುಯವಸಮಶುದ್ಧದೇಶಜಂ ಕ್ರಿಮಿಜುಷ್ಟಂ ಸ್ಥಾನದೋಷಾನ್ವಿತಂ-ವಾ-ಯವಸಂ, ಭುಕ್ತವತೋ, ನಾಗಸ್ಯ-ಯವಸಮೂರ್ಛಾ

**ನಾಗಾನಾಂ ಸ್ನೇಹಕಟುಕೈಃ ಪಾದರೋಗಾನುಪಕ್ರಮೇತ್ ।**
**ಪಂಚಕಲ್ಕಕಷಾಯೇಣ ಶೋಧನಂ ಚ ವಿಧೀಯತೇ ॥ ೬ ॥**

---

ಸಂಭವತಿ ಸ ತಥಾ ಪೀಡಿತಃ ಸ್ತಬ್ಧಕುಕ್ಷಿಃ ಶೂಲಾರ್ತೋಭವತಿ - ನಿಷೀದತಿ - ವೇಪತೆ-ಮುಹುರ್ಮುಹುಃ ಮುಖಂವ್ಯದದಾತಿ.

ತತಸ್ತಂ-ತ್ರಿಫಲಸೈಂಧವವಿಡಂಗವ್ಯೋಷ ಗೋಮಯಸಂಯುಕ್ತಾ - ಕವಳಾ ಭೋಜಯೇತ್. ಪ್ರಿಯಂಗುಲೋಧ್ರ ಮಧುಸಂಯುಕ್ತಾ-ಕವಳಾ ದದ್ಯಾತ್. ದಾರ್ವೀಕಂದಂ-ದರ್ಭಮೂಲಂ ಸಮಂಗಾಂ-ಮಧುರಸಾಂ--ಪಾಠಾಂ-ಹಿಂಗುಬೃಹತ್ಯೌ ಚ, ಕ್ವಾಥಯಿತ್ವಾ ಪರಿಸ್ರಾವ್ಯ - ರಾತ್ರಿಸ್ಥಿತಮಾಸವಂ ಮಧುಸಂಯುಕ್ತಂ ಪಾಯಯೇತ್. ಅರ್ಥ :—೪-೫ ನೇ ಶ್ಲೋಕದ ಚಿಕಿತ್ಸೆಯ ಕ್ರಮಕ್ಕೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ಈ ಪಾಕಲಚಿಕಿತ್ಸೆಯೂ ಹೇಳಲ್ಪಟ್ಟಿದೆ. ಮಾದರಿಗೋಸ್ಕರ ಒಂದು ಪ್ರಕೃತ ಸಂದರ್ಭಕ್ಕೆ ತಕ್ಕ ಚಿಕಿತ್ಸಾಕ್ರಮವನ್ನಿಲ್ಲಿ ಬರೆದಿದೇನೆ. ವನಕ್ಕೆ ಸೊಕ್ಕು ತಗಲಿದರೆ ಆಗುವಂತೆ ಕೆಟ್ಟ ಜೊಂಡನ್ನೂ-ಕ್ರಿಮಿಸಹಿತವಾದ ಜೊಂಡನ್ನೂ ಮೇದ ಆನೆಗೆ ಮೂರ್ಛೆ (ಸೊಕ್ಕು) ಸಂಭವಿಸುತ್ತದೆ. ಆ ಕಾಲದಲ್ಲಿ ಆ ಆನೆಯು ಸಂಕಟವನ್ನು ಸಹಿಸಲಾರದೆ ನಡುಗುತ್ತದೆ-ಮಲಗುತ್ತದೆ-ಏಳುತ್ತದೆ-ಮುಖವನ್ನು ವಿಕಾರವಾಗಿ ಮಾಡುತ್ತದೆ. ಅಂತಹ ಸಮಯದಲ್ಲಿ ಮೇಲ್ಕಂಡ ಪದಾರ್ಥಗಳ ಕವಳವನ್ನು ಒಳ್ಳೇ ಜೊಂಡಿನೊಡನೆ ಸೇರಿಸಿ ತಿನ್ನಿಸಿದರೆ ಈ ಕಷ್ಟ ತಪ್ಪುತ್ತದೆ. ಎರಡನೆಯದೇ ಆಸವಚಿಕಿತ್ಸೆ. ಈ ರೀತಿ ಮೇಲೆ ಹೇಳಿದ ಪದಾರ್ಥಗಳ ಕಷಾಯವನ್ನು ಮಾಡಿ ಮದ್ಯಕ್ಕೆ ಬೆರಸಿ ಕುಡಿಸಿದರೆ ಮದ್ಯಮೂರ್ಛೆಯು ಪರಿಹಾರವಾಗುವುದು.

೬. ಆನೆಗಳಿಗೆ ಕಾಲು ಊದಿಕೊಂಡು ಪಾದರೋಗಗಳೇನಾದರೂ ಪ್ರಾಪ್ತವಾದರೆ ಎಣ್ಣೆಗೆ ಕಟುಕದ್ರವ್ಯಗಳ ಚೂರ್ಣಗಳನ್ನು ಬೆರಸಿ ಕಾಲಿಗೆ ಲೇಪಿಸಬೇಕಲ್ಲದೆ ಪಂಚಕಲ್ಕ ಕಷಾಯದಿಂದ ವಿರೇಚನೆಗೆ ಕೊಟ್ಟು ದೇಹವನ್ನು ಶೋಧನೆಮಾಡಬೇಕು. (ಕಲ್ಕ, ಕಟುಕ, ಲವಣ, ಆಮ್ಲ, ಪಂಚಮೂಲಗಳ ವಿಷಯವಾಗಿ ಮುಂದೆ ಬರೆಯುವ ಟಿಪ್ಪಣಿಯನ್ನು ಓದಿನೋಡಿರಿ.)

...........ಮಂದನಂ ಕಾರ್ಯಂ ಮೃದು ಸ್ನಿಗ್ಧಂ ಚ ಭೋಜಯೇತ್ ।
ಶಿಖಿತಿತ್ತಿರಲಾವಾನಾಂ ಪಿಪ್ಪಲೀ ಮರಿಚಾನ್ವಿತೈಃ ॥ ೭ ॥

ರಸ್ಯೈಃ ಸಂಭೋಜಯೇನ್ನಾಗಂ ವೇಪಥುರ್ಯಸ್ಯ ಜಾಯತೇ ।
ಬಾಲಬಿಲ್ವಂ ತಥಾ ರೋಧ್ರಂ ಧಾತುಕೀಂ ವಿತುಷಾ ಸಹ ॥ ೮ ॥

ಅತೀಸಾರವಿನಾಶಾಯ ಪಿಂಡಂ ಭುಂಜೀತ ಕುಂಜರಃ ।
ನಸ್ಯಂ ಕರಗ್ರಹೇ ದೇಯಂ ಘೃತಂ ಲವಣಸಂಯುತಂ ॥ ೯ ॥

ಮಾಗಧೀ ಮರಿಚಾಢ್ಯಾ ಚ ಯವಾಗುರ್ಮಸ್ತುಸಾಧಿತಃ ।
ತತ್ಕರ್ಣಕೇ ಚ ದಾತವ್ಯಂ ವಾರಾಹಂ ಚ ತಥಾ ರಸಂ ॥ ೧೦ ॥

---

೭-೮. (ಇಲ್ಲಿ ಮೂಲದಲ್ಲಿ ಮೂರಕ್ಷರ ಬಿಟ್ಟುಹೋಗಿದೆ. ಆ ದ್ರವ್ಯವಾವುದೆಂದು ಬರೆಯಲು ಈ ಕಾರಣದಿಂದ ಅವಕಾಶವಿಲ್ಲ.) ಆನೆಗಳಿಗೆ ಮೃದುವಾಗಿಯೂ, ಜಿಡ್ಡಾಗಿಯೂ ಇರುವ ಆಹಾರದ್ರವ್ಯವನ್ನು ಕೊಡಬೇಕು. ಆನೆಗಳಿಗೆ ನಡುಕ ವೇನಾದರೂ ಆದರೆ ನವಿಲು, ಲಾವನ ಹಕ್ಕಿ, ಕಿತ್ತರಿಹಕ್ಕಿಗಳ ಹಿಕ್ಕೆಗಳನ್ನು ಪುಡಿ ಮಾಡಿ, ಅದಕ್ಕೆ ಹಿಪ್ಪಲಿ ಮತ್ತು ಶುಂಠಿಗಳ ರಸವನ್ನು ಬೆರಸಿ, ಅದನ್ನು ಆನೆಗೆ ಕುಡಿಸ ಬೇಕು. ಆನೆಗಳಿಗೆ ವಿಶೇಷ ಭೇದಿಯಾಗುತ್ತಿದ್ದರೆ, ಬಿಲ್ವಪತ್ರೆಯ ಹೀಚು, ಲೋಧ್ರ, ಧಾತಕೀ ಕುಸುಮಗಳನ್ನು ಅರೆದು ಉಂಡೆಮಾಡಿ ತಿನ್ನಿಸಿದರೆ ಭೇದಿ ನಿಲ್ಲುತ್ತದೆ.

೯. ಕರಗ್ರಹ ಸಂದರ್ಭದಲ್ಲಿ (ಸೊಂಡಿಲು ನೋವು) ಉಪ್ಪಿನ ಪುಡಿಯನ್ನು ತುಪ್ಪದಲ್ಲಿ ಕಲಸಿ ನಸ್ಯದಂತೆ ಮೂಸಿಸಬೇಕು.

೧೦. ಕಿವಿಯಲ್ಲಿ ಏನಾದರೂ ಸುರಿಯುತ್ತಿದ್ದರೆ ಹಿಪ್ಪಲಿ, ಮೆಣಸು ಪುಡಿಮಾಡಿ ಅದನ್ನು ಗಂಜಿ ಮತ್ತು ಮೊಸರಿಗೆ ಬೆರಸಿ, ಅದಕ್ಕೆ ಹಂದೀರಸವನ್ನು ಸೇರಿಸಿ ಕಿವಿಯಲ್ಲಿ ಬಿಟ್ಟರೆ ಗುಣವಾಗುವುದು.

**ದಶಮೂಲಕುಲತ್ಥಾಮ್ಲಕಾಕಮಾಚೀವಿಪಾಚಿತಂ ।**
**ತೈಲಮೂಷಣಸಂಯುಕ್ತಂ ಗಲಗ್ರಹಗದಾಪಹಂ ॥ ೧೧ ॥**
**ಅಷ್ಟಭಿರ್ಲವಣೈಃ ಪಿಷ್ಟೈಃ ಪ್ರಸನ್ನಾಂ ಪಾಯಯೇದ್ಧ್ಯುತಾಂ ।**
**ಮೂತ್ರಸಂಘೇಽಥವಾ ಬೀಜಂ ಕ್ವಥಿಕಂ ತ್ರಪುಸಸ್ಯ ಚ ॥ ೧೨ ॥**

---

೧೧. ಆನೆಗಳಿಗೆ ಕತ್ತಿನ ಬಳಿ ಏನಾದರೂ ಹುಣ್ಣಾಗಿ (ಗಂಡಾಮಾಲೆ) ಅವು ಸಂಕಟಪಡುತ್ತಿದ್ದರೆ ದಶಮೂಲದ ಕಷಾಯಕ್ಕೆ ಹುರಳಿ, ಮಾವಿನ ಓಟೆ, ಗಣಿಕೆ ಸಪ್ಪುಗಳನ್ನರೆದು ಬೆರಸಿ ಕುದಿಸಿ ತೈಲಮಾಡಿ, ಅವಕ್ಕೆ ಹಿಪ್ಪಲಿ ಪುಡಿ ಸೇರಿಸಿ ಹಚ್ಚುತ್ತಾ ಬಂದರೆ ಕತ್ತಿನಹುಣ್ಣು ವಾಸಿಯಾಗುವುದು.

೧೨. ಬೀಜ ಊದಿಕೊಂಡು ದೋಷವೇನಾದರೂ ಇದ್ದರೆ ಅಷ್ಟಮೂತ್ರಗಳಲ್ಲರೆದು ಅದಕ್ಕೆ ತಗರದ ಪುಡಿ ಬೆರಸಿ ಕುದಿಸಿ, ಅದನ್ನಾರಿಸಿ ಕುಡಿಸಿದರೆ ಆರೋಗ್ಯವಾಗುವುದು. ಇದು ಗಳಗ್ರಹಗದೆಗಳಿಗೂ ಲೇಪಿಸಬಹುದೆಂದು ಇಲ್ಲಿ ಅಭಿಪ್ರಾಯವಾಗುವಂತೆ ಕಾಣುತ್ತದೆ.

ಟಿಪ್ಪಣಿ: ೧೧-೧೨ನೇ ಶ್ಲೋಕಗಳಲ್ಲಿ ದಶಮೂಲ ಕಷಾಯ-ಅಷ್ಟಲವಣ. ಅಷ್ಟಲವಣ ಅಥವಾ ಮೂತ್ರಸಂಘವೆಂದು ಹೇಳಿದಾರೆ. ಇದು ವೈದ್ಯಶಾಸ್ತ್ರದಲ್ಲಿ ಹೇಳಿರುವ ಸಂಕೇತಪದಗಳಾದ್ದರಿಂದ ಈ ಸಂಕೇತಪದಗಳ ವಿವರಣೆಯನ್ನು ಇಲ್ಲಿ ಬರೆಯುವುದು ಅಪ್ರಕೃತವಾಗಲಾರದಷ್ಟೆ? ಇದರಲ್ಲಿ ಬರುವ ವೈದ್ಯಾಧ್ಯಾಯಗಳಿಗೆಲ್ಲಾ ಈ ಪದಗಳು ಸೂತ್ರಪ್ರಾಯವಾಗಿರುವುದರಿಂದ ಇಲ್ಲಿ ಬರೆಯುವೆನು. ಅಷ್ಟಲವಣವೆಂಬ ಪದವನ್ನು ಪಂಚಲವಣವೆಂದು ತಿದ್ದಿಕೊಳ್ಳಬೇಕು.

ದಶಮೂಲ;—ಮೂರಿಲೆಹೊನ್ನೆ, ಒಂದೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲುಗಳೆಂಬ ಲಘು ಪಂಚಮೂಲಗಳೂ, ಬಿಲ್ವ, ನರುವ, ಹೆಮ್ಮರ, ನೆಲಗುಂಬಳ, ಪಾದ್ರಿಯೆಂಬ ಹೆಸರಿನ ಮಹತ್ಪಂಚಮೂಲಗಳೂ ಸೇರಿ ಆಗುವ ಈ ಹತ್ತು ಬೇರುಗಳಿಗೆ ಅಥವಾ ಹತ್ತು ದ್ರವ್ಯಗಳಿಗೆ ದಶಮೂಲವೆಂದು ಹೆಸರು.

ಪಂಚಲವಣಗಳು;—ಸೈಂಧವಲವಣ, ಬಿಡಾಲಲವಣ, ಗಾಜುಲವಣ, ಸೌವರ್ಚಲವಣ, ಸಮುದ್ರಲವಣ, ಈ ಐದೂ ಪಂಚಲವಣ ಗಣಗಳು.

ಅಷ್ಟಮೂತ್ರ ಅಥವಾ ಮೂತ್ರಸಂಘ.—

ಮಹಿಷಾಜಾವಿಗೋಽಶ್ವಾನಾಂ ಖರಾಣಾಮುಷ್ಟ್ರಹಸ್ತಿನಾಂ ।
ಮೂತ್ರಾಷ್ಟಕಮಿತಿಖ್ಯಾತಂ ಸರ್ವಶಾಸ್ತ್ರೇಷುಸಂಮತಂ ॥

ಈ ಶ್ಲೋಕವೇ ಇದಕ್ಕೆ ಪ್ರಮಾಣ. ಇದರ ಅರ್ಥ;—

ಹಸು-ಮೇಕೆ-ಕತ್ತೆ-ಕುದುರೆ-ಒಂಟೆ-ಆನೆ-ಕುರಿ-ಎಮ್ಮೆ ಈ ಎಂಟು ಪ್ರಾಣಿಗಳ ಉಚ್ಚೆಗೆ ಅಷ್ಟಮೂತ್ರವೆಂದು ವೈದ್ಯಶಾಸ್ತ್ರದಲ್ಲಿ ಉಕ್ತವಾಗಿದೆ.

ಇದೇ ಮೇರೆ ಇನ್ನೂ ಕೆಲವು ಸಂಕೇತಪದಗಳುಂಟು. ಈಗ ಇದರ ಸಂದರ್ಭವು ಇಲ್ಲಿ ಬಂದಿರುವುದರಿಂದ ಆ ಪದಗಳನ್ನೂ ಸಹ ವಾಚಕರ ಅನುಕೂಲೋಪಕಾರಗಳಿಗಾಗಿ ಬರೆಯಲಾಗುವುದು.

ತ್ರಿಕ್ಷಾರಗಳು ;—ಯವಕ್ಷಾರ-ಸರ್ಜಕ್ಷಾರ-ಬಿಳಿಗಾರ ಇದಕ್ಕೆ ಆಧಾರಶ್ಲೋಕ :—

ಸರ್ಜಕ್ಷಾರಂ ಯವಕ್ಷಾರಂ ಟಂಕಣಕ್ಷಾರಮೇವ ಚ ।
ಕ್ಷಾರತ್ರಯಂ ಸಮಾಖ್ಯಾತಂ ವೈದ್ಯಶಾಸ್ತ್ರವಿಶಾರದೈಃ ॥

ಪಂಚಸುಗಂಧಗಳು :—ಕಸ್ತೂರಿ-ಕೇಸರಿ-ಪಚ್ಚಕರ್ಪೂರ-ಚಂದನ - ಗೋರೋಚನ.

ಆಮ್ಲಪಂಚಕ :—ಮಾದಳ-ನಿಂಬೆ - ಹೇರಿಳೆ - ಹುಳ್ಳಂಬರಸೆ (ಪುಳ್ಳಂಪರಚೆ)-ಹುಣಸೆ-ಈ ಐದು ಹುಳಿಗಳು.

ಮಧ್ಯಮಪಂಚಮೂಲ :—ಕಳ್ಳಂಗಡಲೆ - ಬಿಳೀಕೊಮ್ಮೆ - ಹರಳು - ಒಂದೆಲೆ ಹೊನ್ನೆ-ಮೂರೆಲೆ ಹೊನ್ನೆ.

ಚಾತುರ್ಜಾತಕ :—ಯಾಲಕ್ಕಿ-ಲವಂಗಪತ್ರೆ-ಲವಂಗಚಕ್ಕೆ-ನಾಗಕೇಸರ.

ಏಲಾಲವಂಗಪತ್ರಂ ಚ ತ್ರಿಸುಗಂಧಂ ತ್ರಿಜಾತಕಂ ॥

ತ್ರಿಫಲಾ ಅಥವಾ ತ್ರಿಫಲಿ :——ಇದಕ್ಕೆ ಫಲತ್ರಿಕಾ ಎಂದು ಅಮರದಲ್ಲಿ ಹೇಳಿದಾರೆ. ಅಳಲೆಕಾಯಿ-ತಾರೆಕಾಯಿ-ನೆಲ್ಲೀಕಾಯಿ. ಈ ವಿಚಾರವನ್ನು ಬೇರೊಂದು ಕಡೆಯಲ್ಲೂ ಬರೆದಿರುತ್ತೇನೆ. ಇದಕ್ಕೆ ಶಾಸ್ತ್ರಾಧಾರ :—

ಹರೀತಕೀ-ಚಾಮಲಕಂ-ವಿಭೀತಕ ಮಿತಿಸ್ಮೃತಂ ।
ತ್ರಿಫಲಾಫಲಮುದ್ದಿಷ್ಟಂ ತಚ್ಚಜ್ಞೇಯಂ ಫಲತ್ರಿಕಂ ॥

ಪಂಚಕೋಲಗಳು :—ಹಿಪ್ಪಲಿ-ಮೋಡಿ-ಚವ್ಯ-ಚಿತ್ರಮೂಲ-ಶುಂಠೀ.

ಪಿಪ್ಪಲೀ ಪಿಪ್ಪಲೀಮೂಲ ಚವ್ಯಚಿತ್ರಕ ನಾಗರೈಃ ।
ಏಕತ್ರಮಿಶ್ರಿತೈರೇಭಿಃ ಪಂಚಕೋಲಕ ಮುಚ್ಯತೇ ॥

ತ್ರಿಕಟು :—ಇದನ್ನು ತ್ರ್ಯೂಷಣ-ವ್ಯೋಷವೆಂದು ಅಮರದಲ್ಲಿ ಹೇಳಿದಾರೆ. ಇದಕ್ಕೆ ಹಿಪ್ಪಲಿ-ಮೆಣಸು-ಶುಂಠಿ ಎಂದು ಹೆಸರು. ಈ ಮೂರೂ ಸೇರಿ ತ್ರಿಕಟುಕ.

ಪಿಪ್ಪಲೀ ಮಂಚಶುಂಠೀಚ ತ್ರಯಮೇಕತ್ರಮಿಶ್ರಿತಂ ।
ತ್ರಿಕಟು ತ್ರ್ಯೂಷಣಂವ್ಯೋಷಂ ಕಟುತ್ರಯಮಿಹೋಚ್ಯತೇ ॥

೧೮-೧೭ ನೇ ಶ್ಲೋಕಗಳಲ್ಲಿ ದಶಮೂಲಮೂತ್ರಸಂಘ ಮುಂತಾದ ಪದಗಳು ಬಂದುದರಿಂದ ಇಷ್ಟು ವಿವರವಾದ ಟಿಪ್ಪಣಿಯನ್ನು ಬರೆದಿರುತ್ತೇನೆ.

ತ್ವಗ್ದೋಷೇಷು ಪಿಬೇನ್ನಿಂಬಂ ವೃಷಂ ವಾ ಕ್ವಥಿತಂ ದ್ವಿಪಃ ।
ಗವಾಂ ಮೂತ್ರಂ ವಿಡಂಗಾನಿ ಕೃಮಿದೋಷೇಷು ಶಸ್ಯತೇ ॥ ೧೩ ॥

ಶೃಂಗಬೇರಕಣಾದ್ರಾಕ್ಷಾಶರ್ಕರಾಭಿಃ ಶೃತಂ ಪಯಃ ।
ಕ್ಷತಕ್ಷಯಹರಂ ಪಾನಾತ್ತಥಾ ಮಾಂಸರಸಃ ಶುಭಃ ॥ ೧೪ ॥

ಮುದ್ಗೋದನಂ ವ್ಯೋಷಯುತಂ ಹ್ಯರುಚೌ ಚ ಪ್ರಶಸ್ಯತೇ ।
ದ್ರೋಣಿಕಾಶಾಂತಯೇ ಯೂಷಂ ಪಟೋಲೀನಿಂಬದುರ್ಗಜಂ ॥ ೧೫ ॥

ತ್ರಿವೃದ್ವ್ಯೋಷಾಗ್ನಿದಂತ್ಯರ್ಕಶ್ಯಾಮಕ್ಷೀರೇಭಪಿಪ್ಪಲೀ ।
ಏಷ ಗುಲ್ಮಹರಃ ಸ್ನೇಹಃ ಕೃತಶ್ಚೈವ ತಥಾಽಸವಃ ॥ ೧೬ ॥

---

೧೩. ಆನೆಗಳ ಚರ್ಮರಕ್ತ ಕೆಟ್ಟುಹೋಗಿದ್ದರೆ ಬೇವಿನಸಪ್ಪು, ಆಡುಸೋಗೆ ಸಪ್ಪಿನ ಕಷಾಯವನ್ನು ಮಾಡಿ ಕುಡಿಸಬೇಕು. ಹೊಟ್ಟೆಯಲ್ಲಿ ಏನಾದರೂ ಹುಳುಗಳು ಹೆಚ್ಚಿದ್ದ ಸಂದರ್ಭದಲ್ಲಿ ಹಸುವಿನ ಗಂಜಲಕ್ಕೆ ವಾಯುವಿಳಂಗವನ್ನು ಹಾಕಿ ಕುಡಿಸಿದರೆ ಗುಣವಾಗುತ್ತದೆ.

೧೪. ಏನಾದರೂ ವ್ಯಕ್ಯೆಗಳಲ್ಲಿ ಗಾಯವಾಗಿ ಆ ನೋವನ್ನು ತಾಳಲಾರದೆ ಆನೆಗಳು ಸೊರಗಿ ಸವೆದುಹೋಗುತ್ತಿರುವ ಸಂದರ್ಭದಲ್ಲಿ ಅತಿಬಜೆ, ದ್ರಾಕ್ಷಿ, ಕಲ್ಲುಸಕ್ಕರೆ ಪುಡಿಗಳನ್ನು ಹಾಲಿಗೆ ಹಾಕಿ ಬಿಸಿಮಾಡಿ ಆನೆಗಳಿಗೆ ಕುಡಿಸಬೇಕು. ಅಥವಾ ಮಾಂಸ ರಸವನ್ನು ಕುಡಿಸಿದರೂ ಸಹ ಒಳ್ಳೆಯದೇ.

೧೫. ಬೆಟ್ಟದ ಸಂದಿಗಳಲ್ಲಿ ಓಡುವಾಗ ಆನೆಗಳು ಏನಾದರೂ ಹೆದರಿ (ಬೆಚ್ಚಿ) ದ್ದರೆ, ಹುಲ್ಲು ತಿನ್ನದಿದ್ದರೆ ಅದರ ಶಾಂತಿಗೋಸ್ಕರ ಹುಗ್ಗಿಗೆ ತ್ರಿಕಟುಕವನ್ನು ಬೆರಸಿ ತಿನ್ನಿಸಬೇಕು. ಅಥವಾ ಬೆಟ್ಟಗಳಲ್ಲಿ ಸಿಕ್ಕುವ ಕಹಿಪಡವಲ—ಬೇವುಗಳಿಗೆ ವ್ಯೋಷವನ್ನು ಬೆರಸಿ ಕೊಡಬಹುದು.

ಟಿಪ್ಪಣಿ: ಸಂಕೇತ ಪದಗಳಿಗೆಲ್ಲಾ ಹೀಗೆಯೇ ವಿವರಣೆ ಬರೆದಿರುವುದರಿಂದ ಆ ಪದಗಳನ್ನು ಮುಂದೆ ಬಂದಾಗಲೆಲ್ಲಾ ಮೂಲರೂಪದಲ್ಲೇ ಪ್ರಯೋಗಿಸುತ್ತೇನೆ.

೧೬. ಆನೆಗಳ ಹೊಟ್ಟೆಯಲ್ಲಿ ಗಡ್ಡೆಕಟ್ಟಿದ್ದರೆ ತ್ರಿಕಟು, ಗೋಣೀಸಪ್ಪು, ಸೊಗದೇಬೇರು, ಗಜಹಿಪ್ಪಲಿಗಳನ್ನರೆದು ಅದನ್ನು ಎಣ್ಣೆಗೆ ಬೆರಸಿ ಅದಕ್ಕೆ ಸ್ವಲ್ಪ ಮದ್ಯವನ್ನು ಸೇರಿಸಿ ಕೊಡಬೇಕು.

ಕ್ಷೀರವೃಕ್ಷನದೀಜಂಬುಮಲ್ಲಕೀನಾಂ ತ್ವಚಃ ಶುಭಾಃ ।
ಹೃದ್ರೋಗಶಾಂತಯೇ ದೇಯಾ ವಿದಾರ್ಯಶ್ಚ ರಸೋದನಾತ್ ॥ ೧೭ ॥

ಭೇದನಶ್ರಾವಣಾಭ್ಯಂಗಸ್ನೇಹಪಾನಾನುವಾಸನೈಃ ।
ಸರ್ವಾನೇವ ಸಮುತ್ಪನ್ನಾನ್ನಿದ್ರವೇತ್ಸಮುಪಾಚರೇತ್ ॥ ೧೮ ॥

ಯಷ್ಟಿಕಂ ಮುದ್ಗಯೂಷೇಣ ಶಾರದೇಷು ತಥಾ ಪಿಬೇತ್ ।
ಬಾಲಬಿಲ್ವೈಸ್ತಥಾ ಲೇಪಃ ಕಟಿರೋಗೇಷು ಶಸ್ಯತೇ ॥ ೧೯ ॥

ವಿಡಂಗೇಂದ್ರಯವಾ ಹಿಂಗುಸರಲಂ ರಜನೀದ್ವಯಂ ।
ಪೂರ್ವಾಹ್ಣೇ ದಾಪಯೇತ್ಪಿಂಡಂ ಸರ್ವಶೂಲೋಪಶಾಂತಯೇ ॥ ೨೦ ॥

ಭಾರೇಣ ಚಲಿತಂ ದಂತಂ ಕುಂಜರಸ್ಯ ಸಮುದ್ಧರೇತ್ ।
ಪ್ರಧಾನಾ ಭೋಜನೇ ತೇಷಾಂ ಯಷ್ಟಿಕಾವ್ರೀಹಿಶಾಲಯಃ ॥ ೨೧ ॥

---

೧೭. ಹೃದಯರೋಗವಿದ್ದರೆ ಗೋಣೀಸಪ್ಪು, ನೇರಳೆಗಿಡದ ಚಕ್ಕೆಗಳನ್ನು ಪುಡಿಮಾಡಿ ಅನ್ನಕ್ಕೆ ಕಲಸಿ ತಿನ್ನಿಸಬೇಕು.

೧೮. ಈ ರೀತಿ ಗಜಗಳಿಗೆ ಸಂಭವಿಸುವ ನಾನಾವಿಧ ರೋಗಗಳ ವಿಧಾನವನ್ನು ಕಂಡುಹಿಡಿದು ಭೇದನ, ಶ್ರಾವಣ, ಅಭ್ಯಂಗನ, ಸ್ನೇಹ ಪಾನಾನುವಾಸನೆಗಳಿಂದ ಅವುಗಳನ್ನು ಪಚರಿಸಿ ರೋಗಪರಿಹಾರ ಮಾಡಬೇಕು.

೧೯. ಆನೆಗಳಿಗೆ ಕಟಿ(ಸೊಂಟ) ರೋಗವೇನಾದರೂ ಇದ್ದರೆ ಅತಿಮಧುರವನ್ನು ಹೆಸರುಬೇಳೆ ತೊಳೆದ ನೀರಿಗೆ ಬೆರಸಿ ಶರದೃತುಗಳಲ್ಲಿ ಕುಡಿಸಬೇಕು. ಬಿಲ್ವಪತ್ರೆ ಗಿಡದ ಒಂದು ಹೀಚನ್ನು ಜಜ್ಜಿ ಅದನ್ನು ಸೊಂಟಕ್ಕೆ ಸವರಿದರೆ ನೋವಾಗಲೀ ರೋಗವಾಗಲೀ ನಾಶವಾಗುವುದು.

೨೦. ಆನೆಗಳಿಗೆ ಎಂತಹ ಖಾಯಿಲೆ ಇದ್ದಾಗ್ಲೂ ವಾಯುವಿಳಂಗ, ಕೊಡಸಿಗೇ ಬೀಜ, ಇಂಗು, ಸರಳ, ಅರಿಶಿನ, ಮರದರಶಿನ ಇವುಗಳನ್ನೆಲ್ಲಾ ಅರೆದು ಉಂಡೆಮಾಡಿ ಬೆಳಗಿನ ವೇಳೆ ತಿನ್ನಿಸುತ್ತಿದ್ದರೆ ಯಾವ ರೋಗವೂ ಕಾಲುಹಾಕುವುದಿಲ್ಲ.

೨೧. ಬಹಳ ಭಾರದಿಂದ ಆನೆಗೆ ಕೊಂಬು ಮುರಿದುಹೋಗಿದ್ದರೆ ಅದನ್ನು ಎತ್ತಬೇಕು. ಆ ಬಾಧೆಯಿಂದ ಹಿಂಸೆಪಡುತ್ತಿರುವ ಆನೆಗೆ ಭತ್ತ, ಅಕ್ಕಿ, ಕಬ್ಬುಗಳನ್ನು ಕೊಡಬೇಕು.

ಮಧ್ಯಮೌ ಯವಗೋಧೂಮೌ ಶೇಷಾಃ ಪ್ರತ್ಯವರಾಃ ಸ್ಮೃತಾಃ ।
ವಿಧೌ ಯೋಗೇ ಪ್ರಯತ್ನೇನ ದಗ್ಧಿಕಾಂ ತು ವಿವರ್ಜಯೇತ್ ॥ ೨೨ ॥

ಯವಸೇಷು ತಥೈವೇಕ್ಷುರ್ನಾಗಾನಾಂ ಬಲವರ್ಧನಂ ।
ನಾಗಾನಾಂ ಯವಸಂ ಶುಷ್ಕಂ ಕಫವಾತಪ್ರಕೋಪನಂ ॥ ೨೩ ॥

ಮದಕ್ಷೀಣಸ್ಯ ನಾಗಸ್ಯ ಪಯಃಪಾನಂ ಪ್ರಶಸ್ಯತೇ ।
ಜೀವನೀಯೈಸ್ತಥಾ ದ್ರವ್ಯೈಃ ಶೃತೋ ಮಾಂಸರಸಃ ಶುಭಃ ॥ ೨೪ ॥

ಮದವೃದ್ಧಿಕರಾನ್ಯೋಗಾನ್ವಕ್ಷ್ಯಾಮ್ಯಹಮತಃ ಪರಂ ।
ರಣಕಾಲೇ ಸಮಾಪನ್ನೇ ಯಾನ್ರಾಜಾ ಸಂಪ್ರಯೋಜಯೇತ್ ॥ ೨೫ ॥

---

೨೨. ಯವಧಾನ್ಯ (ನವಣೆ) ಮತ್ತು ಗೋಧಿಗಳನ್ನು ತಿನ್ನಿಸತಕ್ಕದ್ದು ಮಧ್ಯಮ ಪಕ್ಷ. ಉಳಿದ ಆಹಾರವೆಲ್ಲಾ ಸಾಮಾನ್ಯವಾದುದೆಂದು ತಿಳಿಯಬೇಕು. ಈ ಪದಾರ್ಥಗಳೆಂದಿಗೂ ಬಿಸಿಯಾಗಿರಕೂಡದು. ಸಾಧ್ಯವಾದಷ್ಟು ಹಸೀಪದಾರ್ಥಗಳನ್ನೇ ಕೊಡಬೇಕು.

೨೩. ಆನೆಗಳಿಗೆ ಒಳ್ಳೇ ಹುಲ್ಲು (ಜೊಂಡು) ಕಬ್ಬು ಇವುಗಳನ್ನು ಕೊಟ್ಟರೆ ಬಲವೃದ್ಧಿಯಾಗುತ್ತದೆ. ಹಾಗಲ್ಲದೆ ಆ ಆನೆಗಳಿಗೆ ಒಣಹುಲ್ಲನ್ನೇನಾದರೂ ತಿನ್ನಿಸಿದರೆ ಕಫ ಮತ್ತು ವಾಯುಗಳು ಪ್ರಕೋಪವಾಗುವುವು.

೨೪. ಮದದಿಂದ ಕ್ಷೀಣಿಸಿ ಹೋದ ಆನೆಗೆ ಹಾಲು ಕುಡಿಸುವುದೊಳ್ಳೆಯದು. ಈಗ ಮುಂದೆ ಬರೆಯುವ ದ್ರವ್ಯಗಳಿಗೆ ಮಾಂಸರಸವನ್ನೂ ನೀರನ್ನೂ ಬೆರಸಿ ಕುಡಿಸಿದರೆ ಅದು ಪುಷ್ಟಿಯಾಗುವುದು.

೨೫. ಈ ರೀತಿಯಾದ ವೃದ್ಧಿಕರವಾದ ಯೋಗಗಳಿಂದ ಆನೆಯು ಮಹಾ ಬಲಿಷ್ಠವಾಗಿ ಯುದ್ಧಸಮಯವೊದಗಿದಾಗ ಬಹಳ ಸಹಾಯಮಾಡಿ ರಾಜನಿಗೆ ವಿಜಯವನ್ನು ಉಂಟುಮಾಡುತ್ತದೆ.

ವಾಯಸಃ ಕುರವಶ್ಚೋಭೌ ಕಾಕೋಲೀ ನಾಕುಲೀ ಹರಿಃ ।
ಭವೇತ್ ಕ್ಷೌದ್ರೇಣ ಸಂಯುಕ್ತಃ ಪಿಂಡಃ ಸದ್ಯಃ ಪ್ರಭೇದನಃ ॥ ೨೬ ॥

ಜಾತಿಭಂಗಂ ಸಮೂಲಶ್ಚ ಕಪೋತತ್ವಕ್ತಥೇಂಗುದೀ ।
ಅಶ್ವಸಾರಕಭಂಗಶ್ಚ ಪಿಂಡೋಽಯಮಪರಸ್ತಥಾ ॥ ೨೭ ॥

ಅಜಶೃಂಗ್ಯರ್ಕಮೂಲಾಭ್ಯಾಂ ಸಕುಂಜಮಧುಸಂಯುತಃ ।
ಮಧುಮಿಶ್ರೋಽಪ್ಯಯಂ ಪಿಂಡಃ ಪುಷ್ಪಮೂಲಫಲಾನ್ವಿತಃ ॥ ೨೮ ॥

ಯುದ್ಧಕಾಲೇಽತ್ರ ನಾಗಸ್ಯ ಕರ್ತವ್ಯಾ ಮದವರ್ಧಿನೀ ।
ಕಟುಮತ್ಸ್ಯಾ ವಿಡಂಗಾನಿ ಕ್ಷಾರಃ ಕೋಶಾತಕೀ ಪಯಃ ॥ ೨೯ ॥

---

೨೬. ಗೋರಂಟೀ, ಕೆಂಪುಗೋರಂಟೀ, ಚೇಳುಕೊಂಡೀ (ಕಾಕೋಲೀ)ಸಪ್ಪು, ಸರ್ಪಾಕ್ಷೀ ಇವುಗಳನ್ನರೆದು ಜೇನುತುಪ್ಪದಿಂದ ಕಲಸಿ ಉಂಡೆಮಾಡಿ ತಿನ್ನಿಸಿದರೆ ಮದಕ್ಷಯವು ಗುಣವಾಗಿ ಆನೆಯು ಬಲಿಷ್ಠವಾಗುತ್ತದೆ.

೨೭. ಜಾಜೀಕುಡಿ (ಸಮೂಲ), ಪಾರಿವಾಳದಗರಿ, ಎಳ್ಳುಹಿಂಡಿ, ಕುದುರೆ ಲದ್ದಿಗಳನ್ನು ಚೆನ್ನಾಗಿ ಅರೆದು ಉಂಡೆಮಾಡಿ ತಿನ್ನಿಸುವುದು ಮತ್ತೊಂದು ವಿಧವಾದ ಚಿಕಿತ್ಸೆ.

೨೮. ಕುರಟಿಕೆ ಗಿಡದ ಬೇರು, ಎಕ್ಕದ ಬೇರುಗಳನ್ನು ಕುಟ್ಟಿ ಪುಡಿಮಾಡಿ ಜೇನುತುಪ್ಪದಲ್ಲಿ ಕಲಸಿ ಉಂಡೆಮಾಡಿ ತಿನ್ನಿಸುವುದೂ ಸಹ ಒಂದು ಪ್ರಯೋಗ.

ಟಿಪ್ಪಣಿ: ಸಮೂಲವೆಂದರೆ ಎಲೆ, ಹೂ, ಕಾಯಿ, ಬೇರು ಸಹಿತವಾಗಿ ಗಿಡಕ್ಕೆ ಗಿಡವನ್ನೇ ಕಿತ್ತು ಉಪಯೋಗಿಸಬೇಕೆಂದು ತಾತ್ಪರ್ಯ. ವೈದ್ಯಶಾಸ್ತ್ರದಲ್ಲಿ ಸಮೂಲ ವೆಂದು ಹೇಳಿರುವ ಕಡೆಗಳಲ್ಲೆಲ್ಲಾ ಇದೇ ಅಭಿಪ್ರಾಯ.

೨೯. ಯುದ್ಧಕಾಲವೊದಗಿದಾಗ ಆನೆಗಳಿಗೆ ಮದವರ್ಧಕವಾಗುವಂತೆ ಕೊಡ ಬೇಕಾದ ಔಷಧವನ್ನಿಲ್ಲಿ ತಿಳಿಸುತ್ತೇನೆ. ಕಟುಕರೋಹಿಣಿ, ವಾಯುವಿಳಂಗ, ಯವ ಕ್ಷಾರ, ಪಡವಲ ಬೇರುಗಳನ್ನು ಕುಟ್ಟಿ ಪುಡಿಮಾಡಿ ಹಾಲಿಗೆ ಬೆರಸಿ ಕುಡಿಸಬೇಕು.

**ಹರಿದ್ರಾ ಚೇತಿ ಧೂಪೋಽಯಂ ಕುಂಜರಸ್ಯ ಜಯಾವಹಃ ।**
**ಪಿಪ್ಪಲ್ಯಃ ಶ್ವೇತಲಶುನಂ ಹರಿತಾಲಂ ಮನಃಶಿಲಾ ॥ ೩೦ ॥**

**ಅಶ್ವಮೂತ್ರೋಕ್ಷಿತೋ ಧೂಪಃ ಸ್ಯಾತ್ಸೂರ್ಯಪರಿಶೋಷಿತಃ ।**
**ಮಾರ್ದ್ವೀಕಂ ಕಟುಮತ್ಸ್ಯಶ್ಚ ತಥಾ ಕಟುಕರೋಹಿಣೀ ॥ ೩೧ ॥**

**ಅಭಯಂ ಚ ತ್ರಯಃ ಶೈಲಂ ಧೂಪೋಽಯಮಪರಃ ಶುಭಃ ।**
**ಅಗ್ನಿಕಃ ಸರ್ವವರ್ಣಶ್ಚ ಪೀಲುರಿತ್ಯೇಷ ದೀಪನಃ ॥ ೩೨ ॥**

**ಪ್ರದೇಯಃ ಕವಲೋ ಯುದ್ಧೇ ಮನುಷ್ಯಾಸ್ಥಿಪ್ರಧೂಪಿತಃ ।**
**ಜೀರ್ಣೇ ವಿಧಾನೋ ದೇಯಃ ಸ್ಯಾತ್ಪಿಂಡಶ್ಚ ತೃಟ್‌ಕ್ಷಯಂಕರಃ ॥ ೩೩ ॥**

---

೩೦. ಆನೆಗಳಿಗೆ ಜಯಪ್ರದವಾಗುವಂತೆ ಹಾಕಬೇಕಾದ ಧೂಪಕ್ರಮವನ್ನಿಗೀ ವಿವರಿಸುತ್ತೇನೆ:—ಅರಿಶಿನ, ಹಿಪ್ಪಲಿ, ಬಿಳೀಈರುಳ್ಳಿ, ಅರಿದಳ, ಮನಶ್ಶಿಲೆ (ಮಣಿಶಿಲೆ) ಗಳನ್ನು ಚೂರ್ಣಮಾಡಿ ಧೂಪದ ಹುಡಿಯಂತೆ ಮಾಡಿ ಕೆಂಡದ ಮೇಲೆ ಹಾಕಿ ಧೂಪದ ಹೊಗೆಯನ್ನು ಕೊಡಬೇಕು.

೩೧. ದ್ರಾಕ್ಷೀಹಣ್ಣು, ಕಟುಮತ್ಸ್ಯ, ಕಟುಕರೋಹಿಣಿಗಳನ್ನು ಕುದುರೆಯ ಉಚ್ಚೆಯಲ್ಲಿ ನೆನಸಿ ಅರೆದು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಅದರ ಒಣಗಿದ ಪುಡಿಯ ಧೂಪವನ್ನು ಹಾಕಿದರೆ ಆನೆಗಳು ಜಯಶಾಲಿಗಳಾಗುವುವು.

೩೨. ಇನ್ನೊಂದು ವಿಧವಾದ ಧೂಪದ ಕ್ರಮವನ್ನು ಹೇಳುತ್ತೇನೆ. ಅಳಲಿ ಕಾಯಿ, ತಾರೇಕಾಯಿ, ನೆಲ್ಲೀಕಾಯಿ ಈ ಮೂರನ್ನೂ ಪುಡಿಮಾಡಿ ಶಿಲಾಜಿತುವಿನ ಹುಡಿಯನ್ನು ಬೆರಸಿ ಧೂಪಹಾಕುವುದು ಮತ್ತೊಂದು ಕ್ರಮ.

೩೩. ಇದೂ ಅಲ್ಲದೆ ವಿಜಯಶಾಲಿಯಾಗಬೇಕಾದ ಆನೆಗೆ ಇನ್ನೊಂದು ಧೂಪಪ್ರಯೋಗವನ್ನು ಹೇಳುತ್ತೇನೆ. ಚಿತ್ರಮೂಲ, ಸರ್ವಮೂಲ, ಗೋಣಿಚಕ್ಕೆಗಳ ಪುಡಿಮಾಡಿ ಹೊಗೆಹಾಕಿದರೆ ಆನೆಗಳು ಬಹು ಚಟುವಟಿಕೆಯಿಂದ ಯುದ್ಧೋನ್ಮುಖ ವಾಗುವುವು.

ಪಿಪ್ಪಲೀ ತಂಡುಲಸ್ತೈಲಂ ಮಾರ್ದ್ವೀಕಂ ಮಾಕ್ಷಿಕಂ ತಥಾ।
ನೇತ್ರಯೋಃ ಪರಿಷೇಕೋಽಯಂ ದೀಪನೀಯಃ ಪ್ರಶಸ್ಯತೇ ॥ ೩೪ ॥

ಪುರೀಷಂ ವೃಶ್ಚಿಕಾಯಾಶ್ಚ ತಥಾ ಪಾರಾವತಸ್ಯ ಚ।
ಕ್ಷೀರವೃಕ್ಷಕರೀರಾಶ್ಚ ಪ್ರಪನ್ನಾವಿಷ್ಟಮಂಜನಂ ॥ ೩೫ ॥

ಅನೇನಾಂಜಿತನೇತ್ರಸ್ತು ಕರೋತಿ ಕದನಂ ರಣೇ।
ಉತ್ಪಲಾನಿ ಚ ನೀಲಾನಿ ಮುಸ್ತಂ ತಗರಮೇವ ಚ ॥ ೩೬ ॥

ತಂಡುಲೋದಕಪಿಷ್ಟಾನಿ ನೇತ್ರನಿರ್ವಾಪಣಂ ಪರಂ।
ಪ್ರವೃದ್ಧಯೇ ನದೀಜಾನಾಂ ಪಂಚಮೇಽಬ್ದೇ ವನೌಕಸಾಂ ॥ ೩೭ ॥

ದಂತಮೂಲಪರೀಣಾಹಾದ್ದ್ವಿಗುಣಾತ್ಕಲ್ಪಯೇತ್ಪರಂ।
ವನೇವೃದ್ಧೈರ್ನವೇ ಛೇದಃ ಕರ್ತವ್ಯಶ್ಚ ತದಾ ಭವೇತ್ ॥ ೩೮ ॥

---

೩೪. ಆನೆಗಳಿಗೆ ಕಣ್ಣುನೋವಾಗಿದ್ದರೆ ಹಿಪ್ಪಲೀ, ವಾಯುವಿಳಂಗದ ಚೂರ್ಣವನ್ನು ಜೇನುತುಪ್ಪ, ದ್ರಾಕ್ಷೀಹಣ್ಣಿನ ರಸಕ್ಕೆ ಬೆರಸಿ ಕಣ್ಣುಗಳಿಗೆ ಪಟ್ಟುಹಾಕಿದರೆ ಕಣ್ಣುನೋವು ಹೋಗಿ ಬಹಳ ಸ್ಫುಟವಾಗುತ್ತದೆ.

೩೫. ಇದಕ್ಕೆ ಇನ್ನೊಂದು ಬಗೆ ಅಂಜನ (ಕಾಡಿಗೆ) ವನ್ನು ಮಾಡಬಹುದು. ಚೇಳಿನಮಲ, ಪಾರಿವಾಳದ ಹಕ್ಕಿಯ ಹಿಕ್ಕೆಗಳನ್ನು ಆಲದಹಾಲು, ಬೆರಣಿ ಬೂದಿಯಲ್ಲಿ ಬೆರಸಿ ಅರೆದು ಕಾಡಿಗೆಯಂತೆ ಮಾಡಿ ಆನೆಗಳ ಕಣ್ಣುಗಳಿಗೆ ಹಚ್ಚಿದರೆ ಒಳ್ಳೆಯದು.

೩೬. ಇನ್ನೂ ಒಂದು ವಿಧವಾದ ಅಂಜನವುಂಟು:—ಕನ್ನೈದಿಲೆಹೂ, ತುಂಗಮುಸ್ತೆಗೆಡ್ಡೆ, ತಗರ ಇವುಗಳ ಪುಡಿಯನ್ನು ಕಲಗಚ್ಚಿನಲ್ಲಿ ಅರೆದು ಕಣ್ಣಿಗೆ ಹಚ್ಚಿದರೆ ಆನೆಗಳ ನೇತ್ರರೋಗ ಪರಿಹಾರವಾಗುವುದು.

೩೭-೩೮. ಕಾಡಿನಲ್ಲಿ, ನದೀ ತೀರದಲ್ಲಿ ಹುಟ್ಟಿದ ಆನೆಗಳ ಕೊಂಬು, ಮೂಲಕ್ಕಿಂತಲೂ ತುದಿಯ ವಿಸ್ತಾರಹೆಚ್ಚಾಗಿದ್ದರೆ ಆ ವಿಧವಾದ ಕೊಂಬುಗಳನ್ನು ಐದು ವರ್ಷವಾಗಿದ್ದಾಗ ಕಸಿ ಮಾಡಿಬಿಟ್ಟರೆ ಅದು ಮುಂದಕ್ಕೆ ಸರಿಯಾಗಿ ಬೆಳೆಯುವುದು.

ಶಯ್ಯಾಸ್ಥಾನಂ ಭವೇಚ್ಚಾಸ್ಯ ಕರೀಷ್ಯೈಃ ಪಾಂಸುಭಿಸ್ತಥಾ ।
ತೈಲಾವಸೇಕಃ ಶೀತೇ ಸ್ಯಾನ್ಮಾಸಿಮಾಸಿ ತಥೈವ ಚ　　॥ ೩೯ ॥

ಶರನ್ನಿದಾಘಯೋಃ ಸೇಕಃ ಸರ್ಪಿಷಾ ಚ ತಥೇಷ್ಯತೇ ।

ರಾಜ್ಯದ್ವಿಪಾದಭ್ಯಧಿಕಾಂ ತು ಶೋಭಾಂ
ನಾಗಸ್ಯ ಚಾನ್ಯಸ್ಯ ನ ಜಾತು ಕುರ್ಯಾತ್ ।
ಶೋಭಾವಿಧಾನಂ ತ್ವಧಿಕಂ ಸದೈವ
ರಾಜ್ಯದ್ವಿಪಸ್ಯೈವ ನೃಪಸ್ತು ಕುರ್ಯಾತ್　　॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ಹಸ್ತಿಚಿಕಿತ್ಸಾನಾಮ ಏಕೋನ ಪಂಚಾಶತ್ತಮೋಽಧ್ಯಾಯಃ

---

೩೯. ಆ ರೀತಿ ಕೊಂಬನ್ನು ಕಸಿ (ಮುರಿದ) ಮಾಡಿದ ಆನೆಗೆ ಬೆರಣೀ ಬೂದಿ, ಸಣ್ಣ ಮರಳು ಇವುಗಳನ್ನು ಎಣ್ಣೆಯಲ್ಲಿ ಕಲಸಿ ಮುರಿದ ಜಾಗಕ್ಕೆ ಹಚ್ಚಿದರೆ ಅದು ತಿಂಗಳೊಳಗಾಗಿ ಗುಣವಾಗಿ ಕೊಂಬು ಚೆನ್ನಾಗಿ ಬೆಳೆಯುತ್ತದೆ.

೪೦. ಶರದೃತು, ಗ್ರೀಷ್ಮಋತುಗಳಲ್ಲಿ ತುಪ್ಪವನ್ನು ಆನೆಯ ಕೊಂಬಿಗೆ ಸವರಿ ನೀರು ಹಾಕುತ್ತಿರಬೇಕು, ರಾಜ್ಯದಲ್ಲಿ ಅಭಿಷೇಕ ಮಾಡಿಸಿಕೊಂಡ ಆನೆಗಿಂತ ಹೆಚ್ಚಾಗಿ ಬೇರೆ ಯಾವ ಆನೆಗೂ ಅಲಂಕಾರವನ್ನು ಮಾಡಕೂಡದು. ಇದು ಪಟ್ಟದ ಆನೆಗೆ ಸಂಬಂಧಿಸಿದ ಮಾತೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಹಸ್ತಿ ಚಿಕಿತ್ಸೆಯೆಂಬ ಹೆಸರಿನ
ನಲವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಪಂಚಾಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

**ಅತಃ ಪರಂ ತು ನಾಗಾನಾಂ ಶಾಂತಿಕರ್ಮ ನಿಬೋಧ ಮೇ।**
**ನಿತ್ಯಂ ನೈಮಿತ್ತಿಕಂ ಕಾಮ್ಯಂ ಯಥಾವದನುಪೂರ್ವಶಃ ॥ ೧ ॥**

**ಪಂಚಮೀಷು ಚ ಶುಕ್ಲಾಸು ವಾಸುದೇವಸ್ಯ ಪೂಜನಂ।**
**ಶ್ರಿಯಶ್ಚ ರಾಮ ಕರ್ತವ್ಯಂ ನಾಗಸ್ಯೈರಾವಣಸ್ಯ ಚ ॥ ೨ ॥**

**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ।**
**ತಥಾ ಚ ಕೃಷ್ಣಪಕ್ಷಾಂತೇ ಮಾಸಿಮಾಸಿ ದ್ವಿಜೋತ್ತಮ ॥ ೩ ॥**

---

### ಐವತ್ತನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ;—ಇನ್ನು ಮುಂದೆ ಆನೆಗಳಿಗೆ ಮಾಡಬೇಕಾದ ಶಾಂತಿಕರ್ಮ ಕ್ರಮವನ್ನು ಹೇಳುತ್ತೇನೆ. ಹಿಂದೆ ಗೋ ತುರಗಗಳಿಗೆ ಹೇಳಿದಂತೆ ಈ ಶಾಂತಿಕರ್ಮದಲ್ಲೂ ನಿತ್ಯ, ನೈಮಿತ್ತಿಕ, ಕಾಮ್ಯಗಳೆಂದು ಮೂರು ವಿಧವಾದ ಶಾಂತಿಗಳಿವೆ.

೨. ಪ್ರತಿ ತಿಂಗಳ ಶುಕ್ಲಪಕ್ಷದ ಪಂಚಮೀ ದಿವಸವೂ ನಿತ್ಯಶಾಂತಿಯನ್ನು ಮಾಡಬೇಕು. ಶಾಂತಿಯ ದಿವಸ ಮೊದಲು ವಾಸುದೇವನ ಪೂಜೆಯನ್ನೂ, ಬಳಿಕ ಲಕ್ಷ್ಮೀಪೂಜೆಯನ್ನೂ, ಬಳಿಕ ದೇವಲೋಕದ ಐರಾವತದ ಪೂಜೆಯನ್ನೂ ಮಾಡಬೇಕು.

೩-೪. ಮೇಲೆ ಹೇಳಿದ ದೇವರುಗಳೆಲ್ಲರಿಗೂ ಕ್ರಮವಾಗಿ ಗಂಧ ಮಾಲ್ಯ ನಮಸ್ಕಾರ ಧೂಪ ದೀಪಾನ್ನಸಂಪತ್ತಿನಿಂದಲೂ, ಹಾಗೂ ಪ್ರತಿ ಕೃಷ್ಣಪಕ್ಷದ ಕೊನೆಯಲ್ಲಿ ಸಕಲ ಭೂತವರ್ಗಗಳಿಗೂ ತಿಲಮಾಂಸಪಯೋಗುಡಗಳಿಂದಲೂ, ಮತ್ಸ್ಯಮಾಂಸ,

**ಭೂತೇಜ್ಯಾ ಸತತಂ ಕಾರ್ಯಾ ತಿಲಮಾಂಸಪಯೋಗುಡೈಃ ।**
**ಮತ್ಸ್ಯೈಃ ಪಕ್ವಾಮಿಷೈರ್ಭಕ್ಷ್ಯೈಃ ಸುಮನೋಭಿಶ್ಚ ಭಾರ್ಗವ ॥ ೪ ॥**

**ಚತುಷ್ಪಥೇಷು ರಥ್ಯಾಸು ತಥಾ ಶೂನ್ಯಗೃಹೇಷು ಚ ।**
**ಏಕವೃಕ್ಷಶ್ಮಶಾನೇಷು ಗೋಪುರಾಟ್ಟಾಲಕೇಷು ಚ ॥ ೫ ॥**

**ಸಂಗಮೇಷು ನದೀನಾಂ ಚ ಪರ್ವತಾನಾಂ ಗೃಹಾಸು ಚ ।**
**ತ್ರಿಕಂಟಕೇಷು ಮುಖ್ಯೇಷು ಶೂನ್ಯದೇವಗೃಹೇಷು ಚ ॥ ೬ ॥**

**ಶುಕ್ಲಪಕ್ಷಾವಸಾನೇಷು ದೇವತೇಜ್ಯಾ ವಿಧೀಯತೇ ।**
**ಗಜಸ್ಥಾನೋತ್ತರೇ ಭಾಗೇ ಪ್ರಾಗುದಕ್ಪ್ರವಣೇ ಶುಭೇ ॥ ೭ ॥**

**ಬ್ರಹ್ಮಾಣಂ ಶಂಕರಂ ವಿಷ್ಣುಂ ಶಕ್ರಂ ವೈಶ್ರವಣಂ ಯಮಂ ।**
**ಚಂದ್ರಾರ್ಕೌ ವರುಣಂ ವಾಯುಂ ತ್ವಗ್ನಿಂ ಪೃಥ್ವೀಂ ತಥಾ ಖಗಂ ॥ ೮ ॥**

**ಶೇಷಂ ಚ ನಾಗರಾಜಂ ತು ಭೂಧರಾಂಶ್ಚೈವ ಕುಂಜರಾನ್ ।**
**ವಿರೂಪಾಕ್ಷಂ ಮಹಾಪದ್ಮಂ ಭದ್ರಂ ಸುಮನಸಂ ತಥಾ ॥ ೯ ॥**

---

ಮತ್ತು ಪಕ್ವವಾದ ಮಾಂಸಗಳಿಂದಲೂ, ಮನೋಹರವೂ ರುಚಿಕರವೂ ಆದ ಭಕ್ಷ್ಯಗಳಿಂದಲೂ ತೃಪ್ತಿಯನ್ನುಂಟುಮಾಡಬೇಕು.

೫-೭. ಪ್ರತಿ ಶುಕ್ಲಪಕ್ಷದ ಕಡೇ ದಿವಸದಲ್ಲಿ ಇತರ ದೇವತೆಗಳ ಪೂಜೆಯನ್ನು ಮಾಡಬೇಕು. ಈ ಪೂಜೆಯನ್ನು ಮಾಡಬೇಕಾದ ಸ್ಥಳವಿಶೇಷವನ್ನೀಗ ಹೇಳುತ್ತೇನೆ, ಕೇಳು :—ನಾಲ್ಕು ದಾರಿ ಕೂಡಿದ ರಸ್ತೆ, ವಾಸಮಾಡದೆ ಬಿಟ್ಟ ಮನೆಗಳು, ಒಂದೇ ಮರವಿರುವ ಸ್ಮಶಾನ, ಊರಬಾಗಿಲು, ಅಟ್ಟಾಲಕ (ಚತುಷ್ಪಥ) ಸ್ಥಳ, ನದಿಗಳ ಸಂಗಮ, ಬೆಟ್ಟದ ದೊಡ್ಡ ದೊಡ್ಡ ಗುಹೆಗಳು, ದೇವರಿಲ್ಲದ ಪಾಳು ಗುಡಿಗಳು ; ಇಂತಹ ಸ್ಥಳಗಳಲ್ಲಿ ಪೂರ್ವೋತ್ತರ ಶ್ರವಣವಾದ ಶುಭಪ್ರದೇಶದಲ್ಲಿ ಪೂಜಾಸ್ಥಾನವನ್ನು ಕಲ್ಪಿಸಿಕೊಳ್ಳಬೇಕು.

೮-೧೨. ಅಂತಹ ಪರಮಪವಿತ್ರ ಸ್ಥಳಗಳಲ್ಲಿ ಪೂಜಿಸಬೇಕಾದ ದೇವತಾ ವಿಶೇಷಗಳನ್ನೀಗ ಅನುಕ್ರಮವಾಗಿ ಹೇಳುತ್ತೇನೆ. ಕೇಳಯ್ಯಾ! ಪರಶುರಾಮ! ಬ್ರಹ್ಮ, ವಿಷ್ಣು, ಮಹೇಶ್ವರರು, ಇಂದ್ರ, ಕುಬೇರ, ಯಮ, ಚಂದ್ರ, ಸೂರ್ಯರು,

ಅಷ್ಟೌ ಚ ದಿಗ್ಗಜಾ ಯೇ ವೈ ತೇ ಸ್ಮೃತಾ ದೇವಯೋನಯಃ ।
ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ॥ ೧೦ ॥

ಸುಪ್ರತೀಕಾಂಜನೌ ನೀಲ ಏತೇಽಷ್ಟೌ ದೇವಯೋನಯಃ ।
ಯಥೋಕ್ತಾನಾಂ ಸುಕರ್ತವ್ಯಂ ಪೂಜನಂ ವೈ ಪೃಥಕ್ಪೃಥಕ್ ॥ ೧೧ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಓಂಕಾರಪೂರ್ವೇಣಾಜ್ಯೇನ ತಥಾಗ್ನಿಹವನಂ ಭವೇತ್ ॥ ೧೨ ॥

ಪೃಥಕ್ಪೃಥಕ್ ಚ ಸರ್ವೇಷಾಂ ಚತುರ್ಥ್ಯಂತೈಶ್ಚ ನಾಮಭಿಃ ।
ದಕ್ಷಿಣಾಭಿಸ್ತತೋ ರಾಮ ಬ್ರಾಹ್ಮಣಾನ್ಸ್ವಸ್ತಿ ವಾಚಯೇತ್ ॥ ೧೩ ॥

ತತಃ ಶಾಂತ್ಯುದಕಂ ಕೃತ್ವಾ ಮಂತ್ರ್ಯ ರಕ್ಷೋಹಣೈರ್ದ್ವಿಪಾನ್ ।
ಅಭ್ಯುಕ್ಷಯೇತ್ಕುಶಾಗ್ರೇಣ ಪೂಜ್ಯಾಸ್ತೇ ಚ ತಥಾ ತದಾ ॥ ೧೪ ॥

---

ವರುಣ, ವಾಯು, ಅಗ್ನಿ, ಭೂಮಿ, ಗರುಡ, ಆದಿಶೇಷನೆನಿಸಿದ ನಾಗರಾಜ ಈ ಭೂಮಿಯನ್ನು ಹೊತ್ತು ನಿಂತಿರುವ ಅಷ್ಟದಿಗ್ಗಜಗಳು. ಅವಾವುವೆಂದರೆ:— ಕುಮುದ, ಐರಾವಣ, ಪದ್ಮ, ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ನೀಲ ಈ ಅಷ್ಟಗಜಗಳನ್ನೂ :—ವಿರೂಪಾಕ್ಷ, ಮಹಾಪದ್ಮ, ಭದ್ರ, ಸುಮನಸರೆಂಬ ದೇವಯೋನಿ ವಿಶೇಷರುಗಳನ್ನೂ ; ಈ ರೀತಿ ಯಥೋಕ್ತ ದೇವತೆಗಳನ್ನೂ ಪ್ರತ್ಯೇಕವಾಗಿ ಗಂಧ ಮಾಲ್ಯ ನಮಸ್ಕಾರ ಧೂಪ ದೀಪಾನ್ನ ಸಂಪದ್ವಿಶೇಷೋಪಚಾರಾದಿಗಳಿಂದ ಪೂಜೆಮಾಡಿ ಓಂಕಾರ ಪೂರ್ವಕ ನಾಮಗಳಿಂದ ಅಗ್ನಿಹೋಮವನ್ನು ಮಾಡಬೇಕು.

೧೩. ಎಲ್ಲ ದೇವತೆಗಳಿಗೂ ಆಜ್ಯಾಹುತಿಯನ್ನು ಚತುರ್ಥ್ಯಂತವಾದ ನಾಮಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿಯೇ ಕೊಡಬೇಕು. ಆ ಬಳಿಕ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ ಅವರಿಗೆಲ್ಲರಿಗೂ ದಕ್ಷಿಣೆಗಳನ್ನು ಕೊಡಬೇಕು.

೧೪. ಆ ಬಳಿಕ ಶಾಂತಿಮಂತ್ರಗಳಿಂದ ಜಲವನ್ನು ಅಭಿಮಂತ್ರಿಸಿ ಆ ಜಲದಿಂದ ಕುಂಜರಗಳ ಮೇಲೆಲ್ಲಾ ರಕ್ಷೋಘ್ನಸೂಕ್ತಮಂತ್ರಗಳನ್ನು ಹೇಳಿಕೊಂಡು ದರ್ಭಾಗ್ರದಿಂದ ಪ್ರೋಕ್ಷಣೆಮಾಡಬೇಕು. ಆಮೇಲೆ ಎಲ್ಲಾ ಆನೆಗಳನ್ನೂ ಪೂಜೆಮಾಡಬೇಕು.

**ಅತಃ ಪರಂ ಪ್ರವಕ್ಷ್ಯಾಮಿ ಕರ್ಮ ನೈಮಿತ್ತಿಕಂ ತವ ।**
**ಗಜಾನಾಂ ಮರಣೇ ಪ್ರಾಪ್ತೇ ತಥಾ ವ್ಯಾಧೌ ಚ ದಾರುಣೇ ॥ ೧೫ ॥**

**ದಂತಚ್ಛೇದಾಶುಭೋತ್ಪತ್ತೌ ಮೃತೇ ರಾಜದ್ವಿಪೇ ತಥಾ ।**
**ದಂತಭಂಗೇ ತಥಾ ಜಾತೇ ವಾ ಸುಪಕ್ಷಮೃತೇ ಗಜೇ ॥ ೧೬ ॥**

**ಕೃಷ್ಣಪಕ್ಷೇ ಮೃತೇ ನಾಗೇ ವಹ್ನಿಪೃಷ್ಠೇ ಮೃತೇ ತಥಾ ।**
**ದಾರುಣಾಸು ಚ ವೇಲಾಸು ದಕ್ಷಿಣಾಪರಮೂರ್ಧನಿ ॥ ೧೭ ॥**

**ಹಸ್ತಿನ್ಯಥ ಮದೇ ಜಾತೇ ಪ್ರಕೃತೇಶ್ಚ ವಿಪರ್ಯಯೇ ।**
**ಪೂರ್ವೋತ್ತರೇ ಚ ದಿಗ್ಭಾಗೇ ನಗರಾತ್ಸುಮನೋಹರೇ ॥ ೧೮ ॥**

---

೧೫. ಇದುವರೆಗೆ ಹೇಳಿದ ಕ್ರಮಕ್ಕೆ ನಿತ್ಯಶಾಂತಿಯೆಂದು ಹೆಸರು. ಇನ್ನು ಮುಂದೆ ನೈಮಿತ್ತಿಕ ಶಾಂತಿಕ್ರಮವನ್ನು ತಿಳಿಸುತ್ತೇನೆ. ಈ ಶಾಂತಿಕ್ರಮವನ್ನು ಆನೆಗಳಿಗೆ ಭಯಂಕರವಾದ ವ್ಯಾಧಿ ಸಂಭವಿಸಿ ಮರಣಹೊಂದುವ ಸಮಯ ವುಂಟಾದಾಗಲೂ, ಮರಣಪ್ರಾಪ್ತಿಯಾದಾಗಲೂ ಮಾಡಬೇಕು.

೧೬. ಆನೆಗಳ ಕೊಂಬು ಮುರಿದು ಅಶುಭಪ್ರಸಂಗವೊದಗಿದಾಗಲೂ, ಪಟ್ಟದ ಆನೆ ಸತ್ತುಹೋದ ಸಮಯದಲ್ಲೂ, ಸಾಮಾನ್ಯವಾದ ಆನೆಗಳ ಕೊಂಬು ಮತ್ತು ಹಲ್ಲುಗಳು ಮುರಿದುಹೋದಾಗಲೂ, ಸಾಮಾನ್ಯವಾಗಿ ಸಾಧಾರಣ ಆನೆಗಳು ಸತ್ತು ಹೋದ ಸಮಯದಲ್ಲೂ,

೧೭. ಆನೆಯು ಕೃಷ್ಣಪಕ್ಷದಲ್ಲಿ ಮರಣಹೊಂದಿದಾಗಲೂ, ಬೆಂಕಿಯ ಹತ್ತಿರ ಬಿದ್ದು ಆನೆಯು ಸತ್ತುಹೋದಾಗಲೂ. ನೀರಿಗೆ ಮುಳುಗಿ ಸತ್ತುಹೋದ ಸಮಯ ದಲ್ಲಿಯೂ, ಉತ್ತರ ದಿಕ್ಕಿಗೆ ತಲೆ ಹಾಕಿಕೊಂಡು ಮಲಗಿದ ಸಮಯದಲ್ಲಿಯೂ ಈ ನೈಮಿತ್ತಿಕಶಾಂತಿಯನ್ನು ಮಾಡಬೇಕು.

೧೮. ಆನೆಗೆ ಹೆಚ್ಚು ಮದಹತ್ತಿದಾಗಲೂ, ಪ್ರಕೃತಿ (ಸ್ವಭಾವ) ವಿಪರ್ಯಯ (ಬದಲಾವಣೆ) ವುಂಟಾದಾಗಲೂ ಈ ಶಾಂತಿಯವನ್ನು ಊರಹೊರಗೆ ಪೂರ್ವ ಅಥವಾ ಉತ್ತರ ದಿಕ್ಕಿನಲ್ಲಿ ಮನೋಹರವಾದ ಪ್ರದೇಶದಲ್ಲಿ ಮಾಡಬೇಕು.

ಸ್ನಿಗ್ಧಪ್ರಾಶನತೋಯೇಷು ದ್ರುಮವೀತವನಸ್ಪತೌ ।
ಪ್ರಾಗುದಕ್ಪ್ರವಣಂ ರಾಮ ಸ್ಥಂಡಿಲಂ ಪರಿಕಲ್ಪಯೇತ್ ॥ ೧೯ ॥

ಕಮಲಂ ವಿನ್ಯಸೇತ್ತತ್ರ ಕರ್ಣಿಕಾಕಮಲೇ ಹರಿಂ ।
ಶ್ರಿಯಂ ಚ ವಿನ್ಯಸೇತ್ತತ್ರ ಕೇಸರೇಷು ಚ ವಿನ್ಯಸೇತ್ ॥ ೨೦ ॥

ಬ್ರಹ್ಮಾಣಂ ಭಾರ್ಗವಂ ಪೃಥ್ವೀಂ ತಥಾ ಸ್ಕಂದಂ ಚ ಭಾರ್ಗವ ।
ಅನಂತಂ ಖಂ ಶಿವಂ ಸೋಮಂ ಸರ್ವಾಣ್ಯೇತಾನಿ ಭಾರ್ಗವ ॥ ೨೧ ॥

ದಲೇಷು ತತ್ರ ದಿಕ್ಪಾಲಾನ್ವಿನ್ಯಸೇತ್ಸಹ ಕುಂಜರೈಃ ।
ಪತ್ರಾಂತರೇಷು ಚಾಸ್ತ್ರಾಣಿ ಯಥಾವದನುಪೂರ್ವಶಃ ॥ ೨೨ ॥

ವಜ್ರಂ ತು ವಿನ್ಯಸೇದ್ಧೀಮಾನ್ನಕ್ರಪತ್ರಾದನಂತರಂ ।
ತತಶ್ಚಕ್ರಂ ತತೋ ದಂಡಂ ತೋರಣಂ ತದನಂತರಂ ॥ ೨೩ ॥

---

೧೯. ಕುಡಿಯುವುದಕ್ಕೆ ಬಹು ರುಚಿಯಾಗಿರುವ ಸಿಹಿ ನೀರಿನ ಕೊಳದ ದಡದಲ್ಲಿರುವ ಮರದ ತೋಪುಗಳಲ್ಲಿ ಈ ಶಾಂತಿ ನಡೆದರೆ ಬಹಳ ಅನುಕೂಲ. ಮತ್ತು ಶ್ರೇಷ್ಠ. ಈ ರೀತಿ ವಿವರಿಸಿದ ಪವಿತ್ರ ಸ್ಥಳವನ್ನು ಆರಿಸಿಕೊಂಡು ಪೂರ್ವೋತ್ತರ ಪ್ರವಣ (ತುದಿ) ವಾಗಿ ಸ್ಥಂಡಿಲ (ಪೂಜಾಸ್ಥಾನ) ವನ್ನು ರಚಿಸಬೇಕು. ಆ ಸ್ಥಳದಲ್ಲಿ ಒಂದು ಕಮಲವನ್ನು ಬರೆಯಬೇಕು.

೨೦. ಆ ಕಮಲದ ಕರ್ಣಿಕಾ ಮಧ್ಯದಲ್ಲಿ ಮಹಾವಿಷ್ಣುವನ್ನೂ, ಕೇಸರಗಳಲ್ಲಿ ಮಹಾಲಕ್ಷ್ಮಿಯನ್ನೂ ಆವಾಹನೆಮಾಡಿ ಇರಿಸಬೇಕು.

೨೧-೨೨. ಆ ಬಳಿಕ ಬ್ರಹ್ಮ, ಭಾರ್ಗವ, ಪೃಥ್ವಿ, ಸ್ಕಂದ, ಅನಂತ. ಆಕಾಶ, ಈಶ್ವರ, ಚಂದ್ರ ಮುಂತಾದ ದೇವತೆಗಳನ್ನಾವಾಹಿಸಬೇಕು. ಅನಂತರ ಕಮಲದಳಗಳಲ್ಲಿ ದಿಕ್ಪಾಲಕರು ತಮ್ಮ ತಮ್ಮ ಆನೆಗಳಮೇಲೆ ಕುಳಿತಿರುವಂತೆ ಬರೆದು ಆನೆಹವಾ ಮಾಡಬೇಕು. ಪತ್ರಾಂತರ (ತಾವರೇ ಎಲೆ) ಗಳಲ್ಲಿ ಇದರಡಿ ವಿವರಿಸಿರುವಂತೆ ಯಥಾವತ್ತಾಗಿಯೂ, ಅನುಕ್ರಮವಾಗಿಯೂ ಅಸ್ತ್ರಗಳನ್ನು ಆವಾಹಿಸಬೇಕು.

೨೩-೨೪. ಇಂದ್ರನ ಬಳಿ ಇರುವ ಪತ್ರದಲ್ಲಿ ವಜ್ರಾಸ್ತ್ರವನ್ನೂ, ಅನಂತರ ಅದರ ಪಕ್ಕದ ಪತ್ರದಲ್ಲಿ ಚಕ್ರವನ್ನೂ, ಅದರ ಪಕ್ಕದಲ್ಲಿ ದಂಡಾಸ್ತ್ರವನ್ನೂ, ಆ ಬಳಿಕ

ತತಶ್ಚ ವಿನ್ಯಸೇತ್ಪಾಶಂ ತೋಮರಂ ಸಶರಂ ಧನುಃ ।
ತತೋ ಗದಾಂ ಮಹಾಭಾಗ ತತಃ ಶೂಲಂ ಚ ವಿನ್ಯಸೇತ್ ॥ ೨೪ ॥

ಪದ್ಮಂಚ ಸಾನ್ತರದಲಂ ವೃತ್ತಯಾ ಲೇಖಯಾ ಭಜೇತ್ ।
ಆದಿತ್ಯೈಃ ಸಹ ನಾಸತ್ಯೌ ತತಃ ಪೂರ್ವೇಣ ವಿನ್ಯಸೇತ್ ॥ ೨೫ ॥

ವಸೂನಗ್ನಿದಿಶಾಭಾಗೇ ಸಾಧ್ಯಾನ್ಯಾಮ್ಯೇ ಚ ವಿನ್ಯಸೇತ್ ।
ತಥಾ ಚ ನೈಋತೇ ಭಾಗೇ ದೇವಾನಂಗಿರಸೋ ನ್ಯಸೇತ್ ॥ ೨೬ ॥

ಪಶ್ಚಿಮೇ ಭೃಗವೋ ಭಾಗೇ ವಾಯವ್ಯೇ ಮರುತಸ್ತಥಾ ।
ವಿಶ್ವೇದೇವಾಸ್ತಥೋದಕ್ ಚ ರುದ್ರಾನ್ಶಿವದಿಶಿನ್ಯಸೇತ್ ॥ ೨೭ ॥

ಕೃತ್ವೈತದ್ದೇವತಾನ್ಯಾಸಂ ವೃತ್ತಯಾ ರೇಖಯಾ ಭಜೇತ್ ।
ಬಾಹ್ಯೇನ ವಿನ್ಯಸೇತ್ತಸ್ಯಾಃ ಸೂತ್ರಕಾರಾನೃಷೀನ್ದ್ವಿಜ ॥ ೨೮ ॥

---

ತೋಮರ - ಪಾಶ - ಮುದ್ಗರ - ಬಾಣದೊಡಗೂಡಿದ ಬಿಲ್ಲು-ಗದೆ-ಶೂಲ ಮುಂತಾದ ಆಯುಧಗಳನ್ನಿಡಬೇಕು.

೨೫. ತಾವರೇ ಹೂವಿನ ಹೊರಭಾಗದ ದಳವಾದ ಬಳಿಕ ಒಳಭಾಗದಲ್ಲಿ ಸುತ್ತಲೂ ಇರುವ ದಳಗಳಲ್ಲಿ ದ್ವಾದಶಾದಿತ್ಯರನ್ನೂ ಅಶ್ವಿನೀದೇವತೆಗಳನ್ನೂ ಆವಾಹಿಸ ಬೇಕು.

೨೬-೨೭. ಈ ಪೂರ್ವದಿಗ್ದಳಗಳಲ್ಲಿ ಮೇಲೆ ಬರೆದ ಆದಿತ್ಯಾಶ್ವಿನೀದೇವತೆ ಗಳನ್ನು ಆವಾಹಿಸಿದ ಬಳಿಕ ಆಗ್ನೇಯದಳದಲ್ಲಿ ವಸುಗಳನ್ನೂ ದಕ್ಷಿಣದಿಕ್ಕಿನಲ್ಲಿ ಸಾಧ್ಯರುಗಳನ್ನೂ, ನೈಋತ್ಯದ್ಭಿಗಾಗದಲ್ಲಿ ಅಂಗಿರೋಗಣದ ದೇವತೆಗಳನ್ನೂ ಆವಾ ಹಿಸಿದ ಅನಂತರ ಪಶ್ಚಿಮದಲ್ಲಿ ಭೃಗುಗಳನ್ನೂ, ವಾಯವ್ಯದಲ್ಲಿ ಮರುದ್ದೇವತೆ ಗಳನ್ನೂ, ಉತ್ತರದಲ್ಲಿ ವಿಶ್ವೇದೇವತೆಗಳನ್ನೂ, ಈಶಾನ್ಯದಿಕ್ಕಿನಲ್ಲಿ ಏಕಾದಶರುದ್ರರನ್ನೂ ಆವಾಹಿಸಬೇಕು.

೨೮. ವೃತ್ತಾಕಾರವಾದೊಂದು ರೇಖೆಯ ಮೇಲೆ ಒಳದಳಗಳಲ್ಲಿ ಈ ಕ್ರಮದಿಂದ ದೇವತಾನ್ಯಾಸವನ್ನು ಮಾಡಿದ ಬಳಿಕ ರೇಖೆಯ ಹೊರಭಾಗದಲ್ಲಿ ಸೂತ್ರಕಾರರಾದ ಮಹರ್ಷಿಗಳನ್ನು ಪೂರ್ವದಿಕ್ಕಿನಲ್ಲಿ ನ್ಯಾಸಮಾಡಬೇಕು.

ಪೂರ್ವೇಣ ರಾಮ ಯಾಮ್ಯೇನ ತಥಾ ದೇವೀಂ ಸರಸ್ವತೀಂ ।
ನದೀಃ ಪಶ್ಚಿಮತಃ ಶೈಲಾಂಸ್ತಥೋದಗ್ಭೃಗುನಂದನ ॥ ೨೯ ॥

ಮಹಾಭೂತಾನಿ ವೇದೀಷು ಕೋಣಹಸ್ತಗತಾನಿ ತು ।
ಪದ್ಮಂ ಚಕ್ರಂ ಗದಾಂ ಶಂಖಮೀಶಾನ್ಯಾದಿಷು ವಿನ್ಯಸೇತ್ ॥ ೩೦ ॥

ಚತುರಸ್ರಂ ತಥಾ ಕಾರ್ಯಂ ಚತುರ್ದ್ವಾರಂ ಚ ಮಂಡಲಂ ।
ಪ್ರಮಾಣಂ ಮಂಡಲಸ್ಯಾತ್ರ ಭವೇದ್ಭೂಮಿವಶಾತ್ತಥಾ ।
ವಿದಿಕ್ಷು ಪೂರ್ಣಕಲಶಾನ್ಪೂರ್ಣಪತ್ರಯುತಾನ್ನ್ಯಸೇತ್ ॥ ೩೧ ॥

ಸಪ್ತಹಸ್ತೇಷು ದಂಡೇಷು ಪತಾಕಾಶ್ಚ ತಥಾ ನ್ಯಸೇತ್ ।
ಸಿತಾ ರಕ್ತಾಃ ಸಿತಾಃ ಪೀತಾ ಯಥಾವದನುಪೂರ್ವಶಃ ।
ದಿಕ್ಷು ತೋರಣವಿನ್ಯಾಸಂ ತೋರಣಾನಾಂ ಚ ವೇಷ್ಟನಂ ॥ ೩೨ ॥

---

೨೯. ದಕ್ಷಿಣದಿಕ್ಕಿನಲ್ಲಿ ಸರಸ್ವತೀದೇವಿಯನ್ನೂ, ಪಶ್ಚಿಮಭಾಗದಲ್ಲಿ ಸಕಲ ಮಹಾನದಿಗಳನ್ನೂ, ಉತ್ತರದಿಕ್ಕಿನಲ್ಲಿ ಸಪ್ತಕುಲಾಚಲಗಳನ್ನೂ ನ್ಯಾಸಮಾಡಬೇಕು.

೩೦. ವೇದಿಕೆಗಳಲ್ಲಿ ಮಹಾಭೂತ (ಪಂಚಭೂತ)ಗಳನ್ನು ಆವಾಹಿಸಬೇಕು. ಈಶಾನ್ಯಾದಿಕೋಣಗಳಲ್ಲಿ ಪದ್ಮ-ಚಕ್ರ-ಗದಾ-ಶಂಖಗಳನ್ನು ಸಹ ನ್ಯಾಸಮಾಡಬೇಕು. (ಬರೆಯಬೇಕು—ಆವಾಹಿಸಬೇಕು.)

೩೧. ಆ ಶಾಂತಿಭೂಮಿಯ ವೈಶಾಲ್ಯವೆಷ್ಟಿದೆಯೋ ಅದಕ್ಕನುಸಾರವಾಗಿ ಚತುರಸ್ರಾಕಾರವಾಗಿ ಮಂಡಲವನ್ನು ಮಾಡಿ ಆ ಚುತುರಸ್ರಮಂಡಲದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬಾಗಿಲುಗಳನ್ನು ಮಾಡಬೇಕು.

೩೨. ವಿದಿಕ್ಕುಗಳಲ್ಲಿ ಪೂರ್ಣಪಾತ್ರಗಳಿಂದ ಕೂಡಿದ ಪೂರ್ಣಕಲಶಗಳನ್ನಿಡಬೇಕು. ಐದು ಅಡಿ ಉದ್ದವಾದ ದಂಡವನ್ನು ಅಲ್ಲಿ ನೆಟ್ಟು, ಅದಕ್ಕೆ ಧ್ವಜಪಟವನ್ನು ಕಟ್ಟಬೇಕು. ಹೀಗೆ ನಾಲ್ಕು ದಿಕ್ಕುಗಳಲ್ಲೂ ಮಾಡಬೇಕು. ನಾಲ್ಕು ದಿಕ್ಕುಗಳಲ್ಲೂ ನೆಡುವ ಬಾವುಟದ ಬಟ್ಟೆಗಳ ಬಣ್ಣವು ನಾಲ್ಕು ತೆರನಾಗಿರಬೇಕು. ಒಂದು ಬಿಳೀ ಬಾವುಟ, ಒಂದು ಕೆಂಪು ಬಾವುಟ, ಮತ್ತೊಂದು ಕರಿಯದು , ಇನ್ನೊಂದು ಹಳದೀ ಬಾವುಟ ; ಹೀಗೆ ನಾಲ್ಕು ಬಾವುಟಗಳನ್ನು ನೆಟ್ಟು, ಆ ನಾಲ್ಕು ಬಾವುಟಗಳ ಸುತ್ತಲೂ ತೋರಣವನ್ನು ಕಟ್ಟಬೇಕು.

**ಕ್ಷೀರವೃಕ್ಷದ್ರುಮದಲೈಃ ಕುಸುಮೈಃ ಸಫಲೈರ್ಭವೇತ್ ।**
**ತೋರಣಸ್ಯ ಪ್ರಮಾಣಂ ಚ ಷಡ್ಢಸ್ತಂ ಪರಿಕೀರ್ತಿತಂ ॥ ೩೩ ॥**

**ಉಚ್ಛ್ರಾಯೇಣ ತಥಾ ಯಾಮ್ಯಾ ಜ್ಞೇಯಂ ರಾಮ ಸಮುದ್ವಯಂ ।**
**ತಾರ್ಕ್ಷ್ಯಂ ತಾಲಂ ಚ ಮಕರಂ ಋಷ್ಯಂ ಚೈವಾನುಪೂರ್ವಶಃ ॥ ೩೪ ॥**

**ತೋರಣೋಪರಿ ಮಧ್ಯೇ ತು ದಾನವಾನ್ವಿನಿವೇಶಯೇತ್ ।**
**ಕರ್ಣಿಕೈರ್ಲಕ್ಷಣೋಪೇತಾನ್ವಿನ್ಯಸೇದ್ದೇವತಾಗಣಾನ್ ॥ ೩೫ ॥**

**ಸಾಯುಧಾನ್ಸಪತಾಕಾಂಶ್ಚ ಸಾತಪತ್ರಂ ಶತಕ್ರತುಂ ।**
**ದಿಗ್ಗಜಾನಾಂ ಚ ವಿನ್ಯಾಸಮೋಷಧೀಭಿಃ ಪ್ರಕಲ್ಪಯೇತ್ ॥ ೩೬ ॥**

**ಐರಾವಣಂ ದಲೇ ಶಕ್ರೇ ಲಾಜಾಭಿರ್ವಿನ್ಯಸೇದ್ಬುಧಃ ।**
**ನಾಗಂ ಪುಷ್ಪಮಯಂ ಪದ್ಮಮಾಗ್ನೇಯೇ ವಿನ್ಯಸೇದ್ದಲೇ ॥ ೩೭ ॥**

---

೩೩. ಕುಟ್ಟಿದರೆ ಹಾಲು ಬರುವ ಮರಗಳ ಚಿಗುರೆಲೆಗಳಿಂದ ತೋರಣವನ್ನು ಮಾಡಬೇಕು. ತೋರಣದ ಮೂಲೆ ಮೂಲೆಗಳಲ್ಲಿ ಬಾಳೇಗೊನೆ, ತೆಂಗಿನಗೊನೆ, ಅಡಕೆಗೊನೆ ಮುಂತಾದ ಫಲವಸ್ತುಗಳನ್ನು ಕಟ್ಟಬೇಕು. ತೋರಣವು ಆರು ಅಡಿಗಿಂತ ಕಡಿಮೆಯಾಗಿರಕೂಡದು.

೩೪. ಎತ್ತರವೂ ಸಮವೂ ನಾಲ್ಕು ದಿಕ್ಕುಗಳಲ್ಲೂ ಒಂದೇ ಅಳತೆಯಲ್ಲಿರಬೇಕು. ತೋರಣಗಳ ನಾಲ್ಕು ಕಡೆಯ ಧ್ವಜಪಟಗಳಲ್ಲಿಯೂ ಗರುಡ-ಅರುಣ-ಮಕರ-ಜಿಂಕೆಯ ಚಿತ್ರವನ್ನು ಆನುಪೂರ್ವಿಯಾಗಿ ಬರೆಸಬೇಕು.

೩೫. ತೋರಣದ ಮೇಲೂ ಮಧ್ಯಭಾಗದಲ್ಲೂ ದಾನವರನ್ನು ಬರೆಸಬೇಕು. ಕರ್ಣಿಕೆಗಳ ಮೇಲೆ ದೇವತಾಗಣಗಳನ್ನು ಬರೆಸಬೇಕು.

೩೬. ದೇವತೆಗಳ ಆಯುಧಗಳು, ಅವರುಗಳ ಬಾವುಟಗಳು ಇವುಗಳನ್ನೆಲ್ಲಾ ಬರೆಯಿಸಿ ಇಂದ್ರನು ಶ್ವೇತಚ್ಛತ್ರಿಯ ನೆರಳಿನಲ್ಲಿರುವಂತೆ ವಿನ್ಯಾಸಮಾಡಿಸಬೇಕು. ಓಷಧಿರಸಗಳಿಂದ ದಿಗ್ಗಜಗಳನ್ನು ವಿನ್ಯಾಸಮಾಡಿಸಬೇಕು.

೩೭. ಇಂದ್ರದಿಗ್ದಳದಲ್ಲಿ ಐರಾವತವನ್ನು ಲಾಜಾಕ್ಷತೆಗಳಿಂದ ರಚಿಸಬೇಕು. ಪುಂಡರೀಕನನ್ನು ಆಗ್ನೇಯದಳದಲ್ಲಿ ಹೂವುಗಳಿಂದ ಮಾಡಿಸಬೇಕು.

ಪುಷ್ಪದಂತಸ್ತಥಾ ಯಾಮ್ಯೇ ನಾಗಃ ಕಾರ್ಯಃ ಪ್ರಿಯಂಗುಭಿಃ ।
ತಥಾ ಚ ನೈಋತೇ ಭಾಗೇ ನಾಗಃ ಪುಷ್ಪೇಣ ವಾಮನಃ ॥ ೩೮ ॥

ವಾಯವ್ಯೇ ಚಾಂಜನಂ ಪತ್ರೇ ಮಾಷೈಃ ಕುರ್ಯಾದ್ವಿಚಕ್ಷಣಃ ।
ನೀಲಶ್ಚ ಪತ್ರೇ ಕೌಬೇರೇ ಶತಪುಷ್ಪಮಯೋ ಭವೇತ್ ॥ ೩೯ ॥

ಐಶಾನ್ಯೇ ಕುಮುದಂ ಕುರ್ಯಾನ್ನಾಗೇಂದ್ರಂ ಸಿತತಂಡುಲೈಃ ॥
ತತಸ್ತು ಪೂಜನಂ ಕಾರ್ಯಂ ಸೋಪವಾಸೇನ ಭಾರ್ಗವ ॥ ೪೦ ॥

ಜಿತೇಂದ್ರಿಯೇಣ ದಾಂತೇನ ಶಿರಃಸ್ನಾತೇನ ಚಾಪ್ಯಥ ।
ಶುಕ್ಲವಸ್ತ್ರಾವೃತೇನಾಪಿ ಸೋಷ್ಣೀಷೇಣ ತಥೈವ ಚ ॥ ೪೧ ॥

---

೩೮. ದಕ್ಷಿಣದಳದಲ್ಲಿ ಪುಷ್ಪದಂತನನ್ನು ನವಣೆಗಳಿಂದ ಮಾಡಿಸ (ಬರೆಯಿಸ) ಬೇಕು. (ಪ್ರಿಯಂಗುವೆಂದರೆ ಇಲ್ಲಿ ನವಣೆಯೆಂದು ಅರ್ಥ. ಅಭಿಧಾನಕೋಶದಲ್ಲಿ ಪ್ರಿಯಂಗುಃ ಫಲಿನೀ ಶ್ಯಾಮಾ ಎಂದೂ, ಅಮರದಲ್ಲಿ ಪ್ರಿಯಂಗುಃ ಫಲಿನೀಫಲೀ ಎಂದೂ ಹೇಳಿದೆ. ಔಷಧ ಪರ್ಯಾಯದಲ್ಲಿ ಪ್ರೇಂಖಣದ ಗಿಡವೆಂದು ಎಷ್ಟೋ ಆವರ್ತಿ ಹಿಂದೆಯೇ ಬರೆದಿದೇನೆ.) ನೈಋತ್ಯದಳದಲ್ಲಿ ವಾಮನನನ್ನು ಪುಷ್ಪಗಳಿಂದ ರಚನೆ ಮಾಡಿಸಬೇಕು.

೩೯. ವಾಯುವ್ಯದಳದಲ್ಲಿ ಅಂಜನಗಜವನ್ನು ಉದ್ದಿನಕಾಳುಗಳಿಂದ ಬರೆಸ ಬೇಕು. ಉತ್ತರ ದಳದಲ್ಲಿ ನೀಲನನ್ನು ಶತಪುಷ್ಪಗಳಿಂದ ಬರೆಸಬೇಕು.

೪೦. ಈಶಾನ್ಯದಿಗ್ದಳದಲ್ಲಿ ಕುಮುದನನ್ನೂ ಗೋವಿಂದನನ್ನೂ ಸಹ ಬಿಳೀ ಅಕ್ಕಿಗಳಿಂದ ಬರೆಯಿಸಿ, ಈ ರೀತಿ ಬರೆದು ಮುಗಿದ ಬಳಿಕ ಉಪವಾಸವಾಗಿ ಮಂಡಲ ದಲ್ಲಿರುವ ಸಕಲ ದೇವತೆಗಳನ್ನೂ ಪೂಜಿಸಬೇಕು.

೪೧-೪೨. ಪೂಜೆಮಾಡುವ ಯಜಮಾನನು ಪೂಜೆಮಾಡುವ ಸಮಯದಲ್ಲಿ ಇರಬೇಕಾದ ಲಕ್ಷಣವೇನೆಂದರೆ ;—ಸ್ನಾನಮಾಡಿ ಪರಿಶುದ್ಧನಾಗಿರಬೇಕು. ಬೆಳ್ಳಗಿರುವ ಮಡೀಬಟ್ಟೆಗಳನ್ನು ಧರಿಸಿರಬೇಕು. ಶಾಂತನಾಗಿಯೂ ದಾಂತನಾಗಿಯೂ ಜಿತೇಂದ್ರಿಯ ನಾಗಿಯೂ ಇರಬೇಕು. ತಲೆಗೆ ರುಮಾಲನ್ನು ಸುತ್ತಿಕೊಂಡಿರಬೇಕು. ಚಿನ್ನದಿಂದ ಮಾಡಿಸಿದ ಪವಿತ್ರದುಂಗುರವನ್ನಾಗಲೀ, ಅದಿಲ್ಲದಿದ್ದರೆ ದರ್ಭೆಯ ಪವಿತ್ರವನ್ನಾಗಲೀ

ಕಾಂಚನಾಲಂಕೃತೇನಾಪಿ ಸಪವಿತ್ರೇಣ ಭಾರ್ಗವ ।
ಸರ್ವಾಸಾಂ ಪೂಜನಂ ಕುರ್ಯಾದ್ದೇವತಾನಾಂ ಪೃಥಕ್ಪೃಥಕ್ ॥ ೪೨ ॥

ಅಸ್ತ್ರಾಣಾಂ ಕುಂಜರಾಣಾಂ ಚ ಪದ್ಮಾದೀನಾಂ ತಥೈವ ಚ ।
ತೋರಣೇ ತು ನಿವಿಷ್ಟಾನಾಂ ತಾರ್ಕ್ಷ್ಯಾದೀನಾಂ ಪೃಥಕ್ಪೃಥಕ್ ॥ ೪೩ ॥

ಸಾಗರಾಣಾಂ ತು ಕುಂಭೇಷು ಗಂಧಮಾಲ್ಯಾನುಲೇಪನೈಃ ।
ಧೂಪೈರ್ದೀಪೈರ್ನಮಸ್ಕಾರೈರ್ವಾಸೋಭಿಶ್ಚ ಪೃಥಕ್ಪೃಥಕ್ ॥ ೪೪ ॥

ತಥಾ ಪ್ರತಿಸರಾಭಿಶ್ಚ ಭೂಷಣೈಶ್ಚ ಪೃಥಕ್ಪೃಥಕ್ ।
ಭೂರಿಣಾ ಚ ತಥಾಽನ್ನೇನ ಪಾನೈಶ್ಚ ವಿವಿಧೈಸ್ತಥಾ ॥ ೪೫ ॥

ಕುಲ್ಮಾಷಪರಮನ್ನಾಭ್ಯಾಂ ಪೂಜ್ಯಾಸ್ತೇ ಕೃಸರೇಣ ಚ ।
ಮೋದಕೋಲ್ಲೋಪಿಕಾಭಕ್ಷ್ಯೈಃ ಸಿತಯಾ ಗುಡಘಾಣಿತೈಃ ॥ ೪೬ ॥

---

ಬೆರಳಿಗೆ ಇಟ್ಟುಕೊಂಡಿರಬೇಕು. ಈ ರೀತಿ ಅಲಂಕೃತನಾಗಿ ಮೇಲೆ ಬರೆದಂತೆ ಎಲ್ಲಾ ದೇವತೆಗಳನ್ನೂ ಪೂಜೆಮಾಡಬೇಕು. ಬೇರೆ ಬೇರೆಯಾಗಿ ಪೂಜೆಮಾಡಬೇಕೇ ಹೊರತು ಒಟ್ಟುಗೂಡಿಸಿ ಮಾಡಕೂಡದು.

೪೩. ಮೇಲೆ ವಿವರಿಸಿದ ಮೇರೆ ಅಸ್ತ್ರಗಳಿಗೂ, ಆನೆಗಳಿಗೂ, ಪದ್ಮಾದಿಗಳಿಗೂ, ತೋರಣಧ್ವಜಗಳಲ್ಲಿ ಕುಳಿತಿರುವ ತಾರ್ಕ್ಷ್ಯಾದಿಗಳಿಗೂ ಸಹ ಬೇರೆ ಬೇರೆಯಾಗಿ ಪೂಜೆಮಾಡಬೇಕು.

೪೪. ಕಲಶಗಳಲ್ಲಿ ತುಂಬಿರುವ ಸಾಗರ ಜಲಗಳಿಗೂ ಸಹ ಗಂಧಮಾಲ್ಯಾನು ಲೇಪನಗಳಿಂದಲೂ, ಧೂಪ ದೀಪ ನೈವೇದ್ಯ ತಾಂಬೂಲ ನಮಸ್ಕಾರಗಳಿಂದಲೂ, ವಸ್ತ್ರಾದಿಗಳಿಂದಲೂ ಪೃಥಕ್ ಪೃಥಕ್ಕಾಗಿ ಪೂಜಿಸಬೇಕು.

೪೫-೪೭. ಈ ರೀತಿ ಆವಾಹಿತರಾದ ಸಕಲ ದೇವತೆಗಳನ್ನೂ, ಪ್ರತಿಸರ (ಕಂಕಣ) ಗಳಿಂದಲೂ, ವಿವಿಧಾಲಂಕಾರಗಳಿಂದಲೂ, ಮಹಾನೈವೇದ್ಯದಿಂದಲೂ, ವಿವಿಧ ಪಾನೀಯ ಪದಾರ್ಥಗಳಿಂದಲೂ; ಹಲಸಂದೆ ಅಂಬೊಡೆ, ಪಾಯಸ, ಎಳ್ಳು ಹುಡಿ ಚಿತ್ರಾನ್ನ, ಕಡುಬು, ಉಂಡಲಿಗೆಯೇ ಮುಂತಾದ ನಾನಾವಿಧ ಭಕ್ಷ್ಯಗಳಿಂದಲೂ, ಬೆಳ್ಳಗಿರುವ ಬೆಲ್ಲದಿಂದ ಮಾಡಿದ ತಂಬಿಟ್ಟಿನಿಂದಲೂ, ಉದ್ದಿನ ಹುಡಿ ಅನ್ನ, ಹಾಲು, ಮೊಸರು, ಜೇನುತುಪ್ಪ, ಪಾಯಸ, ಸಕ್ತು, ವಿವಿಧಾಪೂಪಗಳು, ವಿವಿಧ ಫಲಗಳು,

ಮಾಂಸೌದನಪಯಃಕ್ಷೌದ್ರದಧಿಪಾಯಸಸಕ್ತುಭಿಃ ।
ಅಪೂಪಫಲಮೂಲಾನ್ನರಾಗಖಂಡವಕೈರ್ದಲೈಃ ॥ ೪೭ ॥

ಏವಂ ಸಂಪೂಜನಂ ಕೃತ್ವಾ ಶಂಖವಾದ್ಯೈರನ್ಯೈರ್ದ್ವಿಜ ।
ಗೀತೇನ ಚ ಮಹಾಭಾಗ ಸುಭಗಾನರ್ತಿತೇನ ಚ ॥ ೪೭ ॥

ತತಸ್ತು ಪೂಜನಂ ಕೃತ್ವಾ ಪೂಜಾಸ್ಥಾನಾತ್ತಥಾಪ್ಯುದಕ್ ।
ಆಹಿತಾಗ್ನಿಕುಲಾದಗ್ನಿಂ ವೇದಿಮುಲ್ಲಿಖ್ಯ ಬೋಧಯೇತ್ ॥ ೪೯ ॥

ದೇವತಾನಾಂ ತು ಸರ್ವಾಸಾಮೇಕೈಕಂ ತು ಪೃಥಕ್ಪೃಥಕ್ ।
ಚತುರ್ಥ್ಯಂತೇನ ನಾಮ್ನಾ ತು ಪ್ರಣವಾದ್ಯೇನ ಭಾರ್ಗವ ॥ ೫೦ ॥

ಶತಮಾಜ್ಯೇನ ಜುಹುಯಾನ್ಮಹಾವ್ಯಾಹೃತಯಸ್ತಥಾ ।
ತತಸ್ತು ಪೂಜಿತಾ ನಾಗಾ ವಹ್ನಿಂ ದೇವಗಣಾನ್ದ್ವಿಜಾನ್ ॥ ೫೧ ॥

---

ವಿವಿಧ ಪಕ್ವಾನ್ನಗಳಿಂದಲೂ; ಕಲ್ಲುಸಕ್ಕರೆ, ದ್ರಾಕ್ಷಿ, ಖರ್ಜೂರಾದಿಗಳಿಂದಲೂ; ಸಕ್ಕರೆ ಪಾನಕ ಮತ್ತು ತಾಂಬೂಲ ಸಮರ್ಪಣೆಯಿಂದಲೂ ತೃಪ್ತಿಪಡಿಸಬೇಕು.

೪೮. ಈ ರೀತಿ ಪೂಜಾವಿಧಿಗಳು ಬೆಳೆದ ಬಳಿಕ ಶಂಖವಾದ್ಯಗಳಿಂದಲೂ, ನೃತ್ಯಗೀತಾದಿಗಳಿಂದಲೂ, ನೀರಾಜನಗಳಿಂದಲೂ ಯಥಾವಿಭವವಾಗಿ ಪೂಜೆಯನ್ನು ನೆರವೇರಿಸಿದ ಬಳಿಕ ಆಹಿತಾಗ್ನಿಗಳ ಮನೆಯಿಂದ ಅಗ್ನಿಯನ್ನು ತರಿಸಿ ಅದನ್ನು ವೇದಿಕೆಯಲ್ಲಿ ಪ್ರತಿಷ್ಠೆಮಾಡಬೇಕು.

೪೯. ಪೂಜೆಯನ್ನು ಮಾಡಿದ ಸ್ಥಳದ ಉತ್ತರ ಭಾಗದಲ್ಲಿ ಈ ಅಗ್ನಿವೇದಿಕೆಯನ್ನು ರಚಿಸಬೇಕು. ಅಗ್ನಿಪ್ರತಿಷ್ಠಾನಂತರ ಅಗ್ನಿಯನ್ನು ಜ್ವಲನಗೊಳಿಸಬೇಕು.

೫೦. ಆವಾಹಿತರಾದ ಸಕಲ ದೇವತೆಗಳಿಗೂ ಸಹ ಒಬ್ಬೊಬ್ಬರಿಗೂ ಬೇರೆ ಬೇರೆಯಾಗಿ ಪ್ರಣವಪೂರ್ವಕವಾಗಿಯೂ, ಚತುರ್ಥ್ಯಂತವಾಗಿಯೂ ನಾಮಗಳನ್ನು ಉಚ್ಚರಿಸಿ (ಹಿಂದೆ ವಿವರಿಸಿರುವ ಕ್ರಮಗಳಂತೆಯೇ) ಹೋಮ ಮಾಡಬೇಕು.

೫೧. ಒಂದೊಂದು ದೇವತೆಗೂ ನೂರುನೂರು ಆಜ್ಯಹೋಮಗಳನ್ನೂ ಮಹಾವ್ಯಾಹೃತಿಹೋಮಗಳನ್ನೂ ಮಾಡಿದ ಬಳಿಕ ಆನೆಗಳನ್ನು ಪೂಜೆಮಾಡಿ, ಯಜ್ಞೇಶ್ವರನಿಗೂ, ದೇವತೆಗಳಿಗೂ, ಬ್ರಾಹ್ಮಣರಿಗೂ ಸಹ ಪೂಜೆಗಳನ್ನು ಮಾಡಬೇಕು.

**ಕೃತ್ವಾ ಪ್ರದಕ್ಷಿಣಂ ಸರ್ವೇ ವ್ರಜೇಯುಃ ಸ್ವಗೃಹಾಣಿ ತೇ ।**
**ಉಪದ್ರಷ್ಟ್ರೇ ತಥಾ ಕರ್ತ್ರೇ ಸರ್ವಂ ತತ್ರ ನಿವೇದಯೇತ್ ॥ ೫೨ ॥**

**ಭವೇನ್ನಿಷ್ಕಂ ಚ ನಿಷ್ಕಂ ಚ ಧೇನುಂಧೇನುಂ ಭುವಂಭುವಂ ।**
**ಅಶ್ವಮಶ್ವಂ ತಥಾಽನ್ಯಾ ಚ ದಕ್ಷಿಣಾ ಶಕ್ತಿತೋ ಭವೇತ್ ॥ ೫೩ ॥**

**ನ ಭವೇತ್ಸಾ ಮಹಾದ್ರೋಣಾ ಕಥಂಚಿದಪಿ ಕಸ್ಯಚಿತ್ ।**
**ತಥಾ ಚ ಹಸ್ತಿಭಿಷಜಾ ಪ್ರವೃತ್ತೇನ ಚ ಭೂರಿಣಾ ॥ ೫೪ ॥**

---

ಟಿಪ್ಪಣಿ :—ವ್ಯಾಹೃತಿ ಹೋಮಗಳೆಂದರೆ ಭೂಲೋಕ, ಭುವರ್ಲೋಕ, ಸುವರ್ಲೋಕ, ಭೂರ್ಭುವಸ್ವರ್ಲೋಕಗಳ ಪ್ರೀತಿಗಾಗಿ ಮಾಡುವ ನಾಲ್ಕು ಆಜ್ಯ ಹೋಮಗಳು. ಇದಕ್ಕೆ ಅಗ್ನಿ, ವಾಯು, ಸೂರ್ಯರೂ, ಪ್ರಜಾಪತಿಯೂ ದೇವತೆಗಳು, ಓಂ ಭೂಃ ಸ್ವಾಹಾ, ಓಂ ಭುವಃ ಸ್ವಾಹಾ, ಓಂ ಸುವಃ ಸ್ವಾಹಾ, ಓಂ ಭೂರ್ಭುವಸ್ಸುವ ಸ್ಸ್ವಾಹಾ ಎಂದು ಉಚ್ಚಾರಣೆ ಮಾಡಿ ಯಜಮಾನನೂ, ಬ್ರಹ್ಮನೂ, (ಉಪದೃಷ್ಟ) ಸಹ ಬೇರೆ ಬೇರೆಯಾಗಿ ಹೋಮಮಾಡಿ ಯಜ್ಞೇಶ್ವರನನ್ನು ಪ್ರಾರ್ಥಿಸಬೇಕು. ಇದು ಸ್ಮಾರ್ತಪ್ರಯೋಗದಲ್ಲಿ ಹೇಳಲ್ಪಟ್ಟಿದೆ.

೫೨. ಅಗ್ನಿಪೂಜಾ ಪ್ರಾರ್ಥನೆಗಳು ಬೆಳೆದ ಬಳಿಕ ಅಲ್ಲಿ ಸೇರಿದವರೆಲ್ಲರೂ ಯಜ್ಞೇಶ್ವರನಿಗೂ, ಪೂಜಿತರಾದ ಸಕಲ ದೇವತೆಗಳಿಗೂ ಪ್ರದಕ್ಷಿಣೆಯನ್ನೂ, ನಮಸ್ಕಾರವನ್ನೂ ಮಾಡಿ ತಮ್ಮ ತಮ್ಮ ಮನೆಗಳಿಗೆ ಹೋಗಬೇಕು. ಈ ಪೂಜೆ ಯನ್ನು ಕ್ರಮವಾಗಿ ಮಾಡಿಸಿದ ಪುರೋಹಿತರಿಗೂ ಉಪದೃಷ್ಟ (ಬ್ರಹ್ಮ ಅಥವಾ ಮುಖ್ಯ ಋತ್ವಿಜ) ನಿಗೂ ಇದರ ಕೆಳಗೆ ಬರೆದ ಮೇರೆ ಎಲ್ಲವನ್ನೂ ಕೊಡಬೇಕು.

೫೩. ಒಂದೊಂದು ಚಿನ್ನದ ನಾಣ್ಯ, ಒಂದೊಂದು ಹಸು, ಒಂದೊಂದು ಭೂಮಿ (ಗದ್ದೆ ಅಥವಾ ಮನೆ), ಒಂದೊಂದು ಕುದುರೆ, ಇನ್ನೂ ಏನಾದರೂ ಯಥಾ ಶಕ್ತಿಯಾಗಿ ದಕ್ಷಿಣೆಯನ್ನು ಕೊಡಬಹುದು.

೫೪. ಭೂದಾನ ಮಾಡುವ ಸಮಯದಲ್ಲಿ ಭೂಮಿ ಯಾವುದೆಂಬುದನ್ನು ಎಚ್ಚರಿಕೆಯಿಂದ ನೋಡಿಕೊಡಬೇಕು. ಆ ಭೂಮಿಯು (ದ್ರೋಣೀ, ದ್ರೋಣಾ) ಹಸುಗಳು ಮೇಯುವ ಹುಲ್ಲುಗಾವಲಾಗಲೀ, ಗೋಮಾಳದ ಜಮೀನುಗಳಾಗಲೀ ಆಗಿರಕೂಡದು. ಅಂತಹ ಭೂಪ್ರದೇಶವನ್ನು ಮಾತ್ರ ಯಾರಿಗೂ ಯಾವಾಗಲೂ ಕೊಡಲೇಕೂಡದು.

**ಪೂಜನೀಯೌ ತಥೈವಾತ್ರ ಸಾಂವತ್ಸರ ಪುರೋಹಿತೌ।**
**ಹಸ್ತಿನ್ಯಾಂ ಮದಮತ್ತಾಯಾಂ ಶಾಂತಿಕೇಸ್ಮಿನ್ದ್ವಿಜೋತ್ತಮ ॥ ೫೫ ॥**

**ರಾಷ್ಟ್ರಾನ್ನಿರ್ವಾಸ್ಯ ತಾಂ ಕುರ್ಯಾಚ್ಛಾಂತಿಮೇತಾಂ ದ್ವಿಜೋತ್ತಮ।**
**ನಾಗರಾಜ್ಞಿ ಮೃತೇ ಕೃತ್ವಾ ತತ್ರೈವಾನ್ಯಂ ಮತಂಗಜಂ ॥ ೫೬ ॥**

**ಸ್ನಾತಂ ಸರ್ವೌಷಧೈರ್ನಾಗಂ ಸರ್ವಗಂಧೈಸ್ತಥೈವ ಚ।**
**ಸರ್ವಬೀಜೈಶ್ಚ ರತ್ನೈಶ್ಚ ಸರ್ವತೀರ್ಥಜಲೈಸ್ತಥಾ ॥ ೫೭ ॥**

**ಅಹತಾಂಬರಸಂವೀತದರ್ಶನಂ ಶ್ವೇತಲಕ್ಷಣಂ।**
**ಕಾಂಚನಾಪೀಡಿತೇ ವಾದ್ಯಗೀತಪುಣ್ಯಾಹನಿಸ್ವನೈಃ ॥ ೫೮ ॥**

---

೫೫. ಇದಾದ ಬಳಿಕ ಹಸ್ತಿ ವೈದ್ಯನಿಗೂ, ಜೋಯಿಸರಿಗೂ, ಪುರೋಹಿತರಿಗೂ ಯಥೋಚಿತವಾಗಿ ಪೂಜೆಮಾಡಿ ಸಂಭಾವನೆ ಮಾಡಬೇಕು.

೫೬. ಪಟ್ಟದಾನೆಯ ಹೆಂಡತಿ ( ಹೆಣ್ಣಾನೆ ) ಯು ಏನಾದರೂ ವಿಶೇಷ ಮದದಿಂದ ಮತ್ತವಾಗಿದ್ದ ಸಂದರ್ಭದಲ್ಲಿಯೂ, ಅದು ಮಹಾ ತಂಟೆಮಾಡುತ್ತಿದ್ದ ಸಂದರ್ಭದಲ್ಲಿಯೂ, ಅದನ್ನು ಊರಿನಿಂದ ಹೊರಗೆ ಕಳುಹಿಸಿ ಈ ಶಾಂತಿಕ್ರಮವನ್ನು ಮಾಡಿ ಅದರ ಸ್ಥಳದಲ್ಲಿ ಬೇರೆಯೊಂದು ಆನೆಗೆ ಪಟ್ಟಾಭಿಷೇಕ ಮಾಡಬೇಕು.

೫೭. ಆ ಪಟ್ಟಾಭಿಷೇಕ ಕ್ರಮವೆಂತೆಂದರೆ:— ಮೊದಲು ಆ ಆನೆಗೆ ಸರ್ವೌಷಧ ರಸಗಳಿಂದಲೂ ಸ್ನಾನ ಮಾಡಿಸಬೇಕು. ಆ ಬಳಿಕ ಗಂಧೋದಕಗಳಿಂದಲೂ, ಸಕಲ ಬೀಜೋದಕ, ಸಕಲ ರತ್ನೋದಕ, ಸರ್ವ ತೀರ್ಥಜಲಗಳಿಂದಲೂ ಸ್ನಾನ (ಅಭಿಷೇಕ) ವನ್ನು ಮಾಡಿಸಬೇಕು.

೫೮. ಆ ಬಳಿಕ ಆ ಪಟ್ಟದಾನೆಗೆ ಪೀತಾಂಬರಗಳನ್ನು ಹೊದಿಸಿ, ಸುವರ್ಣದ ಆಭರಣಗಳಿಂದ (ಆನೆಗೆ ಅನುರೂಪವಾದ ಒಡವೆ) ಅಲಂಕಾರಮಾಡಿ ಪೂಜಿಸಬೇಕು. ಪೂಜೆಯಾಗುವಾಗ ನಾನಾ ವಾದ್ಯ, ಗೀತಧ್ವನಿಗಳೂ, ಪುಣ್ಯಾಹ ಮಂತ್ರಘೋಷಗಳೂ ಆಗುತ್ತಿರಬೇಕು.

**ಅರ್ಚಿತಂ ದೈವತೋ ವಹ್ನಿಂ ಕೃತವಿಪ್ರಪ್ರದಕ್ಷಿಣಂ ।**
**ಕರಿಣೀಂ ತು ಸಮಾರುಹ್ಯ ವದೇತ್ಕರ್ಣೇ ತು ಕಾಲವಿತ್ ॥ ೫೯ ॥**

**ಶ್ರೀಗಜಸ್ತ್ವತ್ಕೃತೇ ರಾಜಾ ಭವಸ್ವಾಸ್ಯ ಗಜಾಗ್ರಣೀಃ ।**
**ಗಂಧಮಾಲ್ಯಾಗ್ರಭಕ್ತ್ಯಾಸ್ತ್ವಾಂ ಪೂಜಯಿಷ್ಯತಿ ಪಾರ್ಥಿವಃ ॥ ೬೦ ॥**

**ಲೋಕಸ್ತದಾಜ್ಞಯಾ ಪೂಜಾಂ ಕರಿಷ್ಯತಿ ತಥಾಽನಘ ।**
**ಪಾಲನೀಯಸ್ತ್ವಯಾ ರಾಜಾ ಘೋರಯುದ್ಧೇ ತಥಾಽಹವೇ ॥ ೬೧ ॥**

**ತಿರ್ಯಗ್ಭಾವಂ ಸಮುತ್ಸೃಜ್ಯ ದಿವ್ಯಂ ಭಾವಮನುಸ್ಮರ ।**
**ದೇವಾಸುರಾಣಾಂ ಯುದ್ಧೇ ಚ ಶ್ರೀಗಜಸ್ತ್ರಿದಶೈಃ ಕೃತಃ ॥ ೬೨ ॥**

---

೫೯-೬೦. ಈ ರೀತಿ ಪೂಜೆಗಳಾದಮೇಲೆ ಪುರೋಹಿತನು ಆ ಆನೆಯನ್ನು ತನ್ನ ಜೊತೆಯಲ್ಲಿ ಕರೆದುಕೊಂಡು (ಅದರ ಮೇಲೆ ಹತ್ತಿ ಕುಳಿತು) ಮೂರಾವರ್ತಿ ಯಜ್ಞೇಶ್ವರನಿಗೆ ಪ್ರದಕ್ಷಿಣೆ ಮಾಡಬೇಕು. ಆಮೇಲೆ ಪುರೋಹಿತನು ಆ ಆನೆಯ ಕಿವಿಯಲ್ಲಿ ಹೀಗೆ ಹೇಳಬೇಕು:—ಎಲೈ ಗಜವೇ! ನಿನಗೆ ರಾಜನು ಈಗ ಪಟ್ಟ ಕಟ್ಟಿದಾನೆ. ನೀನು ಇನ್ನುಮೇಲೆ ಗಜಶ್ರೇಷ್ಠನೆನಿಸಿಕೊಳ್ಳುವೆಯಲ್ಲದೆ, ಅರಮನೆಯ ಪಟ್ಟದಾನೆಯಾಗಿ ಇರುತ್ತೀಯೆ. ರಾಜನು ನಿನ್ನನ್ನು ಗಂಧಮಾಲ್ಯೋಪಚಾರಗಳಿಂದ ಭಕ್ತಿಸಹಿತವಾಗಿ ಪೂಜೆಮಾಡುತ್ತಾನೆ.

೬೧. ಮತ್ತು ಲೋಕದ ಸಕಲ ಪ್ರಜೆಗಳೂ ಸಹ ರಾಜಾಜ್ಞೆಯಿಂದ ನಿನ್ನನ್ನು ಪೂಜಿಸುತ್ತಾರೆ. ನಿನ್ನನ್ನು ರಾಜನು ತನ್ನ ಸಂರಕ್ಷಣಾರ್ಥವಾಗಿ ಚೆನ್ನಾಗಿ ಕಾಪಾಡಿ ಕೊಂಡಿರುತ್ತಾನೆ. ಭಯಂಕರಯುದ್ಧವು ಪ್ರಾಪ್ತವಾದ ಸಮಯದಲ್ಲಿ ನೀನು ರಾಜನಿಗೋಸ್ಕರ ಹೋರಾಡಿ ಅವನಿಗೆ ವಿಜಯವನ್ನು ತರಬೇಕು.

೬೨. ನೀನು ಬುದ್ಧಿಯಿಲ್ಲದ ತಿರ್ಯಕ್ಪ್ರಾಣಿಗಳಂತೆ ಪ್ರವರ್ತಿಸಬೇಡ. ದಿವ್ಯಭಾವವನ್ನು ತಾಳಿದವನಾಗಿ ದೇವಾಸುರರು ನಡೆಸಿದ ಯುದ್ಧದಲ್ಲಿ ವಿಜಯವನ್ನು ತಂದ ಶ್ರೀಗಜದಂತೆ ರಾಜನಿಗೆ ವಿಜಯವನ್ನು ತರುವವನಾಗು.

ಐರಾವಣಸುತಃ ಶ್ರೀಮಾನರಿಷ್ಟೋ ನಾಮ ರಾವಣಃ ।
ಶ್ರೀ ಗಜಾನಾಂ ತು ತತ್ತೇಜಃ ಸರ್ವಮೇವಾತ್ರ ತಿಷ್ಠತಿ ॥ ೬೩ ॥

ತತ್ತೇಜಸ್ತ್ವವ ನಾಗೇಂದ್ರ ದಿವ್ಯಭಾಗಸಮನ್ವಿತಂ ।
ಉಪತಿಷ್ಠತು ಭದ್ರಂ ತೇ ರಕ್ಷ ರಾಜಾನಮಾಹವೇ ॥ ೬೪ ॥

ಇತ್ಯೇವಮಭಿಷಿಕ್ತ್ವೈನಂ ಶುಭೇಽಹನಿ ನರಾಧಿಪಃ ।
ನಿತ್ಯಂ ಚೈವಾಸ್ಯ ಕರ್ತವ್ಯಂ ಬ್ರಾಹ್ಮಣೈಃ ಸ್ವಸ್ತಿವಾಚನಂ ॥ ೬೫ ॥

ತಸ್ಯಾನುಗಮನಂ ಕುರ್ಯುಃ ಶಸ್ತ್ರಹಸ್ತಾಶ್ಚ ಮಾನವಾಃ ।
ಸಿತವರ್ಣಶ್ಚ ಕರ್ತವ್ಯೋ ರಾಜ್ಞಃ ಪುಣ್ಯಾಹಕರ್ಮಸು ॥ ೬೬ ॥

ಏತತ್ತೇ ಸರ್ವಮಾಖ್ಯಾತಂ ಗಜಾನಾಂ ಶಾಂತಿಕರ್ಮಸು ।
ನಕ್ಷತ್ರಾಣಿ ಪ್ರಶಸ್ತಾನಿ ತಿಥಯಶ್ಚ ತಥಾ ಶೃಣು ॥ ೬೭ ॥

---

೬೩-೬೪. ಇಂದ್ರನ ಐರಾವತಗಜವೂ, ಅದರ ಮರಿಯಾದ ಅರಿಷ್ಟವೆಂಬ ವಾರಣವೂ, ಶ್ರೀಗಜವೂ ಸಹ ಆದಾವ ತೇಜಸ್ಸಿನಿಂದ ಕೂಡಿವೆಯೋ ಆ ಸಕಲ ತೇಜವೂ ನಿನ್ನಲ್ಲಿದೆ. ಎಲೈ ಗಜರಾಜನೇ! ದಿವ್ಯಭಾವಸಮನ್ವಿತವಾದ ಆ ಸಕಲ ತೇಜಸ್ಸನ್ನೂ ನೀನೊಬ್ಬನೇ ತಳೆದು ಪ್ರಕಾಶಮಾನನಾಗಿ ಬಾಳು. ನಿನಗೆ ಈಗ ಪಟ್ಟಗಟ್ಟಿರುವ ಈ ಮಹಾರಾಜನಿಗೆ ಯುದ್ಧದಲ್ಲಿ ವಿಜಯವನ್ನುಂಟುಮಾಡಿ ಕಾಪಾಡು.

೬೫. ಇದುವರಿಗೆ ಹೇಳಿದ ಕ್ರಮದಿಂದ ಮಹಾರಾಜನಾದವನು ಶುಭ ಮುಹೂರ್ತದಲ್ಲಿ ಆನೆಗೆ ಪಟ್ಟಾಭಿಷೇಕಮಾಡಿದ ಬಳಿಕ ಪ್ರತಿದಿನವೂ ಬ್ರಾಹ್ಮಣರಿಂದ ಸ್ವಸ್ತಿವಾಚನ (ಪುಣ್ಯಾಹಕರ್ಮ)ವನ್ನು ಮಾಡಿಸುತಲಿರಬೇಕು.

೬೬. ಶಸ್ತ್ರಪಾಣಿಗಳಾದ ಪುರುಷರು ಯಾವಾಗಲೂ ಆನೆಯ ಹಿಂದೆ ಅದನ್ನನು ಸರಿಸಿಕೊಂಡೇ ಇರಬೇಕು. ಪಟ್ಟಕಟ್ಟುವ ಆನೆಯು ಉಚ್ಚೈಶ್ರವಸ್ಸಿನಂತೆ ಬೆಳ್ಳಗಿರ ಬೇಕು. ಈ ಬಿಳೀ ಆನೆಗೆ ಪ್ರತಿದಿವಸವೂ ಪುಣ್ಯಾಹಕರ್ಮವನ್ನಾಚರಿಸಬೇಕು.

೬೭. ಎಲೈ ಪರಶುರಾಮನೇ! ಇದುವರಿಗೆ ನಿನಗೆ ಯಥಾಶಾಸ್ತ್ರೀಯವಾದ ಗಜಶಾಂತಿಕರ್ಮವನ್ನು ನಿರೂಪಿಸಿರುವೆನು. ಈ ಶಾಂತಿ ಮಾಡುವುದಕ್ಕೆ ಯೋಗ್ಯವಾದ ನಕ್ಷತ್ರಗಳನ್ನೂ ತಿಥಿಗಳನ್ನೂ ನಿನಗೀಗ ತಿಳಿಸುವೆನು. ಸಾವಧಾನವಾಗಿ ಕೇಳು.

**ಚತುರ್ದಶೀಂ ಚತುರ್ಥೀಂ ಚ ನವಮೀಂ ಚ ವಿವರ್ಜಯೇತ್ ।**
**ಅಂಗಾರಕದಿನಂ ರಾಮ ದಿನಂ ಭಾಸ್ಕರಜಸ್ಯ ಚ ॥ ೬೮ ॥**

**ಶ್ರವಣಂ ವೈಷ್ಣವಂ ತ್ವಾಷ್ಟ್ರಂ ಶಸ್ಯತೇ ಶಕ್ರದೈವತಂ ।**
**ನಕ್ಷತ್ರಾಣಿ ಮುಹೂರ್ತಾಶ್ಚ ಏತೇ ಏವ ಮಹಾಬಲ ॥ ೬೯ ॥**

**ದೇಶಕಾಲೋಪಸಂಪನ್ನಂ ವಿಧಿನಾ ಚ ತಥಾ ಕೃತಂ ।**
**ಶಾಂತಿಕರ್ಮ ಗಜೇಂದ್ರಾಣಾಂ ಸರ್ವಬಾಧಾವಿನಾಶನಂ ॥ ೭೦ ॥**

**ಧನ್ಯಂ ಯಶಸ್ಯಮಾಯುಷ್ಯಂ ರಾಜ್ಞಾಂ ಚ ವಿಜಯಾವಹಂ ।**
**ಭಾರ್ಗವಶ್ಚ್ಯವನಃ ಕ್ರುದ್ಧೋ ಯಥಾ ಶಕ್ರಸ್ಯ ಭಾರ್ಗವ ॥ ೭೧ ॥**

---

೬೮. ಚತುರ್ದಶೀ-ಚೌತಿ-ನವಮಿ ಈ ಮೂರು ತಿಥಿಗಳನ್ನು ಬಿಟ್ಟು ಮತ್ತಾವ ದಿವಸವಾದರೂ ಈ ಶಾಂತಿಕರ್ಮವನ್ನು ಮಾಡಬಹುದು ಮತ್ತು ಮಂಗಳವಾರ-ಶನಿವಾರ ಈ ಎರಡು ವಾರಗಳನ್ನು ಬಿಟ್ಟು ಇನ್ನಾವ ವಾರದಲ್ಲಾದರೂ ಈ ಶಾಂತಿಯನ್ನು ನಡೆಸಬಹುದು.

೬೯. ಶ್ರವಣ, ಚಿತ್ತ, ಜ್ಯೇಷ್ಠಾ ನಕ್ಷತ್ರಗಳು ಶಾಂತಿಗೆ ಪ್ರಶಸ್ತವಾದ ನಕ್ಷತ್ರಗಳು. ಆ ನಕ್ಷತ್ರದ ದಿವಸದಲ್ಲಿ ಬರುವ ಎಲ್ಲಾ ಮುಹೂರ್ತಗಳೂ ಸಹ ಪ್ರಶಸ್ತವಾದುವುಗಳು.

೭೦. ದೇಶಕಾಲ ಮುಹೂರ್ತಗಳನ್ನು ನೋಡಿ ಮೇಲೆ ಬರೆದ ವಿಧಿಯನ್ನನುಸರಿಸಿ ಗಜಗಳಿಗೆ ಶಾಂತಿಕರ್ಮವನ್ನು ನೆರವೇರಿಸಿದರೆ ಆನೆಗಳಿಗೊದಗುವ ಸಕಲ ಬಾಧೆಗಳೂ ಪರಿಹಾರವಾಗುವುವು.

೭೧. ಈಗ ಮದಾಸುರನ ಕಥೆಯನ್ನು ಹೇಳುವುದಕ್ಕಿಂತ ಮುಂಚೆ ಈ ಗಜಶಾಂತಿಯಿಂದುಂಟಾಗುವ ಫಲವನ್ನು ಹೇಳುವೆನು. ಈ ಗಜಶಾಂತಿಯಿಂದ ಮನುಷ್ಯನು ಧನ್ಯನಾಗುವನು. ಯಶಸ್ಸನ್ನು ಹೊಂದುವನು. ಆಯುಷ್ಮಂತನಾಗುವನು. ವಿಜಯಶಾಲಿಯಾಗುವನು.

**ಮದೋ ನಾಮ ಸಮುತ್ಪನ್ನಸ್ತಥಾ ದೈತ್ಯಃ ಸುದಾರುಣಃ ।**
**ಇಂದ್ರನಾಶಾಯ ಶಕ್ರಾರ್ಥೀ ತತಃ ಪಶ್ಚಾತ್ಪ್ರಸಾದಿತಃ ॥ ೭೨ ॥**

**ಮದಂ ಚ ಬಹುಧಾ ಚಕ್ರೇ ಪ್ರಜಾಪತಿಸಮೋ ದ್ವಿಜ ।**
**ಸ್ತ್ರೀಷ್ವಕ್ಷೇಷು ತಥಾ ಪಾನೇ ಮೃಗಯಾಯಾಂ ಧನೇ ತಥಾ ॥ ೭೩ ॥**

**ವಿದ್ಯಾಸು ಚೈವ ಸರ್ವಾಸು ಸರ್ವಶಿಲ್ಪೇಷು ಚಾಪ್ಯಥ ।**
**ಜೀವೇಷು ರಾಮ ಸರ್ವೇಷು ತಥಾ ರೂಪೇ ಬಲೇ ಕುಲೇ ॥ ೭೪ ॥**

**ಏಕೋಽಸ್ಯ ಧಾರಣೇ ಶಕ್ತೋ ನ ಕಶ್ಚಿದಿತಿ ಚಿಂತಯನ್ ।**
**ಯಥೋಕ್ತೇಷ್ವಧಿಕಂ ಭಾಗಂ ಕಿಂಚಿತ್ಪಾನೇ ನಿವೇಶಯತ್ ॥ ೭೫ ॥**

---

೭೨. ಭಾರ್ಗವಋಷಿಗಳ ಮಗನಾದ ಚ್ಯವನನು ಯಾವುದೋ ಒಂದು ಸಂದರ್ಭದಲ್ಲಿ ಇಂದ್ರನ ಮೇಲೆ ಕೋಪಗೊಂಡು ಕಿಡಿಕಿಡಿಯಾದಾಗ ಭಯಂಕರನಾದ ಮದಾಸುರನೆಂಬ ದೈತ್ಯನು ಹುಟ್ಟಿ ಆ ಇಂದ್ರನನ್ನು ನಾಶಮಾಡಬೇಕೆಂದು ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನವು ಸಫಲವಾಗದೆ ಇಂದ್ರನ ಪ್ರಸಾದವನ್ನೇ ಹೊಂದಬೇಕಾಯಿತು.

೭೩. ಬ್ರಹ್ಮಸಮಾನನಾದ ಆ ಇಂದ್ರನು ಮದನಮೇಲೆ ಅನುಗ್ರಹವಿಟ್ಟು ಅವನನ್ನು ನಾನಾ ಪ್ರದೇಶಗಳಲ್ಲಿಟ್ಟನು. ಆ ಮದವು ಈಗ ಎಲ್ಲೆಲ್ಲಿರುವುದೆಂಬುದನ್ನು ತಿಳಿಸುತ್ತೇನೆ:—ಹೆಂಗಸರಲ್ಲೂ, ಜೂಜಾಡುವವರಲ್ಲೂ, ಪಾನಮಾಡುವವರಲ್ಲೂ, ಬೇಟೆಯಾಡುವವರಲ್ಲೂ, ಹಣಗಾರರಲ್ಲೂ ಮದವು ವಾಸವಾಗಿದೆ.

೭೪. ಮತ್ತು ವಿದ್ಯಾವಂತರಲ್ಲೂ, ಶಿಲ್ಪಕಲಾಕುಶಲರಲ್ಲೂ, ಜೀವಂತರಾಗಿರುವ ಸಮಸ್ತ ರೂಪಶಾಲಿಗಳಲ್ಲೂ, ಬಲಶಾಲಿಗಳಲ್ಲೂ, ಉತ್ತಮ ಕುಲೋತ್ಪನ್ನರಲ್ಲೂ ಮದವು ನಿಂತಿದೆ. (ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ಎಂಬ ಗೀತಾನೀತಿಯನ್ನಿಲ್ಲಿ ಅನುಸಂಧಾನ ಮಾಡಿದರೆ ಈ ವಿಚಾರವು ಚೆನ್ನಾಗಿ ವೇದ್ಯವಾಗುವುದು.)

೭೫. ಈ ಮದವು ಒಬ್ಬನಲ್ಲಿಯೇ ಇರುವುದಾದರೆ ಇದರಿಂದ ಲೋಕಾನರ್ಥವಾಗುವುದೆಂದೂ, ಇದನ್ನು ಧರಿಸಲು ಒಬ್ಬನಿಗೇ ಶಕ್ತಿಯಿಲ್ಲವೆಂದೂ ಯೋಚಿಸಿಯೇ ಇಂದ್ರನು ಈ ಮದವನ್ನು ಮೇಲೆ ಹೇಳಿದವರಲ್ಲೆಲ್ಲಾ ಒಂದೊಂದು ಭಾಗಮಾಡಿ ಇಟ್ಟು, ಹೆಚ್ಚು ಭಾಗವನ್ನು ಮದ್ಯಪಾಯಿಗಳಲ್ಲಿರಿಸಿದನು.

ಪ್ರಾಣಿನಾಮಥ ಸರ್ವೇಷಾಂ ನಾಗೇಷ್ವಭ್ಯಧಿಕಂ ತಥಾ ।
ಮದೋ ಯದಾ ಸಮುಭ್ಯೇತಿ ನಾಗಂ ಬ್ರಾಹ್ಮಣಸತ್ತಮ　　॥ ೭೬ ॥

ರಾಮ ಶಾನ್ತಿಸ್ತದಾ ಕಾರ್ಯಾ ಯಾದೃಶೀ ತಾಂ ನಿಬೋಧ ಮೇ ।
ಶಾಲಾಪ್ರಾಗುತ್ತರೇ ಭಾಗೇ ಸ್ಥಂಡಿಲಂ ಕಲ್ಪಯೇದ್ಬುಧಃ　　॥ ೭೭ ॥

ಸ್ಥಂಡಿಲೇ ಕಮಲಂ ಕೃತ್ವಾ ದಿಕ್ಪತ್ರೇಷು ತಥೇಶ್ವರಾನ್ ।
ಕೇಸರೇ ಚ್ಯವನಂ ನಾಗಾನ್ಭುವಂ ಕಂ ಚ ಸರಸ್ವತೀಂ　　॥ ೭೮ ॥

ಪೂಜಯೇಡ್ಡಿಂಡಿಮಂ ಮಧ್ಯೇ ಗಂಧಮಾಲ್ಯಾನುಲೇಪನೈಃ ।
ಧೂಪದೀಪನಮಸ್ಕಾರೈರ್ವಾಸೋಭಿಶ್ಚ ಪೃಥಕ್ಪೃಥಕ್　　॥ ೭೯ ॥

---

೭೬. ಮತ್ತು ಉಳಿದಿದ್ದ ಅಧಿಕಾಂಶವನ್ನೆಲ್ಲಾ ಎಲ್ಲಾ ಪ್ರಾಣಿಗಳಿಗೂ ಹಂಚಿ, ಆನೆಗಳಲ್ಲಿ ಅಧಿಕ ಭಾಗವನ್ನು ತುಂಬಿದುದರಿಂದಲೂ ಅದು ಆನೆಗಳ ದೇಹದಲ್ಲೆಲ್ಲಾ ತುಂಬಿ ಅಲ್ಲಿಂದ ಉಕ್ಕಿ, ಗಂಡಸ್ಥಳಗಳಿಂದ ನೀರುನೀರಾಗಿ ಹರಿದು ಬರುತ್ತಿರುವುದರಿಂದಲೂ ಆನೆಗಳಿಗೆ ಮದೋದಕವು ಈಗಲೂ ಜಿನುಗುತ್ತಿರುವುದನ್ನು ಎಲ್ಲರೂ ನೋಡಿಯೇ ಇರುವರು.

೭೭. ಯಾವ ಆನೆಗೆ ಮದೋದಕಧಾರೆಯು ಹೆಚ್ಚಾಗಿ ಸುರಿಯುವುದಕ್ಕಾರಂಭವಾಗುವುದೋ ಆಗ ಗಜಶಾಂತಿಯಾಗಲೇಬೇಕು. ಆ ಶಾಂತಿ ಹೇಗಾಗಬೇಕು, ಎಂಬುದನ್ನೀಗ ತಿಳಿಸುತ್ತೇನೆ, ಕೇಳು. ಶಾಂತಿಶಾಲೆಯ ಪೂರ್ವ ಅಥವಾ ಉತ್ತರ ದಿಕ್ಕಿನಲ್ಲಿ ಸ್ಥಂಡಿಲವನ್ನು ರಚಿಸಬೇಕು.

೭೮. ಆ ಸ್ಥಂಡಿಲದಲ್ಲೊಂದು ಕಮಲವನ್ನು ಬರೆದು ಅದರ ದಿಕ್‌ಪತ್ರಗಳಲ್ಲಿ ಅಷ್ಟಲೋಕಪಾಲಕರನ್ನೂ, ಕೇಸರದಲ್ಲಿ ಚ್ಯವನಋಷಿಯನ್ನೂ ಭೂದೇವಿ ಸರಸ್ವತಿಯರುಗಳನ್ನೂ ಆವಾಹಿಸಬೇಕು.

೭೯. ಅದರ ಮಧ್ಯದಲ್ಲಿ ಒಂದು ಡಿಂಡಿಮವನ್ನು ಇಟ್ಟು ಅದನ್ನು ಗಂಧಮಾಲ್ಯಾನುಲೇಪನಗಳಿಂದಲೂ, ಧೂಪ ದೀಪ ನಮಸ್ಕಾರಗಳಿಂದಲೂ, ವಸ್ತ್ರಯುಗ್ಮಗಳಿಂದಲೂ ಪೂಜಿಸಬೇಕು.

ಸರ್ವಾಸಾಂ ಪೂಜನಂ ಕೃತ್ವಾ ಪಾದ್ಯಾದ್ಯನುರತೋದ್ವಿಜ ।
ದೇವತಾನಾಂ ಘೃತಂ ಹುತ್ವಾ ಯಥಾ ಶ್ರದ್ಧಮನಿಂದಿತಂ ॥ ೮೦ ॥

ರಸಪೂರ್ಣೋ ಘಟೋ ದೇಯೋ ದಕ್ಷಿಣಾರ್ಥೇ ಚ ಕಾಂಚನಂ ।
ದತ್ವಾ ವಾಸಾಂಸಿ ನಾಗಸ್ಯ ಗಜಾಧ್ಯಕ್ಷಂ ಚ ಪೂಜಯೇತ್ ॥ ೮೧ ॥

ಹಸ್ತಿಪಂ ಕರ್ಮಿಣಶ್ಚಾನ್ಯಾಃದಕ್ಷಿಣಾಭಿರ್ದ್ವಿಜೋತ್ತಮಾನ್ ।
ಸಾಂವತ್ಸರೇ ಚ ವಿತ್ತೇನ ಯುತಃ ಸಾಂವತ್ಸರಃ ಸ್ವಯಂ ॥ ೮೨ ॥

ಗಜಾಧ್ಯಕ್ಷಾಯ ತಂ ದದ್ಯಾಡ್ಡಿಂಡಿಮುಂಪ್ರಯತಃ ಸ್ವಯಂ ।
ಪ್ರಾಙ್ಮುಖಶ್ಚ ಗಜಾಧ್ಯಕ್ಷೋ ವಾದಯೇತ್ತಂ ಯಥಾವಿಧಿ ॥ ೮೩ ॥

---

೮೦. ಆಮೇಲೆ ಪಾದಾರ್ಘ್ಯಾಚಮನೀಯಾದಿಗಳಿಂದ ಸಕಲ ದೇವತೆಗಳಿಗೂ ಪೂಜೆಮಾಡಿ ಎಲ್ಲ ದೇವತೆಗಳಿಗೂ ಆಜ್ಯಾಹುತಿಗಳನ್ನರ್ಪಿಸಬೇಕು. ಇದನ್ನೆಲ್ಲಾ ಬಹಳ ಶ್ರದ್ಧೆಯಿಂದ ನಡೆಸಬೇಕು.

೮೧. ರಸಪೂರ್ಣವಾದ ಕಲಶವನ್ನೂ, ಚಿನ್ನದ ನಾಣ್ಯದ ರೂಪವಾದ ದಕ್ಷಿಣೆಯನ್ನೂ, ವಸ್ತ್ರಯುಗ್ಮವನ್ನೂ ಕೊಟ್ಟು ಗಜಾಧ್ಯಕ್ಷನನ್ನು ಪೂಜೆಮಾಡಬೇಕು.

೮೨. ಆನೇ ಮಾವುತರಿಗೂ, ಇತರ ಸೇವಕರಿಗೂ ಹಣವನ್ನು ಇನಾಮಾಗಿ ಕೊಡಬೇಕು. ಬ್ರಾಹ್ಮಣರಿಗೂ, ಜೋಯಿಸರಿಗೂ ವಿಶೇಷವಾಗಿ ದಕ್ಷಿಣೆಯನ್ನು ಕೊಡಬೇಕು.

೮೩. ಇಷ್ಟು ಕೆಲಸವನ್ನು ಮಾಡಿಯಾದಮೇಲೆ ಕಮಲಮಧ್ಯದಲ್ಲಿಟ್ಟಿದ್ದ ಡಿಂಡಿಮು (ಅಂದರೆ ಡಮರುಗ ಅಥವಾ ಢಕ್ಕೆ) ವನ್ನು ತೆಗೆದು ಯಜಮಾನನು ಗಜಾಧ್ಯಕ್ಷನ ಕೈಗೆ ಕೊಡಬೇಕು. ಅದನ್ನು ತೆಗೆದುಕೊಂಡು ಆ ಆನೆಯ ಯಜಮಾನನು ಪೂರ್ವಾಭಿಮುಖವಾಗಿ ತಿರುಗಿಕೊಂಡು ಆ ಡಮರುಗವನ್ನು ಯಥಾವಿಧಿಯಾಗಿ ಧ್ವನಿ ಮಾಡಬೇಕು. (ಅಂದರೆ ಢಂ ಢಂ ಢಂ ಢಂ ಢಂ, ಢಂ ಢಂ, ಢಂ ಢಂ ಢಂ ಎಂದು ಸ್ವಲ್ಪವೂ ಅವಕಾಶವಿಲ್ಲದೆ ಬಡಿಯಬೇಕು.)

**ಉಚ್ಚೈರ್ಗಂಭೀರನಿರ್ಘೋಷೋ ಡಿಂಡಿಯೋ ತು ಶುಭಂ ವದೇತ್ ।**
**ಅಂತರಾ ಪಾತಿತೇ ತಸ್ಮಿಂಸ್ತಥೈವಾಪ್ಯಶುಭಂ ವದೇತ್ ॥ ೮೪ ॥**

**ಡಿಂಡಿಮೋ ಸಮ್ಯಗಾದತ್ತೋ ಶುಭಮೇವ ವಿನಿರ್ದಿಶೇತ್ ।**
**ತದಾ ಪ್ರಭೃತಿ ಮತ್ತಸ್ಯ ತದಾ ನಾಗಸ್ಯ ವೈ ನೃಪ ॥ ೮೫ ॥**

**ಅಶುಭೇ ಲಕ್ಷಣೇ ಜಾತೇ ಭೂಯಸ್ತತ್ಕರ್ಮ ಚಾಚರೇತ್ ।**
**ಶುಭೇ ತು ಲಕ್ಷಣೇ ಜಾತೇ ಗಜಾಧ್ಯಕ್ಷಸ್ಯ ಡಿಂಡಿಮಂ ॥ ೮೬ ॥**

**ಜಯೇ ಸಂಸ್ಥಾಪ್ಯ ನಂದಾದ್ಯಾಗಜಪಾಯ............... ।**
**......................ಸರ್ವಬಾಧಾವಿನಾಶನಂ ॥ ೮೭ ॥**

**ಅತಃ ಪರಂ ಪ್ರವಕ್ಷ್ಯಾಮಿ ಕಾಮ್ಯಂ ಕರ್ಮ ತವಾನಘ ।**
**ಉಪೋಷಿತಸ್ತಥಾ ಯಾಮ್ಯೋ ಯಜಮಾನೋ ಪುರೋಹಿತಃ ॥ ೮೮ ॥**

---

೮೪. ಶಕ್ತಿಯಿದ್ದಷ್ಟು ಬಲವಾಗಿ ಹೊಡೆಯುತ್ತಾ ಘಟ್ಟಿಯಾಗಿ ಶುಭಾಶಂಸನ (ಜಯ ಜಯ ಜಯ ಜಯ) ಮಾಡುತ್ತಿರಬೇಕು. ಕೂಗುವಾಗಲೂ ಬಡಿಯುವಾಗಲೂ ಏನಾದರೂ ಸ್ವಲ್ಪ ನಿಲ್ಲಿಸಿಬಿಟ್ಟರೆ ಅಮಂಗಳವೆಂದು ತಿಳಿಯಬೇಕು.

೮೫. ಗಜಾಧ್ಯಕ್ಷನು ಡಿಂಡಿಮವನ್ನು ಎಷ್ಟು ಬಲವಾಗಿಯೂ, ಜೋರಾಗಿಯೂ ಹೊಡೆಯುವನೋ ಅಷ್ಟೂ ಅಷ್ಟು ಶುಭವೆಂದೇ ಭಾವಿಸಬೇಕು.

೮೬-೮೭. ಎಲ್ಲಿಯವರಿವಿಗೆ ಗಜಗಳು ಶುಭವಾಗಿಯೂ, ಆರೋಗ್ಯವಾಗಿಯೂ ಇರುವುವೋ ಅಲ್ಲಿಯವರಿವಿಗೆ ಶಾಂತಿಮಾಡತಕ್ಕ ಆವಶ್ಯಕವಿಲ್ಲ. ಅಶುಭಲಕ್ಷಣಗಳೇನಾದರೂ ಕಂಡುಬಂದರೆ ಪುನಃ ಶಾಂತಿಕರ್ಮವನ್ನು ಮಾಡಬೇಕು. ಈ ರೀತಿ ಮಾಡುತ್ತ ಬಂದರೆ ಸಕಲ ಬಾಧೆಗಳೂ ನಾಶವಾಗುವುವು. (ಇಲ್ಲಿ ಅರ್ಧ ಶ್ಲೋಕವು ಮೂಲದಲ್ಲಿ ಬಿಟ್ಟುಹೋಗಿದೆಯಾದರೂ ಅರ್ಥವನ್ನು ಸಂದರ್ಭಾನುಸಾರವಾಗಿ ಬರೆಯಲಾಗಿದೆ.)

೮೮. ಇನ್ನು ಮುಂದೆ ಗಜಗಳಿಗೆ ಮಾಡಬೇಕಾದ ಕಾಮ್ಯಕರ್ಮದ ವಿವರಣೆಯನ್ನು ತಿಳಿಸುತ್ತೇನೆ. ಕೇಳಯ್ಯಾ, ಪರಶುರಾಮ! ಯಜಮಾನನೂ ಪುರೋಹಿತನೂ ಸಹ ಬೆಳಗಿನಝಾವದಲ್ಲೆದ್ದು ಶುಭಪ್ರದವೆನಿಸಿದ ನೈಮಿತ್ತಿಕಶಾಂತಿಯಲ್ಲುಕ್ತವಾದ ಸ್ನಾನಕರ್ಮವನ್ನಾಚರಿಸಬೇಕು.

ಶುಭಪ್ರದಮಿದಂ ಸ್ನಾನಂ ಯಜಮಾನಸ್ಯ ಕಾರಯೇತ್ ।
ನ್ಯಗ್ರೋಧೋದುಂಬರಾಶ್ವತ್ಥಮಧೂಕೋದಕಸಂಯುತೈಃ ॥ ೮೯ ॥

ಅಕಾಲಮೂಲೈಃ ಕಲಶೈಃ ಪಂಚಭಿರ್ಗಜಲಕ್ಷಣೈಃ ।
ಸ್ನಾತಃ ಶುಕ್ಲಾಂಬರೋ ವಿಷ್ಣುಂ ಚಂದ್ರಾರ್ಕೌ ವರುಣಂ ತಥಾ ॥ ೯೦ ॥

ಹಸ್ತಿನಂ ಪೂಜಯೇದ್ವಿದ್ವಾನ್ಗಂಧಮಾಲ್ಯಾನ್ನಸಂಪದಾ ।
ಧೂಪದೀಪನಮಸ್ಕಾರೈರ್ವಾಸೋಭಿಶ್ಚ ತಥೈವ ಚ ॥ ೯೧ ॥

ಹಸ್ತಿದಂತೇನ ಸೂರ್ಯಾಯ ದತ್ವಾ ಧೂಪಮತಃ ಪರಂ ।
ಚತುರ್ಥ್ಯಂತೇನ ವೈ ನಾಮ್ನಾ ಪ್ರಣವಾದ್ಯೇನ ಭಾರ್ಗವ ।
ಸಹಸ್ರಶೋ ಗಜಾಶ್ಚಾತ್ರ ದಕ್ಷಿಣಾ ಕಾಂಚನಂ ತಥಾ ॥ ೯೨ ॥

ಯಃ ಸ್ವಾಶ್ವಾಸತೇ ಸ್ನಾನಮಿದಂ ಪ್ರಕುರ್ವನ್
ಗಜೇಂದ್ರಮುಖ್ಯಾನ್ಗಿರಿಸನ್ನಿಕಾಶಾನ್ ।

---

೮೯. ಐದು ಕಲಶಗಳನ್ನಿಟ್ಟು ಆಲ, ಅತ್ತಿ, ಅರಳಿಗಳ ಚಿಗುರುಗಳನ್ನದರಲ್ಲಿ ಹಾಕಿ ಪುಣ್ಯತೀರ್ಥಗಳನ್ನದರಲ್ಲಿ ತುಂಬಿ ಕಲಶಸ್ಥಾಪನೆ ಮಾಡಬೇಕು.

೯೦-೯೧. ಬಳಿಕ ಇನ್ನೊಂದಾವರ್ತಿ ಸ್ನಾನಮಾಡಿ ಮಡೀ ಬಟ್ಟೆಗಳನ್ನುಟ್ಟು ಕೊಂಡು ಆ ಐದು ಕಲಶಗಳಲ್ಲೂ ಮಹಾವಿಷ್ಣು, ಚಂದ್ರ, ಸೂರ್ಯ, ವರುಣ, ನಾಗರನ್ನಾವಾಹಿಸಿ ಗಂಧ ಮಾಲ್ಯ ಧೂಪ ದೀಪ ನೈವೇದ್ಯ ತಾಂಬೂಲ ನೀರಾಜನ ಗಳಿಂದ ಪೂಜೆಮಾಡಬೇಕು.

೯೨. ಆನೆಯ ಕೊಂಬಿನಲ್ಲಿ ಧೂಪವನ್ನು ಹಾಕಿ ಸೂರ್ಯನಿಗೆ ಸಮರ್ಪಿಸ ಬೇಕು. ಆ ಬಳಿಕ ಚತುರ್ಥ್ಯಂತವಾದ ನಾಮಗಳಿಂದ ಯುಕ್ತವಾದ ವಿಷ್ಣುಸಹಸ್ರ ನಾಮಗಳಿಂದ ಪ್ರಣವಪೂರ್ವಕವಾಗಿ ಗಜಗಳನ್ನು ಪೂಜಿಸಬೇಕು. ಸುವರ್ಣನಾಣ್ಯ ಗಳನ್ನೇ ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಡಬೇಕು. ಹೀಗೆ ಶಾಂತಿಮಾಡೋಣದ ರಿಂದ ಸಹಸ್ರಾಧಿಕವಾಗಿ ಆನೆಗಳು ಹೆಚ್ಚಾಗುವುವು.

೯೩. ಈವರಿವಿಗೆ ಹೇಳಿದ ಕ್ರಮವನ್ನನುಸರಿಸಿ ಯಾರಾದರೂ ಗಜಗಳಿಗೆ ಸ್ನಾನಮಾಡಿಸುವರೋ, ನಿತ್ಯನೈಮಿತ್ತಿಕಕಾಮ್ಯಾದಿ ಕರ್ಮಗಳನ್ನೆಸಗುವರೋ,

**ಬಹೂನವಾಪ್ನೋತಿ ಶಿಥಾಸ್ಯ ನಾಗಾ**
**ಭವಂತ್ಯರೋಗಾ ವಿನಿಮುಕ್ತದೋಷಾಃ ॥ ೯೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಗಜಾನಾಂ ಶಾಂತಿಕರ್ಮವಿಧಾನಂ ನಾಮ ಪಂಚಾಶತ್ತಮೋಽಧ್ಯಾಯಃ**



---

ಅಂತಹ ಮಹಾರಾಜರು ಪರ್ವತಾಕಾರವಾದ ಬಹಳ ಗಜಗಳನ್ನು ಹೊಂದುವರು. ಅಂತಹ ಗಜಗಳು ಅವರ ಗಜಶಾಲೆಯಲ್ಲಿ ಯಾವ ರೋಗವೂ ಯಾವ ದೋಷವೂ ಯಾವ ದುಃಖವೂ ಇಲ್ಲದೆ ಸುಖವಾಗಿರುವುವೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ದ್ವಿತೀಯ ಖಂಡದಲ್ಲಿ ಗಜಶಾಂತಿಕರ್ಮವಿಧಾನವೆಂಬ ಹೆಸರಿನ ಐವತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕಪಂಚಾಶತ್ತಮೋಽಧ್ಯಾಯಃ

**ಪುಷ್ಕರ ಉವಾಚ**

**ದುರ್ಗಮಾಯುಧಸಂಘಾತಂ ಕುಂಜರಾಸ್ತುರಗಾಸ್ತಥಾ ।**
**ಪುರುಷೈಶ್ಚ ವಿನಾ ರಾಮ ಸರ್ವಮೇತದಸಾರ್ಥಕಂ ॥ ೧ ॥**

**ತಸ್ಮಾತ್ಪ್ರಯತ್ನಂ ಕುರ್ವೀತ ಪುರುಷಾಣಾಂ ಸಮರ್ಜನೇ ।**
**ತೇಷಾಂ ಚೈವಾಂತರಜ್ಞಾನೇ ಮೂಲಮೇತದ್ಯತಃ ಶ್ರಿಯಃ ॥ ೨ ॥**

---

## ಐವತ್ತೊಂದನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಇದುವರಿಗೆ ರಾಜನು ದುರ್ಗವನ್ನು ಭದ್ರಪಡಿಸಿಕೊಂಡಿರಬೇಕೆಂದೂ, ಆ ಭದ್ರವಾದ ದುರ್ಗದೊಳಗೆ ನಾನಾ ವಿಧವಾದ ಆಯುಧಗಳನ್ನೂ ಆನೆ, ಕುದುರೆಗಳನ್ನು ಶತ್ರುವಿಜಯಾರ್ಥವಾಗಿಯೂ, ಬಾಧಾಪರಿಹಾರಾರ್ಥವಾಗಿಯೂ ಕಾಪಾಡಿಕೊಂಡಿರಬೇಕೆಂದೂ ಹೇಳಿರುವೆನಷ್ಟೆ? ಎಲೈ ಪರಶುರಾಮನೇ, ಕೇಳು. ಎಷ್ಟೇ ಪದಾರ್ಥಗಳ ಮತ್ತು ಗಜತುರಗಾದಿಗಳ ಸಮೃದ್ಧಿಯಿದ್ದಾಗ್ಯೂ ಅದನ್ನು ನೋಡಿಕೊಳ್ಳತಕ್ಕ ಮನುಷ್ಯರು ಇಲ್ಲದೇ ಹೋದರೇ ಇವೆಲ್ಲವೂ ಅಸಾರ್ಥಕವಾಗಿ ಪರಿಣಮಿಸುವುದು.

೨. ಆದ್ದರಿಂದ ಮಹಾರಾಜನಾದವನು ಅದಕ್ಕೆ ತಕ್ಕ ಪುರುಷರನ್ನು ಹುಡುಕಿ ಅವರನ್ನು ಗಜತುರಗಾದಿಗಳ ರಕ್ಷಣೆಗೋಸ್ಕರ ಗೊತ್ತುಮಾಡಿಟ್ಟುಕೊಳ್ಳಬೇಕು. ಸಕಲ ವಿಧವಾದ ಐಶ್ವರ್ಯಪ್ರಾಪ್ತಿಗೂ, ಚತುರಂಗಬಲಗಳಿಗೂ, ಪದಾತಿ (ಕಾಲಾಳು) ಗಳೇ ಮೂಲಾಧಾರಸ್ತಂಭದಂತಿರತಕ್ಕವರು.

**ಸುಸಹಾಯಾರ್ಥಸಂಪನ್ನಂ ಬಲಂ ಯಸ್ಯ ಮಹೀಪತೇಃ ।**
**ಸಂಗ್ರಾಮೇ ತುಮುಲೇ ರಾಮ ನೂನಂ ತಸ್ಯ ಜಯೋ ಭವೇತ್ ॥ ೩ ॥**

**ಸಕೃದ್ಯೇನ ಕೃತಂ ಪಾಪಂ ತಸ್ಯ ರಾಜಾ ನ ವಿಶ್ವಸೇತ್ ।**
**ಪಾಪಂ ತು ಸುಕರಂ ತಸ್ಯ ಸುಕೃತಂಚಾಸ್ಯ ದುಷ್ಕರಮ್ ॥ ೪ ॥**

**ಯಥಾ ಹಿ ಮಲಿನೈರ್ವಸ್ತ್ರೈರ್ಯತ್ರ ತತ್ರೋಪವಿಶ್ಯತೆ ।**
**ತಥಾ ಚಲಿತವೃತ್ತಸ್ತು ವೃತ್ತಶೇಷಂ ನ ರಕ್ಷತಿ ॥ ೫ ॥**

---

೩. ಯಾವ ಮಹಾರಾಜನಿಗೆ ಸಹಾಯಾರ್ಥವಾಗಿ ಪದಾತಿ ಸಹಾಯವು (ಸೈನಿಕರು) ಯಥೇಚ್ಛವಾಗಿರುವುದೋ ಅಂತಹ ಮಹಾರಾಜನಿಗೆ ಯುದ್ಧಪ್ರಸಕ್ತಿಯೊದಗಿದಾಗಲೂ ತುಮುಲಸಂಗ್ರಾಮಸಂದರ್ಭವುಂಟಾದಾಗಲೂ ಜಯವು ಸಿದ್ಧವೆಂದು ತಿಳಿದುಕೊಳ್ಳಬೇಕು.

೪. ಯಾವ ಮನುಷ್ಯನು ಒಂದಾವರ್ತಿ ತಪ್ಪು (ಪಾಪ) ಮಾಡುವನೋ ಅಂತಹ ಮನುಷ್ಯನ ವಿಷಯದಲ್ಲಿ ಮಹಾರಾಜನು ನಂಬಿಕೆಯನ್ನಿಡಕೂಡದು. ಒಂದಾವರ್ತಿ ತಪ್ಪುಮಾಡಿದವನು ಉದ್ದಕ್ಕೂ ತಪ್ಪುಗಳನ್ನು ಮಾಡುತ್ತಲೇ ಹೋಗುವನಲ್ಲದೆ, ಸುಕೃತ (ಒಳ್ಳೆಯ ನಡತೆ) ವೆಂಬುದು ಅವನ ವಿಷಯದಲ್ಲಿ ದುಷ್ಕರವೇ ಸರಿ.

೫. ಕೊಳಕಾದ ಬಟ್ಟೆಯನ್ನು ಧರಿಸುವ ಅಭ್ಯಾಸವುಳ್ಳ ಮನುಷ್ಯನು ಪಂಚೆಗಳನ್ನೊಗೆದು ಶುಭ್ರವಸ್ತ್ರವನ್ನುಡಲು ಹೇಗೆ ಪ್ರಯತ್ನಪಡುವುದಿಲ್ಲವೋ ಅದೇ ಮೇರೆ ಪಾಪಪೂರಿತಹೃದಯವನ್ನುಳ್ಳ ಮನುಷ್ಯನು ಪುಣ್ಯಕರ್ಮಗಳನ್ನು ಮಾಡಲು ಅಶ್ರದ್ಧೆಯಿಂದ ವರ್ತಿಸುವನು. ತಪ್ಪುಗಾರನನ್ನೂ ಇದೇ ಮೇರೆ ಭಾವಿಸಬೇಕು. ಇಂತಹವನ ಮನಸ್ಸು ಬಹಳ ಚಪಲವಾದುದುದಾಗಿಯೂ ಸಂದೇಹದಿಂದ ಕೂಡಿದುದಾಗಿಯೂ ಇರುವುದರಿಂದ ಇವನು ಯಾವ ಕೆಲಸವನ್ನೂ ಮಾಡಲಾರನು. ಯಾರನ್ನೂ ಕಾಪಾಡಲಾರನು.

**ರಾಜಾ ನ ವೇಶಯೇತ್ಕಾರ್ಯೇ ಜನೋ ಯೋ ನಾಸ್ತಿಕೋ ಭವೇತ್ ।**
**ಆಸ್ತಿಕಾ ಅಪಿ ತತ್ಸಙ್ಗಾತ್ಪ್ರಾಪ್ನುಯುಃ ಸಂಶಯಂ ದ್ವಿಜ ॥ ೬ ॥**

**ಅನಾಹಾರ್ಯಪ್ರಭಸ್ಯಾಪಿ ತ್ರೈಲೋಕ್ಯೋದ್ಭಾಸಿತಾತ್ಮನಃ ।**
**ಕೃಷ್ಣತಾ ರಾಹುಸಂಸರ್ಗಾತ್ಕಿನ್ನ ಸೂರ್ಯಸ್ಯ ವಾ ಭವೇತ್ ॥ ೭ ॥**

**ಅಕಾರ್ಯಮಿತ್ಯಕಾರ್ಯಾಣಿ ಕುರ್ಯಾತ್ಕಾರ್ಯವಶೇನ ಯಃ ।**
**ವಿಚಿಕಿತ್ಸುರ್ಧ್ರುವಂ ರಾಮ ಪಶ್ಚಾದಪಿ ನಿವರ್ತತೇ ॥ ೮ ॥**

---

೬. ಯಾವ ಮನುಷ್ಯನಾದವನು ದೇವ ಬ್ರಾಹ್ಮಣ ಭಕ್ತಿಯಿಲ್ಲದೆ ನಾಸ್ತಿಕನಾಗಿರುವನೋ ಅಂತಹವನನ್ನು ಯಾವ ಒಳ್ಳೆಯ ಕಾರ್ಯಗಳಿಗೂ ನಿಯಮಿಸಬಾರದು. ಮತ್ತು ಅಂತಹ ಮನುಷ್ಯನ ಜೊತೆಯಲ್ಲಿ ಆಸ್ತಿಕರಾದವರನ್ನು ಸೇರಿಸಲೂ ಕೂಡದು. ಎಂತಹ ಆಸ್ತಿಕನಾದವನಾದಾಗ್ಯೂ ನಾಸ್ತಿಕನಾದವನ ಸಹವಾಸದಲ್ಲಿದ್ದರೆ ಅವನ ನಡತೆಯೂ ಸಂದೇಹಾಸ್ಪದವಾಗಿ ಪರಿಣಮಿಸುತ್ತದೆ.

೭. ಈಗ ಇದಕ್ಕೊಂದು ಉದಾಹರಣೆಯನ್ನು ಬರೆಯುತ್ತೇನೆ. ಸೂರ್ಯನ ಕಾಂತಿಯೇ ಇಲ್ಲದ ಪ್ರದೇಶದಲ್ಲಿ ಇತರರಿಂದ ನಡೆಯಲು ಸಾಧ್ಯವಾಗುವುದಿಲ್ಲವೆಂದೂ ಮೂರು ಲೋಕದಲ್ಲೂ ಇವನು ಪರಿಶುದ್ಧ ಪ್ರಭೆಯಿಂದ ಬೆಳಗುವವನೆಂದೂ, ಎಂಬ ವಿಷಯವು ಎಲ್ಲರಿಗೂ ತಿಳಿದೇ ಇರುತ್ತೆ. ಆದಾಗ್ಯೂ ಎಂದೋ ಒಂದು ದಿನ ರಾಹುವು ಅವನ ಸಂಸರ್ಗಮಾಡಿದವನಾದರೆ ಅಂತಹ ತ್ರಿಲೋಕಪ್ರಭಾವಿಶಿಷ್ಟನಾದ ಸೂರ್ಯನೂ ಸಹ ಕಪ್ಪಾಗಿ ಹೋಗುವನಲ್ಲವೇ ?

೮. ಈಗ ನಾನು ಮಾಡುತ್ತಿರುವ ಕೆಲಸ ಸರಿಯಾದ್ದಲ್ಲ, ಇದು ತಪ್ಪು ಕೆಲಸ, ಹೀಗೆಂದು ತಿಳಿದಿದ್ದಾಗ್ಯೂ ಯಾವನು ಕಾರ್ಯವಶದಿಂದ ಪುನಃ ಪುನಃ ಅದೇ ತಪ್ಪನ್ನು ಮಾಡುತ್ತಾ ಬರುವನೋ ಅವನು ಬಹಳ ಪ್ರಯತ್ನಮಾಡಿ ಮುಂದೆ ಆ ಕೆಲಸವನ್ನು ಮಾಡದೇ ತನ್ನ ಬುದ್ಧಿಗೆ ತಾನೇ ಚಿಕಿತ್ಸೆಮಾಡಿಕೊಳ್ಳಬೇಕು. ಹೀಗೆ ಬಲವಾದ ಅಭ್ಯಾಸ ಮಾಡಿ ಮಾಡಿ ತಪ್ಪನ್ನು ತಿದ್ದಿಕೊಳ್ಳಬೇಕು.

**ಕಾರ್ಯಂ ಬುದ್ಧ್ವಾತ್ವಕಾರ್ಯಾಣಿ ಯಃ ಕರೋತಿ ನರಾಧಮಃ।**
**ಅಕಾರ್ಯಕರಣೇ ಶ್ರದ್ಧಾ ತಸ್ಯ ಭೂಯೋಽಭಿವರ್ಧತೇ　　　　॥ ೯ ॥**

**ಲೋಕಃ ಸರ್ವೋ ಮಹಾಭಾಗ ಪರಲೋಕನಿಬಂಧನಃ।**
**ನಿರಪೇಕ್ಷಸ್ಯ ತತ್ರಾನ್ಯಾ ಕಾ ಗತಿಃ ಸ್ಯಾನ್ನಿಬಂಧನೇ　　　　॥ ೧೦ ॥**

**ಮಹಾಪಾತಕಿನೋ ಯೇಽಪಿ ತೇಭ್ಯೋಽಪಿ ಚ ಮಹತ್ತರಃ।**
**ಪಾಪಕೃನ್ನಾಸ್ತಿಕೋ ಲೋಕಸ್ತಸ್ಮಾತ್ತಂ ಪರಿವರ್ಜಯೇತ್　　　　॥ ೧೧ ॥**

---

೯. ಇದು ಅಕಾರ್ಯ. ಇದನ್ನು ಮಾಡಬಾರದೆಂದು ತಿಳಿದೂ ಸಹ ಯಾವ ನರಾಧಮನು ಅಕಾರ್ಯವನ್ನು ಮಾಡುತ್ತಲೇ ಇರುವವನೋ ಅವನಿಗೆ ಅಂತಹ ಕೆಲಸದಲ್ಲಿ ಪುನಃ ಪುನಃ ಶ್ರದ್ಧೆಯು ಹುಟ್ಟುತ್ತಲೇ ಇರುತ್ತದೆ. (ಇದನ್ನು ದೈವೀಗತಿ ಯೆಂದೂ ಪ್ರಾರಬ್ಧವೆಂದೂ ಹೇಳಬಹುದು. ಸಂಚಿತ ಪ್ರಾರಬ್ಧ ಆಗಾಮಿಗಳೆಂಬ ಕರ್ಮಗತಿಯ ರಹಸ್ಯವನ್ನು ಚೆನ್ನಾಗಿ ಅಧ್ಯಯನವನ್ನು ಮಾಡಿದರೇ ಈ ಸಂಗತಿ ವೇದ್ಯವಾಗುವುದು.) ಗೀತೆಯಲ್ಲೂ ಈ ವಿಚಾರವಾಗಿ,

ಅಪಿಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪ ಕೃತ್ತಮಃ!
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯತಿ ||

ಎಂದು ಕೃಷ್ಣಭಗವಾನನು ಅರ್ಜುನನಿಗೆ ಉಪದೇಶಿಸಿದಾನೆ. ಈ ವಿಚಾರವು ಬಹಳ ಅಗಾಧವಾದುದರಿಂದಲೂ ಗಹನವಾದುದರಿಂದಲೂ ಈ ವಿಚಾರವಾಗಿ ಬರೆದಿರುವ ಗ್ರಂಥಾಂತರಗಳನ್ನು ಓದಿಯೇ ಈ ವಿಚಾರವನ್ನು ತಿಳಿದುಕೊಳ್ಳಬೇಕಾಗಿರುತ್ತೆ.

೧೦. ಈ ಪ್ರಪಂಚದಲ್ಲಿ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಪ್ರಾಣಿ ಗಳೆಲ್ಲವೂ ಪರಲೋಕ ನಿಬಂಧನೆಯಿಂದ ಕಟ್ಟಲ್ಪಟ್ಟೇ ಇರುತ್ತವೆ. ಹೀಗೆ ದೇವರ ಸಂಕಲ್ಪವೇ ಇರುವಾಗ ಪರಲೋಕದ ನಿಬಂಧನೆಯ ವಿಷಯದಲ್ಲಿ ನಿರಪೇಕ್ಷನಾಗಿರುವ ನಾಸ್ತಿಕನ ಗತಿ ಏನಾಗುವುದೋ, ಎಂತಾಗುವುದೋ ನಾನು ಬೇರೇ ಹೇಳಲಾರೆ.

೧೧. ಆದರೆ ಅಂತಹ ಅಧಮರ ವಿಷಯವನ್ನಿಷ್ಟುಮಟ್ಟಿಗೆ ಹೇಳಬಹುದು. ಅದೇನೆಂದರೆ ಲೋಕದಲ್ಲಿ ಪಾಪ (ತಪ್ಪು) ಮಾಡುವವರೂ ಅದಕ್ಕಿಂತ ಹೆಚ್ಚಾಗಿ ಮಹಾ ಪಾಪಗಳನ್ನು ಮಾಡುವವರೂ ಇರುತ್ತಾರೆಂದು ಎಲ್ಲರಿಗೂ ತಿಳಿದೇ ಇದೆಯಷ್ಟೆ. ಇವರೆಲ್ಲರಿಗಿಂತಲೂ ನಾಸ್ತಿಕನೆಂಬುವನು ಮೀರಿದ ಪಾಪಿಯೆಂಬುದನ್ನು ತಿಳಿದುಕೊಂಡರೆ ಸಾಕು. ಆದ್ದರಿಂದ ಇಂತಹ ನಾಸ್ತಿಕನನ್ನು ಮಾತ್ರ ಮಹಾರಾಜನು ಹತ್ತಿರ ಸೇರಿಸ ಕೂಡದು. ಅಂತಹ ಮನುಷ್ಯನನ್ನು ವರ್ಜ್ಯಮಾಡಿಬಿಡಬೇಕು.

**ಆಸ್ತಿಕಾನಾಂ ಚ ಸಾಧೂನಾಂ ಸಂಗ್ರಹಃ ಶಸ್ಯತೇ ಸದಾ ।**
**ತೇ ಸಹಾಯಾ ನರೇಂದ್ರಾಣಾಂ ತಥಾ ಯೇ ರಾಮ ಪಂಡಿತಾಃ ॥ ೧೨ ॥**

**ನ ಪಂಡಿತೋ ಮತೋ ರಾಮ ಬಹುಪುಸ್ತಕಧಾರಣಾತ್ ।**
**ಪರಲೋಕಭಯಂ ಯಸ್ಯ ತಮಾಹುಃ ಪಂಡಿತಂ ಬುಧಾಃ ॥ ೧೩ ॥**

**ಅಗ್ನಿಹೋತ್ರಫಲಾ ವೇದಾ ದತ್ತಭುಕ್ತಫಲಂ ಧನಮ್ ।**
**ರತಿಪುತ್ರಫಲಾ ದಾರಾಃ ಶೀಲವೃತ್ತಫಲಂ ಶ್ರುತಮ್ ॥ ೧೪ ॥**

---

೧೨. ಮಹಾರಾಜನು ತನ್ನ ಅರಮನೆಯಲ್ಲಿ ಮತ್ತು ಸೈನ್ಯದಲ್ಲಿ ಸಾಧುಗಳಾಗಿಯೂ ಆಸ್ತಿಕರಾಗಿಯೂ ಇರುವಂತಹ ಜನರನ್ನೇ ಆರಿಸಿ ಇಟ್ಟುಕೊಳ್ಳಬೇಕು. ಇವರುಗಳು ಮಹಾರಾಜನಿಗೆ ವಿಶೇಷವಾದ ಸಹಾಯವನ್ನು ಮಾಡಲು ಶಕ್ತರಾಗಿರುತ್ತಾರೆ. ಅದರಲ್ಲೂ ಆಸ್ಥಾನ ಪಂಡಿತರಂತೂ ರಾಜನ ಹಿತವನ್ನೇ ಕೋರತಕ್ಕವರಾಗಿರುತ್ತಾರೆ.

೧೩. ಪಂಡಿತರೆಂಬ ಶಬ್ದಾರ್ಥವನ್ನು ಇಲ್ಲಿ ಸ್ವಲ್ಪ ವಿಮರ್ಶೆ ಮಾಡುವೆನು. ಪಂಡಿತನೆಂದರೆ ಮನೆಯಲ್ಲೂ, ಬೀರುಗಳಲ್ಲೂ ರಾಶಿಗಟ್ಟಲೆ ಪುಸ್ತಕಗಳನ್ನು ಸಂಗ್ರಹಿಸಿರುವವನಲ್ಲ. ಯಾವನು ಪರಲೋಕಭಯದಿಂದ ಕೂಡಿದವನಾಗಿ ಕಾರ್ಯಗಳನ್ನು ಮಾಡುವವನೋ, ಅವನಿಗೆ ಮಾತ್ರವೇ ಪಂಡಿತನೆಂಬ ಹೆಸರು ಸಲ್ಲುವುದು.

೧೪. ಈ ಲೋಕದಲ್ಲಿ ವೇದವೃಕ್ಷಗಳು ಅಗ್ನಿಹೋತ್ರವೆಂಬ ಫಲವನ್ನು ಬಿಟ್ಟಿರುವುವು. ಧನವೃಕ್ಷಗಳು ದತ್ತಭುಕ್ತ ಫಲವನ್ನು ಹೊಂದಿರುವುವು. ಅಂದರೆ ಹಣವಿರುವವನು ತಾನೂ ಅನುಭವಿಸಿ ಇತರರಿಗೂ ದಾನಮಾಡಬೇಕಾದುದು ಅವಶ್ಯ ಕರ್ತವ್ಯವೆಂದು ತಿಳಿಯಬೇಕು. ಹೆಂಡತಿಯರು, ರತಿಪುತ್ರರೆಂಬ ಎರಡು ಫಲವನ್ನು ಕೊಟ್ಟಿರುವರು. ವಿದ್ಯೆಯೆಂಬುದು ಶೀಲವೃತ್ತಗಳೆಂಬ ಎರಡು ಫಲವೇ ಪ್ರಯೋಜನವಾಗಿಯುಳ್ಳದ್ದೆಂಬುದನ್ನು ಸಕಲರೂ ನೆನಪಿನಲ್ಲಿಟ್ಟು ಈ ನೀತಿಶ್ಲೋಕದಂತೆ ನಡೆದುಕೊಳ್ಳಬೇಕು.

**ಶೀಲೋಪಪನ್ನೋ ನೃಪತಿಃ ಸಹಾಯೈಃ**
**ಶರೈಸ್ತಥಾಲ್ಪೈರಪಿ ಸಂಪ್ರಯುಕ್ತೈಃ ।**
**ಪ್ರಭೂತ ನಾಗಾಶ್ವ ಬಲೋತ್ಕಟಾನಾಂ**
**ಕರೋತ್ಯರೀಣಾಂ ಕದನಂ ರಣೇಷು　　　॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪುರುಷ ಪ್ರಶಂಸಾನಾಮ ಏಕಪಂಚಾಶತ್ತಮೋಽಧ್ಯಾಯಃ**

---

೧೫. ಸಚ್ಛೀಲಸಂಪನ್ನನಾದ ಮಹಾರಾಜನು ಸ್ವಲ್ಪವೇ ಶರ (ಬಾಣ) ಸಹಾಯಸಂಪನ್ನನಾಗಿದ್ದಾಗ್ಯೂ ಮಹಾವೇಗಶಾಲಿಗಳಾದ ಕುದುರೆಗಳಿಂದಲೂ, ಮಹಾಬಲಶಾಲಿಗಳಾದ ಆನೆಗಳಿಂದಲೂ ಕೂಡಿದವನಾಗಿದ್ದರೆ ಭಯಂಕರವಾದ ಯುದ್ಧವು ಒದಗಿದಾಗ್ಯೂ ಸಹ ಶತ್ರುಗಳೆದುರಿಗೆ ನಿಂತು ಬಹಳ ಧೈರ್ಯದಿಂದ ಯುದ್ಧಮಾಡಬಲ್ಲನು, ಕೇಳಿದೆಯಾ! ಪರಶುರಾಮ!! ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ.

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಪುರುಷ ಪ್ರಶಂಸೆಯೆಂಬ ಹೆಸರಿನ
ಐವತ್ತೊಂದನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ದ್ವಿಪಂಚಾಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

**ಅತಃ ಪರಂ ಪ್ರವಕ್ಷ್ಯಾಮಿ ನರಾಣಾಂ ತೇ ಚಿಕಿತ್ಸಿತಮ್ ।**
**ತತ್ರಾಪ್ಯಾದೌ ತಥಾ ಸ್ತ್ರೀಣಾಂ ಯನ್ಮೂಲಂ ಪ್ರಜನಂ ಯತಃ । ॥ ೧ ॥**

**ಮಹಾಜಂಬೂದ್ವಯಂ ರೋಧ್ರಂ ಮಧುಕಂ ಮಧುಶರ್ಕರಾ ।**
**ತಣ್ಡುಲೋದಕಸಂಯುಕ್ತಂ ಶೋಣಿತಪ್ರದರೇ ಪಿಬೇತ್ ॥ ೨ ॥**

---

### ಐವತ್ತೆರಡನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಇನ್ನು ಮುಂದೆ ಮನುಷ್ಯ (ಪುರುಷ) ರಿಗೆ ಮಾಡಬೇಕಾದ ಚಿಕಿತ್ಸೆಯಕ್ರಮವನ್ನು ಹೇಳುತ್ತೇನೆ, ಕೇಳು. ಈ ಚಿಕಿತ್ಸೆಯನ್ನು ಹೇಳುವುದಕ್ಕಿಂತಲೂ ಮುಂಚೆ ಸ್ತ್ರೀಯರಿಗೆ ವಿಶೇಷವಾಗಿ ಸಂಭವಿಸುವ ಯೋನಿದೋಷ ಗಳ ಸಂಬಂಧವಾದ ಚಿಕಿತ್ಸೆಯನ್ನು ವಿವರಿಸುತ್ತೇನೆ. ಏಕೆಂದರೆ ಮನುಷ್ಯರ ಉತ್ಪತ್ತಿಗೆ (ಪ್ರಪಂಚೋತ್ಪತ್ತಿಗೆ) ಯೋನಿಯೇ ಮೂಲವಾದುದು. ನಾನಾಯೋನಿಷು ಜನ್ಮಮೃತೀ ಯಾತೋ ದೇಹೀ ಎಂದು ಋಷಿವಚನವಿದೆ. ಈಗ ನಡೆಯುತ್ತಿರುವುದೂ ಸಹ ಹೀಗೆಯೇ ತಾನೆ.

೨. ಹೆಂಗಸರಿಗೆ ಸೀರೆರೋಗವೆಂಬ ಖಾಯಿಲೆಯು ಬರುವ ವಿಷಯವು ಎಲ್ಲರಿಗೂ ಗೊತ್ತೇ ಇದೆ. ಇದಕ್ಕೆ ಶೋಣಿತಪ್ರದರವೆಂದು ಹೆಸರು. ಬಿಳುಪು ರಕ್ತ (ಶೋಣಿತವು) ವು ವಿಶೇಷವಾಗಿ ಸ್ರಾವವಾಗುವುದೇ ಇದರ ಲಕ್ಷಣವು. ಇದು ಪ್ರಾಪ್ತವಾದ ಸಂದರ್ಭದಲ್ಲಿ ನಾಯಿನೇರಳೆ, ಜಂಬುನೇರಳೆಗಳ ರಸ, ಲೋಧ್ರದರಸ, ಅತಿಮಧುರದಪುಡಿ, ಜೇನುತುಪ್ಪ, ಸಕ್ಕರೆ ಇವುಗಳನ್ನು ಕಲಗಚ್ಚಿನಲ್ಲಿ ಮಿಶ್ರಮಾಡಿ ಕುಡಿಸಿದರೆ ಈ ಪ್ರದರರೋಗವು ವಾಸಿಯಾಗುವುದು.

**ಊರ್ಧ್ವಂ ಸಂವತ್ಸರಾನ್ನಾರೀಂ ರಕ್ತಗುಲ್ಮೇ ವಿರೇಚಯೇತ್ ।**
**ಸ್ನಿಗ್ಧಸ್ವಿನ್ನಶರೀರಾಂಚ ರಾಮ ತೀಕ್ಷ್ಣೈರ್ವಿರೇಚನೈಃ ॥ ೩ ॥**

**ಜ್ವರೇಣ ಚ ಪಲಾಶಸ್ಯ ಸಂಸಿದ್ಧಂ ಯಾವಕಂ ಪಿಬೇತ್ ।**
**ಅಗ್ನಿಸನ್ಧುಕ್ಷಣಂ ಚಾಸ್ಯಾ ಸ್ತಥಾ ಕಾರ್ಯಂ ಪ್ರಯತ್ನತಃ ॥ ೪ ॥**

**ಪ್ರಸ್ಥಂ ವೃಷಕಮೂಲಸ್ಯ ತೈಲಂ ಪ್ರಸ್ಥಂ ವಿಪಾಚಯೇತ್ ।**
**ಯೋನೀನಾಂ ಪರಿಕೋಪೇಷು ವೇದನಾಮುಪಕರ್ಷತಿ ॥ ೫ ॥**

---

೩. ಹೆಂಗಸರಿಗೆ ರಕ್ತಗುಲ್ಮವು ಪ್ರಾಪ್ತವಾದರೆ ಕೂಡಲೇ ಭೇದಿಗೆ ಕೊಡಬಾರದು. ರಕ್ತಗುಲ್ಮ (ರಕ್ತದಗೆಡ್ಡೆ) ದಿಂದ ಹುಟ್ಟಿದ ಪ್ರದರವೇ ಬಸರಿಯೆಂದು ಸಂದೇಹಬರುವುದೂ ಉಂಟು. ಒಂದು ವೇಳೆ ಅದೇ ಸಮಯದಲ್ಲಿ ಗರ್ಭಿಣಿಯಾಗಿದ್ದರೂ ಇರಬಹುದಾದ್ದರಿಂದ ದುಡುಕಿ ಭೇದಿಗೆ ಕೊಡುವುದು ಅಪಾಯಕರವಾದ್ದರಿಂದ ಒಂದು ವರ್ಷದಮೇಲೆ ವಿರೇಚನೆಗೆ ಕೊಡಬೇಕು. ಈ ರಕ್ತಗುಲ್ಮವು ಬಂದರೆ ಮುಖ ಮಿಂಚುವುದು, ಬಳಲುವುದು, ಬೆವರುವುದೇ ಮುಂತಾದ ದುರ್ಲಕ್ಷಣಗಳಾಗುವುವು. ವಿರೇಚನೆಯಿಂದ ಈ ದೋಷಗಳು ಪರಿಹಾರವಾಗುವುವು.

೪. ರಕ್ತಗುಲ್ಮರೋಗವಿದ್ದಾಗ ಜ್ವರ ಬರುವುದೂ ಉಂಟು. ಹಾಗೆ ಜ್ವರ ಬಂದ ಸಮಯದಲ್ಲಿ ಮುತ್ತುಗದ ಬೇರನ್ನು ಬೆಂಕಿಯಲ್ಲಿ ಬೂದಿಮಾಡಿ (ಮುತ್ತುಗದ ಬೇರಿನ ಬೂದಿ) ಯವೇ ಗಂಜಿಯಲ್ಲಿ ಬೆರಸಿ ಕುಡಿಸಿದರೆ ಜ್ವರವು ಗುಣವಾಗುತ್ತದೆ.

೫. ಆಡುಸೋಗೆ ಬೇರಿನ ಪುಡಿ ಒಂದು ಸೇರು. ಒಂದು ಸೇರು ಅಚ್ಚೆಳ್ಳೆಣ್ಣೆ ಬೆರಸಿ ಆ ತೈಲವನ್ನು ಬೆಂಕಿಯ ಉರಿಯಲ್ಲಿ ಕಾಸಿ ಹದವಾಗಿ ಪಾಕಮಾಡಿ ಆ ತೈಲ ಪಾಕವನ್ನು ಶೋಧಿಸಿ, ಯೋನಿಪ್ರಕೋಪ (ಯೋನಿಶೂಲೆ) ವಾದ ಸಮಯದಲ್ಲಿ ಆ ತೈಲವನ್ನು ಯೋನಿಗೆ ಲೇಪನಮಾಡುತ್ತಾ (ಧರಿಸುತ್ತಾ) ಬಂದರೆ ನೋವು ಪರಿಹಾರವಾಗುವುದು.

ಗರ್ಭಸ್ರಾವೇ ಪ್ರಸೂತಾಯಾಂ ಋತೌ ಸ್ತ್ರೀಣಾಂತು ರಕ್ತಜಂ ।
ಗರ್ಭ ಚಿಹ್ನಯುತಂ ಗುಲ್ಮ ದಾಹಂ ಶೂಲಾನ್ವಿತಂ ಭವೇತ್ ॥

ಇಂತಹ ಲಕ್ಷಣಗಳೇ ರಕ್ತಗುಲ್ಮರೋಗದ ಸೂಚನೆಗಳು.

ಟಿಪ್ಪಣಿ:—ಹೆಂಗಸರ ಜನನೇಂದ್ರಿಯವು ಶುದ್ಧವಲ್ಲದೇ ಹೋದರೆ ಮುಂದೆ ಹುಟ್ಟುವ ಸಂತತಿಯು ರೋಗಗ್ರಸ್ತವಾಗಿಯೇ ಹುಟ್ಟುವ ಸಂಭವವಿರುವುದರಿಂದ ಈ ಅಧ್ಯಾಯದಲ್ಲಿ ಪ್ರಪಂಚೋತ್ಪತ್ತಿಗೆ ಮೂಲಕಾರಣರಾದ ಸ್ತ್ರೀಯರ ಪ್ರಜನನೇಂದ್ರಿಯ ಶುದ್ಧಿಗೋಸ್ಕರ ಯೋನಿಶೂಲೆಯ ಚಿಕಿತ್ಸೆಯನ್ನು ಒಂದೆರಡು ಶ್ಲೋಕಗಳಲ್ಲಿ ಮಾತ್ರ ವಿವರಿಸಿದ್ದಾರೆ. ಇದೇ ಶೂಲದ ಲಕ್ಷಣಗಳನ್ನು ಅದರ ಬಾಧಾನಿವೃತ್ತ್ಯುಪಾಯವನ್ನಾಗಿ ಅನೇಕ ವೈದ್ಯಶಾಸ್ತ್ರಗಳಲ್ಲಿ ನಾನಾ ವಿಧವಾಗಿ ಬರೆದು ಆಯುರ್ವೇದಾಚಾರ್ಯರನೇಕರು ಗ್ರಂಥರಾಶಿಗಳನ್ನು ಬರೆದಿರುತ್ತಾರೆ. ಒಟ್ಟಿನಮೇಲೆ ಎಲ್ಲಾ ಚಿಕಿತ್ಸೆಗಳು ಸ್ವಲ್ಪ ಹೆಚ್ಚುಕಡಮೆಯಾಗಿ ಒಂದೇ ವಿಧವಾದ ಆರೋಗ್ಯಭಾಗ್ಯಗಳನ್ನು ಕೊಡತಕ್ಕವಾಗಿವೆ. ಈ ಪ್ರಸಕ್ತ ಪುರಾಣದಲ್ಲಿ ವೈದ್ಯ ಶಾಸ್ತ್ರದ ಸಾರವನ್ನು ಕೆಲವುಅಧ್ಯಾಯಗಳಲ್ಲಿ ಸಂಪೂರ್ಣವಾಗಿ ವಿವರಿಸಿರುವರು. ಸುತರಾಂ ವೈದ್ಯಶಾಸ್ತ್ರ ಪರಿಚಯವೇ ಇಲ್ಲದ ನಾನು ಈ ಶಾಸ್ತ್ರರಹಸ್ಯವನ್ನು ಬರೆಯುತ್ತಿರುವುದೆಂದರೆ ಸೂರ್ಯನ ಮುಂದೆ ಸೊಡರಿನ ದೀಪವನ್ನು ಹಚ್ಚಿಸುವ ಮನುಷ್ಯನ ಮಾದರಿ, ಹಾಸ್ಯಾಸ್ಪದನಾದೇನೋ ಎಂಬ ಭೀತಿಯಿಂದ ಧನ್ವಂತರಿಗೆ ಮೊದಲು ನಮಸ್ಕರಿಸಿ ಇದರ ಪ್ರವರ್ತಕರಾದ ಭರದ್ವಾಜ, ಆತ್ರೇಯ, ಅಗ್ನಿವೇಶರೇ ಮುಂತಾದ ಮಹಾತೇಜಸ್ವಿಗಳಾದ ಸೂರ್ಯಸಮಾನ ತೇಜೋನಿಧಿಗಳಾದವರ ಮುಂದೆ ನನ್ನ ಭಕ್ತಿಯೆಂಬ ಸೊಡರು ದೀಪವನ್ನು ಹಚ್ಚಿಸಿ ಈ ಶಾಸ್ತ್ರದ ಟಿಪ್ಪಣಿಗೆ ಕೈಹಾಕುವೆನು. ಇದರಲ್ಲಿ ತೋರಿ ಬರುವ .ಅಪರಾಧ ಪರಂಪರೆಗಳನ್ನೆಲ್ಲಾ ಪರೋಕ್ಷದಲ್ಲಿರುವ ಸಕಲಾಯುರ್ವೇದಾಚಾರ್ಯರೂ ಆಸೇತುಹಿಮಾಚಲಪರ್ಯಂತವಾಗಿ ಈ ಶಾಸ್ತ್ರದಲ್ಲಿ ಪರಾಕಾಷ್ಠತೆಯನ್ನು ಪಡೆದಿರುವ ಆಯುರ್ವೇದ ಪಂಡಿತರೂ ಕ್ಷಮಿಸಿ ಇದರಲ್ಲೇನಾದರೂ ಆಕ್ಷೇಪಣೀಯಾಂಶಗಳಿದ್ದರೆ ದಯಮಾಡಿ ತಿದ್ದಿ ಅದನ್ನು ನನಗೆ ತಿಳಿಯಪಡಿಸಬೇಕೆಂಬುದಾಗಿ ವಿನಯಪೂರ್ವಕವಾಗಿ ಕೈ ಜೋಡಿಸಿ ಬೇಡಿಕೊಳ್ಳುತ್ತೇನೆ. ಈ ಆಯುರ್ವೇದ ಶಾಸ್ತ್ರದ ವಿಚಾರವಾಗಿ ಈ ಮಹಾಪುರಾಣದಲ್ಲಿ ಹೇಳಿರುವ ಅಧ್ಯಾಯಗಳು ಮುಗಿಯುವವರೆಗೂ ಈ ಶಾಸ್ತ್ರದ ಸಾರವನ್ನು ಕನ್ನಡನಾಡಿನಲ್ಲಿ ಈಗ ನಾನು ಬರೆದಿರುವ ತಿಳಿಗನ್ನಡದ ಟಿಪ್ಪಣಿಯನ್ನು ನೋಡುವವರೆಲ್ಲರೂ ಲಕ್ಷ್ಯವಿಟ್ಟು ಪಠನೆ ಮಾಡಿದರೆ ಅವರಿಗೆ ಸ್ವಲ್ಪವಾದರೂ ಆಯುರ್ವೇದದ ಪರಿಚಯವುಂಟಾಗಿ ತನ್ಮೂಲಕ ಏನಾದರೂ ಲೋಕೋಪಕಾರವಾಗುವುದಾದರೆ ಆಗ ನನ್ನ ಈ ಮನುಷ್ಯಜನ್ಮವೂ ಲೇಖನ ಕಾರ್ಯವೂ ಸಾರ್ಥಕವಾಗುವುದೆಂದು ಭಾವಿಸುತ್ತೇನೆ.

ಇನ್ನು ಪ್ರಸಕ್ತ ವಿಚಾರವನ್ನು ಪರಾಂಬರಿಸಿರಿ. ಪ್ರಜನನೇಂದ್ರಿಯ ಬಾಧಾ ನಿವೃತ್ತಿಗಾಗಿ ಲೋಲಂಬರಾಜನೆಂಬ ಬಲು ರಸಿಕನಾದ ವೈದ್ಯಕವಿ ಸಾರ್ವಭೌಮನು ಹೇಳಿರುವುದೇನೆಂದರೆ :—

ಪಿಚುಮುಂದರಸೇನ ಮಿಶ್ರಿತೈಃ ಪಿಚುಮುಂದಾನಿಲ ಶತ್ರು ಬೀಜ ಕೃತಾಂ ।
ಘಟಿಕಾಂ ವಟಿಕಾಂ ಭಗಾಂತರೇ ಭಗಶೂಲ ಪ್ರಶಮಾಯ ಧಾರಯೇತ್ ॥೧॥

ತರುಣ್ಯುತ್ತರಣೀಮೂಲಂ ಛಾಗೀಸರ್ಪಿಸ್ಸಮನ್ವಿತಂ !
ಶಿವಶಸ್ತ್ರಾಭಿಧಾಂ ಬಾಧಾಂ ಯೋನಿಸ್ಥಾಂ ಹಂತಿ ಸತ್ವರಂ ॥೨॥

ಕನ್ನಡ ತಾತ್ಪರ್ಯ:—ಕಡವರಮರದ ಸೊಪ್ಪಿನ ರಸದಿಂದ ಬೆರಸಲ್ಪಟ್ಟ ಬೇವು. ಹರಳು ಇವುಗಳ ಬೀಜದ ಪುಡಿಯಿಂದ ಮಾಡಲ್ಪಟ್ಟ ಗುಳಿಗೆಗಳನ್ನು ಯೋನಿಯೊಳಗೆ ಇಟ್ಟುಕೊಳ್ಳಬೇಕು. ಆಡಿನ ತುಪ್ಪದಲ್ಲಿ ಕಲಸಿದ ಉತ್ತರಣೆಬೇರಿನ ಪುಡಿಯು (ಚೂರ್ಣವು) ಯೋನಿಯೊಳಗೆ ಬಾಧೆಯನ್ನುಂಟುಮಾಡುತ್ತಿರುವ ಶಿವಶಸ್ತ್ರ ಶೂಲೆ ಎಂಬ ಹೆಸರಿನ ಬಾಧೆಯನ್ನು ನಿವಾರಣೆ ಮಾಡಲು ಸಾಮರ್ಥ್ಯವನ್ನು ಹೊಂದಿರುವುದು.

ಮಾದರಿಗೋಸ್ಕರ ಈ ಶ್ಲೋಕಗಳನ್ನು ಬರೆದಿರುತ್ತೇನೆ. ಇಂತಹ ಅನೇಕ ಚಿಕಿತ್ಸೆಗಳನ್ನು ಲೋಲಂಬರಾಜನು ಬಹು ಸರಸವಾದ ಶ್ಲೋಗಳನ್ನೊಳಗೊಂಡ ತನ್ನ ವೈದ್ಯಜೀವನವೆಂಬ ಗ್ರಂಥದಲ್ಲಿ ಬಹು ಮನೋಹರವಾದ ಕಾವ್ಯರೂಪದಲ್ಲಿ ಬರೆದಿರುವನು. ಈ ಸಂಸ್ಕೃತಗ್ರಂಥವು ಮರಾಠಿ ಬಂಗಾಳಿ ಹಿಂದಿ ಮುಂತಾದ ಅನೇಕ ಭಾಷೆಗಳಲ್ಲಿ ಅನುವಾದ ಮಾಡಲ್ಪಟ್ಟಿರುವುದು. ಇಂತಹ ಸರಸವೈದ್ಯ ಕಾವ್ಯವನ್ನು ಈಗ್ಗೆ ಸುಮಾರು ೭೦ ವರ್ಷಗಳ ಹಿಂದೆ ಆಸ್ಥಾನಪಂಡಿತರಾಗಿದ್ದ ಅಗರದ ಪುಟ್ಟಶಾಮಿ ಪಂಡಿತರೆಂಬ ವೈದ್ಯಶಾಸ್ತ್ರಮಹೋಪಾಧ್ಯಾಯರು ತಿಳಿಗನ್ನಡದಲ್ಲಿ ಅನುವಾದ ಮಾಡಿರುವರು. ಅದು ಮುದ್ರಣವಾಗಿ ಕನ್ನಡನಾಡಿನ ಮುಖ್ಯ ನಗರವಾದ ಬೆಂಗಳೂರಿನಲ್ಲಿ ಪ್ರಕಟವಾಗಿರುವುದು. ಆಯುರ್ವೇದದ ಮೂಲಾಚಾರ್ಯರು ಭರದ್ವಾಜರು. ಲೋಲಂಬ ರಾಜನ ಕಾವ್ಯವನ್ನು ಅನುವಾದ ಮಾಡಿರುವವರೂ, ಭರದ್ವಾಜವಂಶೋತ್ಪನ್ನರು. ಈಗ ಟಿಪ್ಪಣಿಯನ್ನು ಬರೆಯುತ್ತಿರುವವನೂ ಭರದ್ವಾಜಋಷಿಗಳ ಗೋತ್ರಜನಾದುದರಿಂದ ಪೂರ್ವಾಚಾರ್ಯರ ಅಭಿಪ್ರಾಯಕ್ಕೆ ಮೀರದ ಈ ಟಿಪ್ಪಣಿಯು ಸರ್ವಗ್ರಾಹ್ಯವಾದುದೆಂದು ಸರ್ವರೂ ಧಾರಾಳವಾಗಿ ಭಾವಿಸಬಹುದು.

ಈ ವೈದ್ಯಜೀವನದಲ್ಲಿ ಪುರುಷಚಿಕಿತ್ಸೆ ನಾರೀಚಿಕಿತ್ಸೆ ಇವೆರಡು ಮಾತ್ರವೇ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುವು. ಈಗ ಪ್ರಸಕ್ತವಾಗಿರುವ ಮಹಾ ವಿಷ್ಣು ಧರ್ಮೋತ್ತರದ ಪುರಾಣದಲ್ಲಾದರೋ ಗ್ರಹಚಿಕಿತ್ಸೆ ಗೋಚಿಕಿತ್ಸೆ, ಅಶ್ವಚಿಕಿತ್ಸೆ, ಗಜಚಿಕಿತ್ಸೆ, ಪುರುಷಚಿಕಿತ್ಸೆ, ನಾರೀಚಿಕಿತ್ಸೆ, ಬಾಲತಂತ್ರ (ಶಿಶುಚಿಕಿತ್ಸೆ)ವೇ ಮೊದಲಾದ

**ಸೌರಾಷ್ಟ್ರೀ ರೋಚನಾ ರೋಧ್ರಂ ಮಧೂಕಂ ತ್ರಿಫಲಾ ಮಧು ।**
**ಭದ್ರಮುಸ್ತಾನಿ ಚೂರ್ಣಾನಿ ವಾಜೀಕರಣಮುತ್ತಮಂ ॥ ೬ ॥**

---

ಬಹಳ ಭಾಗಗಳಿರುವವು. ಈ ಚಿಕಿತ್ಸಾ ಸಂಬಂಧವಾದ ಅನೇಕ ಗ್ರಂಥಗಳು ಓರಿಯಂಟಲ್ ಲೈಬ್ರರಿಯಲ್ಲಿಯೂ ಶ್ರೀಮನ್ಮಹಾರಾಜರವರ ಸರಸ್ವತೀ ಪ್ರಾಸಾದಿಕ ಗೀರ್ವಾಣಪಾಠಶಾಲೆಯಲ್ಲಿರುವ ಅರಮನೆ ಸರಸ್ವತೀ ಭಂಡಾರದಲ್ಲಿಯೂ ಅಧಿಕ ಪ್ರಮಾಣದಲ್ಲಿ ಸಿಕ್ಕುವುವು. ಈ ಸಕಲ ಗ್ರಂಥಗಳನ್ನೂ ನೋಡುವುದಕ್ಕಾಗಲೀ ಸಕಲ ಶಾಸ್ತ್ರಗಳನ್ನೂ ವ್ಯಾಸಂಗಮಾಡುವುದಕ್ಕಾಗಲೀ ನಮಗೆ ಆಯುಸ್ಸೇ ಸಾಲದೇ ಇರುವಾಗ ಎಲ್ಲಾ ಶಾಸ್ತ್ರರಹಸ್ಯವನ್ನೂ ಬರೆಯುವ ಶಕ್ತಿ ನಮಗೆಲ್ಲಿ ಬರಬೇಕು. ಇದಕ್ಕಾಗಿಯೇ ಒಬ್ಬ ಮಹಾಕವಿಯು ಹೀಗೆ ಹೇಳಿರುವನು.

ಅನೇಕಶಾಸ್ತ್ರಂ ಬಹುವೇದಿತವ್ಯಂ ಅಲ್ಪಶ್ಚಕಾಲೋ ಬಹವಶ್ಚ ವಿಘ್ನಾಃ ।
ಯತ್ಸಾರಭೂತಂ ತದುಪಾಸಿತವ್ಯಂ ಹಂಸೋ ಯಥಾ ಕ್ಷೀರಮಿವಾಂಬುರಾಶೌ ॥

ಅರ್ಥ: ತಿಳಿದುಕೊಳ್ಳಬೇಕಾದ ಅನೇಕ ಶಾಸ್ತ್ರಗಳಿವೆ. ನಮಗಿರುವ ಆಯುಃ ಪ್ರಮಾಣವಾದರೋ ಎಲ್ಲೋ ಸ್ವಲ್ಪ. ವಿಘ್ನಗಳಾದರೋ ಬಹಳ. ಆದುದರಿಂದ ಹಂಸಪಕ್ಷಿಯು ಹಾಲುಬೆರದ ನೀರಿನಲ್ಲಿರುವ ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ಬಿಟ್ಟುಬಿಡುವಂತೆ ತಪ್ಪುಗಳನ್ನೆಣಿಸದೇ ಮುಖ್ಯವಾದ ಗುಣಾಂಶವನ್ನು ಸ್ವೀಕರಿಸಬೇಕು. ಈ ಕವಿಯು ಹೇಳಿದ ಶ್ಲೋಕವನ್ನೇ ನಾನೂ ಸಹ ಪುನಃ ಹಾಡಿ ಪ್ರಸಕ್ತ ವಿಷಯದ ಕಡೆಗೆ ತಿರುಗಬಹುದಷ್ಟೆ ?

೬. ಈ ರೀತಿ ರಕ್ತಗುಲ್ಮ ಪ್ರದರಾದಿ ರೋಗಗಳು ಗುಣವಾದ ಬಳಿಕ ಹೆಂಗಸರ ದೇಹಪುಷ್ಟಿಯಾಗುವುದಕ್ಕೂ ವೀರ್ಯವೃದ್ಧಿಯಾಗುವುದಕ್ಕೂ ಸಹ ಇದರ ಕೆಳಗೆ ಬರೆದ ಚೂರ್ಣವನ್ನು ಕೊಡಬೇಕು. ಗೋಪೀಚಂದನ, ಗೋರೋಚನ, ಲೋಧ್ರ, ಹಿಪ್ಪೆಹೂವು, ತಾರೇಕಾಯಿ, ನೆಲ್ಲೀಕಾಯಿ, ಅಳಲೇಕಾಯಿ, ಕೊನ್ನಾರಿಗೆಡ್ಡೆಗಳನ್ನು ಕುಟ್ಟಿ ಪುಡಿಮಾಡಿ (ಚೂರ್ಣಮಾಡಿ) ಜೇನುತುಪ್ಪದಲ್ಲಿ ಕಲಸಿ ಆ ಚೂರ್ಣವನ್ನು ಸೇವಿಸುತ್ತಾ ಬಂದರೇ ವೀರ್ಯಬಲಗಳು ವೃದ್ಧಿಯಾಗುವುವು.

**ಅಶ್ವಗಂಧಾವಿಪಕ್ವೇನ ವರಾಹಸ್ಯ ತು ಮೇದಸಾ ।**
**ಗ್ರಂಥೀಕರಣಮಭ್ಯಂಗಂ ಯೋಷಿತಾಂ ಪರಿಕೀರ್ತಿತಂ　　॥ ೭ ॥**

**ಏಕಮಾಮಲಕಂ ಕಾಲೇ ಸಲಿಲಾಂಜಲಿನಾ ಪಿಬೇತ್ ।**
**ಸೃಷ್ಟಂ ಕೃಷ್ಣಾಯಸೇ ಭಾಣ್ಡೇ ತೇನ ಶಾತೋದರೀ ಭವೇತ್　　॥ ೮ ॥**

**ತ್ರಿಫಲಾಂ ಚಿತ್ರಕಂ ಶುಂಠೀಂ ಮಧುನಾ ತು ಲಿಹೇತ್ಸದಾ ।**
**ಸ್ಥೂಲಾನಾಂ ವರನಾರೀಣಾಂ ಕೃಶೀಕರಣಮುತ್ತಮಂ　　॥ ೯ ॥**

**ಅಶ್ವಗಂಧಾಂ ಪಯಸ್ಯಾಂ ಚ ಸಂಸೃಜ್ಯ ಪಯಸಾ ಪಿಬೇತ್ ।**
**ಮಾಸಮೇತತ್ಪ್ರಯುಞ್ಜಾನಾ ಕೃಶಾ ಭವತಿ ಮಾಂಸಲಾ　　॥ ೧೦ ॥**

---

೭. ಹಿರೀಮದ್ದಿನ ಕಷಾಯಕ್ಕೆ ಹಂದಿಯಕೊಬ್ಬು ಬೆರೆಸಿ ಪಾಕಮಾಡಿ ಇಂಗಿಸಿ ಅದನ್ನು ಹಚ್ಚಿಕೊಂಡು ಅಭ್ಯಂಗನಮಾಡಿದರೆ ಹೆಂಗಸರಿಗೆ ಸಕಲ ರೋಗಗಳೂ ಪರಿಹಾರವಾಗುವುವು.

೮. ಹೆಚ್ಚಾಗಿ ಮೈಬಂದು ಬಹು ಸ್ಥೂಲವಾಗಿರುವ ಹೆಂಗಸು ಒಂದು ಬೊಗಸೇ ನೀರಿಗೆ ಒಂದು ಬೊಗಸೇ ನೆಲ್ಲೀಕಾಯಿ ರಸವನ್ನು ಬೆರಸಿ ಕಬ್ಬಿಣದ ಬಾಂಡ್ಲೆಯಲ್ಲಿ ಚೆನ್ನಾಗಿ ಕುದಿಸಿ, ಆರಿಸಿ ಅದನ್ನು ಕುಡಿಯುತ್ತಾ ಬಂದರೆ ಸಮೀಚೀನ (ಬಳುಕುತ್ತಿರುವ) ವಾದ ಶರೀರವುಳ್ಳವಳಾಗುವಳು (ಶಾತೋದರೀ)

೯. ಸ್ಥೂಲದೇಹವುಳ್ಳ ಹೆಂಗಸರು ತಾರೇಕಾಯಿ ನೆಲ್ಲೀಕಾಯಿ ಅಳಲೇಕಾಯಿ, ಚಿತ್ರಮೂಲ, ಶುಂಠಿ ಇವುಗಳನ್ನು ಚೂರ್ಣಮಾಡಿ ಜೇನುತುಪ್ಪದಲ್ಲಿ ಕಲಸಿ ತಿನ್ನುತ್ತಾ ಬಂದರೆ ಮೈ ಕೃಶವಾಗುವುದು (ತೆಳುವಾಗುವುದು.)

೧೦. ಹಿರೀಮದ್ದಿನ ಚೂರ್ಣವನ್ನು ಹಾಲಿನಲ್ಲಿ ಬೇಯಿಸಿ ಶುದ್ಧಿಮಾಡಿ ಆ ಶುದ್ಧಿಯಾದ ಚೂರ್ಣವನ್ನು ಬಿಸಿಹಾಲಿಗೆ ಬೆರಸಿ ಕುಡಿಯುತ್ತಾ ಬಂದರೆ ಹೆಂಗಸರ ಬೊಜ್ಜು ಮೈ ಕರಗಿ ತೆಳುವಾಗುವುದು.

**ವರಾಹವಸಯಾ ಕಾರ್ಯಮಶ್ವಗಂಧಾವಿಪಕ್ವಯಾ ।**
**ಸ್ತನಾನಾಂ ಮರ್ದನಂ ತೇನ ನಾರೀ ಪೀನಸ್ತನೀ ಭವೇತ್ ॥ ೧೧ ॥**

**ಮೂಲಕಸ್ಯ ಚ್ಯುತಂ ಬೀಜಂ ತಥೈವ ತಗರಸ್ಯ ಚ ।**
**ಸಪ್ತರಾತ್ರಂ ತು ಗೋಮೂತ್ರೆ ಸಿಧ್ಮನಾಶನಮುತ್ತಮಂ ॥ ೧೨ ॥**

**ಕ್ಷಾರೇಣ ಹಸ್ತಿಪಿಂಡಸ್ಯ ಅವಲ್ಗುಜರಸೇನ ಚ ।**
**ಏತೇನ ಪ್ರೋಕ್ಷಿತಂ ಶ್ವಿತ್ರಂ ತ್ರಿರಾತ್ರೇಣ ವಿನಶ್ಯತಿ ॥ ೧೩ ॥**

**ಗುಞ್ಜಾಯಾಃ ಸಫಲಂ ಮೂಲಂ ಚಿತ್ರಕಂ ತಗರಂ ತಥಾ ।**
**ಭಲ್ಲಾತಕಾನಾಂ ಚ ಫಲಂ ಮೂಲಂ ಚೈವಾಶ್ವಮಾರಕಮ್ ॥ ೧೪ ॥**

---

೧೧. ಹಂದಿಯ ತುಪ್ಪಕ್ಕೆ ಅಶ್ವಗಂಧಿ (ಹಿರೀಮದ್ದಿನ) ಚೂರ್ಣವನ್ನು ಬೆರಸಿ ಪಾಕಮಾಡಿ ಅದನ್ನು ಬತ್ತಿಹೋದ ಸ್ತನಗಳಿಗೆ ಲೇಪಿಸುತ್ತಾ ಬಂದರೆ ಸ್ತನಗಳು ದಪ್ಪನಾಗಿ ಉನ್ನತವಾಗುವುವು.

೧೨. ಮೂಲಂಗಿಯ ಹಣ್ಣಾದ ಬೀಜವನ್ನೂ ತಗರದ ಎಲೆಯನ್ನೂ ಪುಡಿ ಮಾಡಿ ಹಸುವಿನ ಗಂಜಲದಲ್ಲಿ ಬೆರೆಸಿ ಏಳು ದಿವಸ ಇಟ್ಟಿದ್ದು ಅದನ್ನು ಪ್ರಧಾನಕ್ಕೆ ಬಳಿಯುತ್ತಾ ಬಂದರೇ (ಉಪಯೋಗಿಸಿದರೆ) ಷಂಡತ್ವ (ನಪುಂಸಕತ್ವ) ವು ಪರಿಹಾರ ವಾಗುವುದು.

೧೩. ಯಾರಿಗಾದರೂ ತೊನ್ನು ಹತ್ತಿದ್ದರೆ ಆನೆಲದ್ದೀ ರಸದ ಕ್ಷಾರವನ್ನು ಬಾವಂತೀಬೀಜದ ಪುಡಿಯ ರಸವನ್ನೂ ಸೇರಿಸಿ, ಬೆರೆಸಿ ತೊನ್ನಿನ ಮೇಲೆ ಹಚ್ಚುತ್ತಾ ಬಂದರೆ ಮೂರು ದಿವಸಗಳೊಳಗಾಗಿ ಆ ತೊನ್ನು ಗುಣವಾಗುವುದು.

೧೪. ಕೂದಲು ಉದರಿಹೋಗುವ ಔಷಧವನ್ನು ಮಾಡುವ ಕ್ರಮ. ಗುಲಗಂಜೀ ಸಮೂಲ (ಹೂವು ಎಲೆ ಬೇರುಗಳೆಲ್ಲಾ ಸೇರಿ) ಚಿತ್ರಮೂಲದ ಬೇರು ತಗರದ ಎಲೆ ಗೇರುಬೀಜ ದೇವಗಣಿಗಲೇ ಗಿಡದ ಬೇರುಗಳನ್ನು ಒಣಗಿಸಿ ಕುಟ್ಟಿ ಚೂರ್ಣಮಾಡಿ,

**ಅರ್ಕಕ್ಷೀರಸಮಂ ತೈಲಂ ದ್ರವ್ಯೈರೇತೈರ್ವಿಪಾಚಯೇತ್ ।**
**ಪ್ರೋಕ್ಷಣೇನ ವಿನಿರ್ದಿಷ್ಟಂ ರೋಮಶಾತನಮುತ್ತಮಮ್ ॥ ೧೫ ॥**

**ಹಸ್ತಿದಂತಮಯೀಂ ಪಿಷ್ಟ್ವಾ ಪಯಸಾ ಲೇಪಯೇಚ್ಛಿರಃ ।**
**ಅಜಾತೇಷ್ವಪಿ ಕೇಶೇಷು ರೋಮಸಞ್ಜನನಂ ಪರಂ ॥ ೧೬ ॥**

**ಭೃಂಗರಾಜರಸೈಸ್ತೈಲಂ ಸಿದ್ಧಮಭ್ಯಞ್ಜನಾದ್ಧೃತಮ್ ।**
**ದೃಢಮೂಲಾನಿ ಕೇಶಾನಿ ಕುರ್ಯಾತ್ಕೃಷ್ಣಾಸಿತಾನಿ ಚ ॥ ೧೭ ॥**

**ಕಟುಕಂ ದಂತಕಾಷ್ಠಂ ತು ಗೋಮೂತ್ರಪರಿಭಾವಿತಮ್ ॥**
**ಭುಕ್ತ್ವಾ ತೈಲೇನ ಗಣ್ಡೂಷಂ ವಕ್ತ್ರಗಂಧಹರಂ ಪರಂ ॥ ೧೮ ॥**

---

೧೫. ಎಕ್ಕದಹಾಲು ಇದಕ್ಕೆ ಸಮನಾದ ಅಚ್ಚೆಳ್ಳೆಣ್ಣೆಗಳಿಗೆ ಬೆರಸಿ ಒಲೆಯ ಮೇಲೆ ಇಟ್ಟು ಕಾಯಿಸಿ ಅದು ಘಟ್ಟಿಯಾದ ಮೇಲೆ ಆ ಮುಲಾಮನ್ನು ಕೂದಲಿರುವ ಕಡೆ ಲೇಪಿಸಿದರೆ ಕೂದಲುಗಳು ಉದುರಿ ಹೋಗುವುವು.

೧೬. ತಲೆಯಲ್ಲಿ ಕೂದಲು ಹುಟ್ಟದೇ ಇರುವವರಿಗೆ ಆನೆಕೊಂಬನ್ನು ತೇದು ಅದರ ಗಂಧವನ್ನು ಹಾಲಿನಲ್ಲಿ ಪುನಃ ಅರೆದು ತಲೆಗೆ ಹಚ್ಚಿಕೊಳ್ಳುತ್ತಾ ಬಂದರೆ ಹುಟ್ಟದೇ ಇದ್ದ ಕಡೆಯಲ್ಲಿ ಕೂದಲು ಹುಟ್ಟುವುದು.

೧೭. ಗರಗದ ಸೊಪ್ಪಿನ ರಸವನ್ನು ಎಣ್ಣೆಗೆ ಬೆರಸಿ ತೈಲಪಾಕದಲ್ಲಿ ಕಾಯಿಸಿ ಅದರಿಂದ ಸಿದ್ಧವಾದ ತೈಲದಿಂದ ಅಭ್ಯಂಗನ ಮಾಡುತ್ತಾ ಬಂದರೆ ಉದುರಿಹೋಗುತ್ತಿದ್ದ ಕೂದಲುಗಳು ಬೇರುಬಿಟ್ಟುಕೊಂಡು ದೃಢವಾಗುವುವಲ್ಲದೆ ಬಿಳೀಕೂದಲು ಸಹ ಕಪ್ಪುಬಣ್ಣಕ್ಕೆ ತಿರುಗುತ್ತವೆ.

೧೮. ಶುಂಠಿ ಮೆಣಸು ಹಿಪ್ಪಲಿಗಳನ್ನೂ ದಂತಕಾಷ್ಠ (ಉತ್ತರಣಿ ಕಡ್ಡಿ) ವನ್ನೂ ಸಹ ಕುಟ್ಟಿ ಚೂರ್ಣಮಾಡಿ ಅದನ್ನು ಗೋ-ಮೂತ್ರದಲ್ಲಿ ಅರೆದು (ನೆನಸಿ) ಒಣಗಿಸಿಟ್ಟುಕೊಂಡು ಅದನ್ನು ಚೆನ್ನಾಗಿ ಹಲ್ಲಿನಿಂದ ಅಗಿದು ಎಣ್ಣೆಯಿಂದ ಬಾಯಿ ಮುಕ್ಕಳಿಸುತ್ತಾ ಬಂದರೆ ಬಾಯಿಯ ದುರ್ಗಂಧವು ಪರಿಹಾರವಾಗುವುದು.

ಇಂದೀವರಾಣಿ ಶುಷ್ಕಾಣಿ ಪ್ರಾಶ್ಯಾನಿ ತಣ್ಡುಲೈಸ್ಸಹ ।
ಸರ್ವರಾತ್ರಂ ಮುಖೇ ವಾತಿ ಸುಗಂಧಿ ವಿಶದಂ ಶುಚಿ ॥ ೧೯ ॥

ಸರ್ಷಪೋನ್ಮಥಿತಂ ಕೃತ್ವಾ ಶಾಲ್ಮಲೀನಾಂ ತು ಕಣ್ಟಕೈಃ ।
ಪಯಃ ಪಿಷ್ಟೈರ್ಮುಖೇ ಲೇಪಾನ್ಮುಖಂ ಸ್ಯಾತ್ಕಮಲೋಪಮಮ್ ॥ ೨೦ ॥

ವ್ಯಙ್ಗಾನಾಂ ತಿಲಕಾನಾಂ ಚ ಶಮನಂ ತತ್ಪ್ರಕೀರ್ತಿತಮ್ ।
ಯೌವನೇ ಪಿಟಕಾನಾಂ ಚ ಯೇ ಚ ದೋಷಾ ಮುಖೇ ಸ್ಮೃತಾಃ ॥ ೨೧ ॥

ಕಷಾಯಕಲ್ಕಸಿದ್ಧೇನ ಶತಾವರ್ಯಾ ಘೃತೇನ ಚ ।
ಅಭ್ಯಙ್ಗಪಾನ್ಯೈರ್ಭವತಿ ನಾರೀ ವರ್ಣಯುತಾ ಪರಮ್ । ॥ ೨೨ ॥

---

೧೯. ತಾವರೇದಂಟನ್ನು ಒಣಗಿಸಿಟ್ಟುಕೊಂಡು ಅದನ್ನು ಪುಡಿಮಾಡಿ ರಾತ್ರಿ ಹೊತ್ತು ಅದನ್ನು ಅಕ್ಕಿಗೆ ಬೆರಸಿ ಬಾಯಿಗೆ ಹಾಕಿಕೊಂಡು ತಿಂದರೆ ಅವನ ಮುಖದಿಂದ ಶುಚಿಯಾಗಿಯೂ, ಸುಗಂಧಪೂರಿತವಾಗಿಯೂ ಇರುವ ನಿಶ್ವಾಸವಾಯುವು ಹೊರಡುವುದು.

೨೦. ಬೂರಗದ ಮರದ ಮುಳ್ಳುಗಳನ್ನು ಪುಡಿಮಾಡಿ ಸಾಸಿವೆ ಬೆರಸಿ ಅದಕ್ಕೆ ಹಾಲು ಹಾಕಿಕೊಂಡು ಅರೆದು ಮುಖಕ್ಕೆ ಲೇಪಿಸುತ್ತಾ ಬಂದರೆ ಮುಖವು ಕಮಲದಂತೆ ಸುಂದರವಾಗುವುದು.

೨೧. ಮುಖದ ಬಂಗು (ಕಲೆ) ಕರೀ ಬಿಳೀ ಬಂಗು (ತಿಲಕ)ಗಳು ಮತ್ತು ಪ್ರಾಯದಲ್ಲಿ ಮೊಡುವೆಯಾಗಿದ್ದು ಒಣಗಿದ ಕಲೆಗಳೂ (ಸಿಡುಬಿನ ಕಲೆಗಳು) ಇತ್ಯಾದಿ ಮುಖದ ಮೇಲಿರುವ ಸಕಲ ವಿಧವಾದ ದೋಷಗಳೂ ಹೋಗಬೇಕಾದರೆ ಇದರಡಿ ವಿವರಿಸಿರುವ ಔಷಧವನ್ನು ಮಾಡಬೇಕು.

೨೨. ಆಷಾಢೀ ಬೇರಿನ ರಸ ಮತ್ತು ಅದೇ ಬೇರಿನ ಕಲ್ಕವನ್ನು ತುಪ್ಪಕ್ಕೆ ಹಾಕಿ ಘೃತಪಾಕದಲ್ಲಿಳಿಸಿ ಅದರಿಂದ ಅಭ್ಯಂಜನಮಾಡೋಣದರಿಂದ ಮುಖದೋಷ ಗಳೆಲ್ಲವೂ ಪರಿಹಾರವಾಗಿ ಹೆಂಗಸರು ಬಲು ಸುಂದರಿಯರಾಗಿ ಪರಿಣಮಿಸುವರು.

**ಷೋಡಶರ್ತುನಿಶಾಃ ಸ್ತ್ರೀಣಾಮಾದ್ಯಾಸ್ತಿಸ್ರಸ್ತು ನಿಂದಿತಾಃ ।**
**ಅಸ್ಪೃಶ್ಯಾ ತಾಸು ನಾರೀ ಸ್ಯಾತ್ಸ್ಪೃಷ್ಟ್ವಾ ತಾಂ ಸ್ನಾನಮಾಚರೇತ್ ॥ ೨೩ ॥**

**ದಿನತ್ರಯಂ ತು ತನ್ನಾರೀ ಸ್ನಾನಾಭ್ಯಂಗೌ ವಿವರ್ಜಯೇತ್ ।**
**ಆಹಾರಂ ಗೋರಸಾನಾಂ ಚ ಪುಷ್ಪಾಲಂಕಾರಧಾರಣಮ್ ॥ ೨೪ ॥**

**ಅಂಜನಂ ಕಂಕಣಂ ಗಂಧಾಃ ಪೀತಂ ಶಯ್ಯಾಧಿರೋಹಣಮ್ ।**
**ಮೃಲ್ಲೋಹಭಾಂಡ್ವವರ್ಜೇಷು ತಥಾ ಭಾಂಡೇಷು ಭೋಜನಮ್ ॥ ೨೫ ॥**

**ಅಗ್ನಿಸಂಸ್ಪರ್ಶನಂ ಚೈವ ವರ್ಜಯೇತ್ತು ದಿನತ್ರಯಂ ।**
**ಚತುರ್ಥೇಽಹನಿ ಕುರ್ವೀತ ಸ್ನಾನಂ ಸಾ ತು ಯಥಾವಿಧಿ ॥ ೨೬ ॥**

---

೨೩. ರಜಸ್ವಲೆಯಾದ ಹೆಂಗಸರು ಗರ್ಭವನ್ನು ಧರಿಸಬೇಕಾದರೆ ಹದಿನಾರು ದಿವಸದೊಳಗೆ ಅವಧಿಯನ್ನು ನಿರ್ಧರಿಸಿರುವರು. ಈ ಹದಿನಾರು ರಾತ್ರಿಗಳೊಳಗೆ ಮೊದಲು ಮೂರು ದಿವಸಗಳು ಅವರು ಅಸ್ಪೃಶ್ಯರೆನಿಸಿಕೊಳ್ಳುವರು. ಇಂತಹ ಅಸ್ಪೃಶ್ಯಳಾದ ಮುಟ್ಟಾದ ಹೆಂಗಸನ್ನು ಯಾರಾದರೂ ಮುಟ್ಟಿದರೆ ಸ್ನಾನಮಾಡಬೇಕು. ಈ ರೀತಿ ಆ ರಜಸ್ವಲೆಯು ಮೂರು ದಿವಸ ಹೊರಗಿದ್ದು ನಾಲ್ಕನೆಯ ದಿವಸ ಸ್ನಾನ ಮಾಡಬೇಕು.

೨೪. ಈ ರೀತಿ ಹೊರಗಾದ ಹೆಂಗಸು ಮೂರು ದಿವಸದ ವರೆವಿಗೆ ಸ್ನಾನ ವನ್ನಾಗಲೀ ಅಭ್ಯಂಗನಸ್ನಾನವನ್ನಾಗಲೀ ಮಾಡಬಾರದು. ಹಾಲು ಮೊಸರು ತುಪ್ಪಗಳನ್ನು ಊಟಕ್ಕೆ ಉಪಯೋಗಿಸಕೂಡದು. ಹೂವನ್ನು ಮುಡಿದುಕೊಳ್ಳ ಬಾರದು. ಅಲಂಕಾರವನ್ನು ಮಾಡಿಕೊಳ್ಳಬಾರದು.

೨೫. ಕಣ್ಣುಕಪ್ಪನ್ನು ಹಚ್ಚಿಕೊಳ್ಳಬಾರದು. ಕಂಕಣವನ್ನು ಧರಿಸಬಾರದು. ಗಂಧವನ್ನು ಲೇಪಮಾಡಿಕೊಳ್ಳಬಾರದು. ಅರಿಶಿನವನ್ನು ಹಚ್ಚಿಕೊಳ್ಳಬಾರದು. ಸುಪ್ಪತ್ತಿಗೆ ಮುಂತಾದ ಹಾಸಿಗೆಗಳ ಮೇಲೆ ಮಲಗಿಕೊಳ್ಳಬಾರದು. ಮಣ್ಣಿನ ಪಾತ್ರೆಗಳನ್ನಾಗಲೀ ಲೋಹದ ಪಾತ್ರೆಗಳನ್ನಾಗಲೀ ಮುಟ್ಟಬಾರದು. ತಟ್ಟೆಯಲ್ಲಿ ಊಟಮಾಡಬಾರದು.

೨೬. ಬೆಂಕಿಯನ್ನು ಮುಟ್ಟಬಾರದು. ಈ ರೀತಿಯಾಗಿ ಮೂರು ದಿವಸ ಈ ನಿಯಮಗಳನ್ನು ಪರಿಪಾಲಿಸಬೇಕು. ನಾಲ್ಕನೆಯ ದಿವಸ ಬೆಳಗಾಗಿ ಎದ್ದೊಡನೆ ಮೊದಲು ಸ್ನಾನಮಾಡಬೇಕು. ಆ ರೀತಿ ಸ್ನಾನಮಾಡಬೇಕಾದ ವಿಧಿಯನ್ನು ಮುಂದೆ ಹೇಳುತ್ತೇನೆ.

**ಅಭಿಷೇಕೋದಿತಾಭಿಶ್ಚ ಮೃದ್ಭಿರದ್ಭಿಶ್ಚ ಮಾನಸ್ಯೈಃ ।**
**ಓಷಧ್ಯಶ್ಚ ತಥಾ ಕುಂಭೇ ನಿಕ್ಷಿಪ್ಯ ಸ್ನಾಪಯೇತ್ತು ತಾಂ ॥ ೨೭ ॥**

**ಜ್ಯೋತಿಷ್ಮತೀಂ ತ್ರಾಯಮಾಣಾಮಭಯಾಮಪರಾಜಿತಾಂ ।**
**ಜೀವಾಂ ವಿಶ್ವೇಶ್ವರೀಂ ಪಾಠಾಂ ಸಮುಂಗಾಂ ವಿಜಯಾಂ ತಥಾ ॥ ೨೮ ॥**

**ಸಹಾಂ ಚ ಸಹದೇವೀಂ ಚ ಪೂರ್ಣಕೋಶಾಂ ಶತಾವರೀಂ ।**
**ಅರಿಷ್ಟಕಾಂ ಶಿವಾಂ ಭದ್ರಾಂ ಗೋಲೋಮೀಂ ವಿಜಯಪ್ರದಾಂ ॥ ೨೯ ॥**

**ಬ್ರಾಹ್ಮೀಂ ಕ್ಷೇತ್ರಾಮಜಾಂ ಚೈವ ಸರ್ವಬೀಜಾನಿ ಚಾಙ್ಗನಂ**
**ಬಿಲ್ವಂ ಗಂಧಾನಿ ರತ್ನಾನಿ ಪಂಚಗವ್ಯಂ ತಥೈವ ಚ ॥ ೩೦ ॥**

**ಕುಂಭೇ ನಿಕ್ಷಿಪ್ಯ ಕುಂಭಂ ಚ ಗಂಧಮಾಲ್ಯಾನುಲೇಪನೈಃ ।**
**ಪೂಜಯಿತ್ವಾ ತತೋ ದೇವಂ ತಸ್ಯಾತ್ರ ಶುಭವರ್ಧನಂ ॥ ೩೧ ॥**

---

೨೭. ಸ್ನಾನಕ್ಕೆ ಅರ್ಹವಾದ ಮೃತ್ತಿಕೆ (ಮಣ್ಣು) ಗಳಿಂದ ಮೊದಲು ದೇಹ ಮನಶ್ಶುದ್ಧಿಗಾಗಿ ಆಕೆಯು ಸ್ನಾನಮಾಡಿದೊಡನೆ ಇತರರು ಅವಳಿಗೆ ಶಾಸ್ತ್ರೀಯವಾದ ಜಲವನ್ನು ಹಾಕಿ ಸ್ನಾನಮಾಡಿಸಬೇಕು. ಸ್ನಾನಜಲವನ್ನು ತುಂಬಿರುವ ಬಿಂದಿಗೆ ಅಥವಾ ಹಂಡೆಗಳಿಗೆ ಇದರ ಕೆಳಗೆ ವಿವರಿಸಿರುವ ವನೌಷಧಗಳನ್ನು ಬೆರಸಬೇಕು.

೨೮. ಆ ಓಷಧಿ ವನಸ್ಪತಿಗಳ ಹೆಸರುಗಳನ್ನಿಲ್ಲಿ ಬರೆಯುತ್ತೇನೆ. ಕಂಗುಂಗೆ, ನೀರಾಮೆಬಳ್ಳಿ ಅಳಲೇಕಾಯಿ, ಲಾವಂಚ, ವಿಷ್ಣುಕ್ರಾಂತಿಸೊಪ್ಪು, ಕರೀಹಾಲೆಸೊಪ್ಪು ಅಥವಾ ಸೀಹಾಲೆಬೇರು ಶುಂಠಿ ಈಶ್ವರೀಬೇರು ಅಗಳುಶುಂಠಿ ಮಂಜಿಷ್ಠೆ ಭಂಗೀ ಎಲೆ ಸಹದೇವೀಬೇರು.

೨೯-೩೦-೩೧. ತಾವರೆಗೆಡ್ಡೆ ಶತಾವರಿ ಬೇವಿನಸೊಪ್ಪು ಕಿರಿನೆಲ್ಲೀಸೊಪ್ಪು ತುಂಗಮುಸ್ತುಸೊಪ್ಪು ದಾಸಮೆಕ್ಕೆಸೊಪ್ಪು ಅಥವಾ ಬೇರು, ಮತ್ತು ಒಂದೆಲೆಹೊನ್ನೆ ಮೂರೆಲೆಹೊನ್ನೆ, ಬಿಲ್ವಪತ್ರೆ ತೇದಗಂಧ ಪಂಚರತ್ನಗಳು ಪಂಚಗವ್ಯಗಳು ಇವುಗಳನ್ನೆಲ್ಲಾ ಹಂಡೆ ಅಥವಾ ಬಿಂದಿಗೆಯಲ್ಲಿ ಹಾಕಿ ಆ ಕುಂಭದಲ್ಲಿ ಮಹಾವಿಷ್ಣುವನ್ನು ಆವಾಹನೆಮಾಡಿ ಗಂಧಮಾಲ್ಯಾನುಲೇಪಗಳಿಂದ ಪೂಜಿಸಿ ಆ ಬಳಿಕ ಪುಣ್ಯಾಹ ಘೋಷವನ್ನು ಮಾಡಬೇಕು.

**ಮಂತ್ರಂ ರಾಜಾಭಿಷೇಕೋಕ್ತಂ ಪಠೇದತ್ರ ಚ ಕಾಲವಿತ್ ।**
**ವಸ್ತ್ರಚ್ಛನ್ನಮುಖೀ ಸ್ನಾತಾ ಸ್ನಾಪಕೇ ಚ ವಿನಿರ್ಗತೇ ॥ ೩೨ ॥**

**ಪಶ್ಯೇತ್ತ್ರದೇವ ಪ್ರತಿಮಾಂ ವಾಸುದೇವಸ್ಯ ರೂಪಿಣಃ ।**
**ಅಥವಾ ರಾಮ ಭರ್ತಾರಂ ನಾನ್ಯಂ ಕಂಚನ ಸತ್ವರಂ ॥ ೩೩ ॥**

**ತತ್ಕಾಲೆ ವದನಂ ತಸ್ಯ ಪಶ್ಯತ್ಯಥ ಯಥಾ ವಿಧಿ ।**
**ಸಾ ಪ್ರಸೂತೇ ಸುತಂ ರಾಮ ಶುಭಂ ವಾಽಪ್ಯಥವಾ ಶುಚಿಂ ॥ ೩೪ ॥**

**ಪೂಜನಂ ವಾಸುದೇವಸ್ಯ ಸಾ ಕೃತ್ವಾಽತ್ಮನ ಏವ ಚ ।**
**ಮಂಡನಂ ಚ ಯಥಾನ್ಯಾಯಂ ಶುಕ್ಲವಸ್ತ್ರೋತ್ತರಚ್ಛದಾ ॥ ೩೫ ॥**

---

೩೨. ಜೋಯಿಸನು ಪಟ್ಟಾಭಿಷೇಕೋಕ್ತವಾದ ಮಂತ್ರಗಳನ್ನು ಹೇಳುತ್ತಾ ಇರುವಲ್ಲಿ ಆಕೆಗೆ ಸ್ನಾನಮಾಡಿಸಬೇಕು. ಸ್ನಾನಮಾಡಿಸುವಾಗ ಶುದ್ಧಿಸ್ನಾನಮಾಡುವ ಸ್ತ್ರೀಯು ಮುಖವನ್ನು ಪರದೆಯಿಂದ ಮುಚ್ಚಿಕೊಂಡಿರಬೇಕು. ಸ್ನಾನಮಾಡುವ ತನಕ ಯಾರ ಮುಖವನ್ನೂ ನೋಡಕೂಡದು. ಸ್ನಾಪಕನು ಹೊರಟುಹೋದ ಮೇಲೆ ಮುಖದ ಪರದೆಯನ್ನು ತೆಗೆದುಬಿಡಬೇಕು.

೩೩. ಸ್ನಾನಮಾಡಿದ ತಕ್ಷಣವೇ ವಾಸುದೇವ ಪ್ರತಿಮೆಯ ದರ್ಶನವನ್ನು ಮಾಡಬೇಕು. ಅಥವಾ ತನ್ನ ಗಂಡನ ಮುಖವನ್ನು ದರ್ಶನಮಾಡಬೇಕು. ಹೀಗಲ್ಲದೆ ದುಡುಕಿನಿಂದ ಇನ್ನಾರ ಮುಖವನ್ನೂ ನೋಡಿಬಿಡಬಾರದು.

೩೪. ಮೇಲೆ ಇದುವರೆಗೆ ಹೇಳಿದ ವಿಧಿಯನ್ನನುಸರಿಸಿ ಯಾವ ಸ್ತ್ರೀಯು ರಜಸ್ವಲಾ ಶುದ್ಧಿಸ್ನಾನವನ್ನು ಮಾಡಿ ದೇವರ ಅಥವಾ ಗಂಡನ ಮುಖವನ್ನು ನೋಡುವಳೋ ಅವಳು ಶುಭಕರನಾದ ಅಥವಾ ಶುಚಿಕರನಾದ ಮಗನನ್ನು ಪ್ರಸುವಿಸುವಳು.

೩೫. ಈ ರೀತಿ ಭಗವಂತನನ್ನು ಪೂಜಿಸಿ, ಪತಿಮುಖದರ್ಶನಾನಂತರ ಆಕೆಯು ತನ್ನ ದೇಹವನ್ನು ವಸ್ತ್ರಾಭರಣಗಳಿಂದ, ಚೆನ್ನಾಗಿ ಅಲಂಕರಿಸಿಕೊಳ್ಳಬೇಕು.

ಷಷ್ಟಿಕಾನ್ನಂ ತು ಪಯಸಾ ಸಮಶ್ನೀಯಾದ್ಘೃತೇನ ಸಾ ।
ಘೃತಸ್ಯ ಪೀತ್ವಾ ಪ್ರಸೃತಿಂ ನಾಗಪುಷ್ಪಾವಚೂರ್ಣಿತಂ ॥ ೩೬ ॥

ಋತುಕಾಲೇ ಸಮಾಪ್ನೋತಿ ನಾರೀ ಗರ್ಭಂ ದ್ವಿಜೋತ್ತಮ ।
ಉಪೋಷಿತೇನ ಶುಚಿನಾ ಶುಕ್ಲಪಕ್ಷೇ ಸಮುದ್ಧೃತಂ ॥ ೩೭ ॥

ಪುಷ್ಯೇಣ ಬೃಹತೀಮೂಲಮುತ್ತರಾಂ ವಾ ಮುಖೇ ನಯೇತ್ ।
ಶ್ವೇತಪುಷ್ಪಾ ತು ಬೃಹತೀ ದ್ರುಮೂಲಸ್ಯೈಷ ನಿಶ್ಚಯಃ ॥ ೩೮ ॥

ನಸ್ಯಾ ದೇಯಾಶ್ಚ ಚತ್ವಾರ ಉನ್ಮೂಲಾ ದ್ರುಮಬಿಂದವಃ ।
ತಸ್ಮಿನ್ನಹನಿ ಸಾ ತೇನ ಗರ್ಭಂ ಧತ್ತೇ ವರಾಂಗನಾ ॥ ೩೯ ॥

ಏವಮಪ್ಯಭವಂತೀ ತು ಪುತ್ರೀಯಾಂ ರಾಮ ಸಪ್ತಮೀಂ ।
ಪುತ್ರೀಯಮಥವಾ ಸ್ನಾನಂ ಕೇಶವಾರಾಧನಂ ವ್ರತಂ ॥ ೪೦ ॥

---

೩೬. ಈ ರೀತಿ ಅಲಂಕೃತಳಾದ ನಾರಿಯು ಹಾಲು ತುಪ್ಪಗಳಿಂದ ಕಲಸಿದ ಗೋಧಿಯ ಸಜ್ಜಿಗೆಯನ್ನು ತಿನ್ನಬೇಕು. ಆ ಬಳಿಕ ನಾಗಕೇಸರಿ (ಕೇಸರಿ) ಯನ್ನು ಕಲ್ಪತ್ತಿನಲ್ಲಿ ನುಣ್ಣಗೆ ಅರೆದು ತುಪ್ಪಕ್ಕೆ ಹಾಕಿಕೊಂಡು ಕುಡಿಯಬೇಕು.

೩೭. ಆ ಬಳಿಕ ಹೆಗ್ಗುಳ್ಳದ ಬೇರನ್ನಾಗಲೀ ಚಿಗರನ್ನಾಗಲೀ ಅರೆದು ಕಲ್ಕ್ಯಮಾಡಿ ಬಾಯಿಗೆ ಹಾಕಿಕೊಳ್ಳಬೇಕು.

೩೮. ಮತ್ತು ಈ ಕಲ್ಕವನ್ನು ಚೆನ್ನಾಗಿ ಬಟ್ಟೆಯಲ್ಲಿ ಹಿಂಡಿ ಮೂರು ನಾಲ್ಕು ತೊಟ್ಟು ರಸವನ್ನು ಮೂಗಿಗೆ ಹಾಕಿಕೊಂಡು ಸೇದಿದರೆ ಆ ದಿವಸವೇ ಆ ಹೆಂಗಸು ಬಸುರಾಗುವಳು (ಗರ್ಭಿಣಿಯಾಗುವಳು.)

೩೯. ಈ ರೀತಿ ಹೇಳಿದ ಸ್ನಾನಕ್ಕೆ ಪುತ್ರೀಯ ಸಪ್ತಮಿಾ ಸ್ನಾನವೆಂದು ಹೆಸರಿದೆ. ಈ ವಿಧವಾದ ಋತುಸ್ನಾನವು ಮಹಾರಾಣಿಯವರಿಂದ ಮಾಡಲ್ಪಡಲು ಸಾಧ್ಯವೇ ಹೊರತು, ಇತರರು ಸಾಮಾನ್ಯವಾಗಿ ಪ್ರಾಚೀನಸಂಪ್ರದಾಯಾನುಸಾರವಾಗಿ ವೃದ್ಧ ಸುವಾಸಿನಿಯರ ಮುಖದಿಂದ ಈ ಸ್ನಾನವನ್ನು ಮಾಡಬಹುದು. ಸ್ನಾನಾನಂತರ ಕೇಶವಾರಾಧನ ರೂಪವಾದ ವ್ರತವನ್ನು ಮಾಡಬೇಕು.

೪೦-೪೧-೪೨. ಪುತ್ರೀಯ ಸಪ್ತಮಿಾ ಸ್ನಾನವನ್ನು ಮಾಡದೇ ಇದ್ದವರು ಪುತ್ರೀಯ (ಮಕ್ಕಳನ್ನು ಕೊಡುವ) ಕೇಶವಾರಾಧನೆಯನ್ನು ಮಾಡಲೇಬೇಕು.

**ಪುತ್ರೀಯಮೇವ ವಾ ಕುರ್ಯಾತ್ಕೇಶವಾರಾಧನಂ ಪ್ರಿಯಾ ।**
**ಸ್ನಾತಾಽನುಲಿಪ್ತಾ ಭರ್ತಾರಂ ಹೃಷ್ಟೈರ್ಬೃಂಹಿತಮೇವ ಚ　　॥ ೪೧ ॥**

**ಯಾಯಾದ್ರಾತ್ರೌ ತಥಾ ನಾರೀ ಗಂಧಧೂಪಾದಿವಾಸಿತಾ ।**
**ಆತ್ತಗರ್ಭಾಂ ಚಿಕಿತ್ಸೇತ ಶತಸ್ತಾಮುಪರಾಜಿತ　　॥ ೪೨ ॥**

---

ಈ ರೀತಿ ಮುಟ್ಟುನೀರು ಹಾಕಿಕೊಂಡ ಬಳಿಕ ಆ ಹೆಂಗಸು ಮೈಗೆ ಗಂಧವನ್ನು ಲೇಪಮಾಡಿಕೊಂಡು ಹೃಷ್ಟಸಮುದಾಯಗಳಿಂದ ಮತ್ತಳಾಗಿ ಗಜಬೃಂಹಿತದಿಂದ ಕೂಡಿರುವ (ಮದಿಸಿದ) ಗಂಡನೊಡನೆ ರಾತ್ರಿಯಲ್ಲಿ ಗಂಧಧೂಪಾದಿ ಸುವಾಸನಾ ಯುಕ್ತವಾದ ಕಿರುಮನೆಯಲ್ಲಿ ಭೋಗಪಡಬೇಕು. ಹೀಗೆ ಗಂಡನೊಡನೆ ಬೆರತ ನಾರಿಯು ಕೂಡಲೇ ಗರ್ಭವನ್ನು ಧರಿಸುವಳು.

ಟಿಪ್ಪಣಿ : ಈ ಶ್ಲೋಕದಲ್ಲಿ ಹೃಷ್ಟೈಃ ಎಂಬ ಶಬ್ದವನ್ನು ಪಯೋಗಿಸಿರುವರು. ಇಲ್ಲಿ ಬಹುವಚನವಿರುವುದರಿಂದ ಇದಕ್ಕೆ ಅಮರದಲ್ಲಿ ಹೇಳಿರುವ ಹೃಷ್ಟಶಬ್ದ ಪರ್ಯಾಯ ಪದಗಳೆಂದು ಅರ್ಥವು ಆಗುವುದರಿಂದ ಹೃಷ್ಟಸಮುದಾಯಗಳಿಂದ ಎಂದು ಅರ್ಥವನ್ನು ಬರೆದಿರುವೆನು. ಹೃಷ್ಟವೆಂದರೆ ಸಂತೋಷ ಮದ ತೃಪ್ತಿ ಆಮೋದಗಳೆಂದು ಹೆಸರುಗಳು. ಬೃಂಹಿತವೆಂದರೆ ಆನೆಯ ಕೂಗಿಗೆ ಹೆಸರು. ಬೃಂಹಿತಂ ಭರ್ತಾರಂ ಅಂದರೆ ಆನೆಯಂತೆ ಕೂಗಿಕೊಳ್ಳುವ ಎಂದು ಅರ್ಥ. ಆದ್ದರಿಂದ ಜನರು ಮದಿಸಿದಾನೆಯು, ಕಾಮೋದ್ರೇಕ ವಾಗದೆ, ಕೂಗಿಕೊಳ್ಳುವುದಿಲ್ಲವಾದ್ದರಿಂದ ಮತ್ತರಾದ (ಕಾಮುಕರಾದ,) ಎಂದು ಅರ್ಥ ಮಾಡಿಕೊಳ್ಳಬೇಕು. ಹೀಗೆ ಸಮಂಜಸವಾದ ಅರ್ಥವನ್ನು ಬರೆಯದೆ ಆನೆಯಂತೆ ಕೂಗಿ ಕೊಳ್ಳುತ್ತಿರುವ ಗಂಡನೊಡನೆ ಭೋಗಿಸೆಂದು ಹೇಳಿದರೆ ಅನುವಾದಕನನ್ನು " ಭಟ್ಟಸ್ಯ ಕಟ್ಯಾಂ ನರಟಃ ಪ್ರವಿಷ್ಟಃ " ಎಂಬಂತೆ ಯಾರಾದರೂ ಕರೆದಾರೆಂಬ ಭೀತಿಯಿಂದ ಸಮಂಜಸವಾದ ಅರ್ಥವನ್ನು ವಿವೇಚಿಸಿ ಬರೆದಿದ್ದೇನೆ. ಇಂತಹ ಅನೇಕ ಸಂದರ್ಭಗಳು ಈ ಗ್ರಂಥದಲ್ಲಿ ಅನೇಕ ಕಡೆ ಬರುವುದರಿಂದ ಅರ್ಥಸ್ವಾರಸ್ಯವನ್ನು ಮಾತ್ರ ಬರೆಯುತ್ತಾ ಬರುವೆನಾದ್ದರಿಂದ ಮೂಲಕ್ಕೆ ಸರಿಯಾದ ಅರ್ಥವನ್ನು ಕೊಡಲಿಲ್ಲವೆಂದು ಯಾರೂ ಆಕ್ಷೇಪಿಸಲಾರರೆಂದು ನಂಬುತ್ತೇನೆ. ಉದಾಹರಣೆ :-" ಸ್ವರ್ಗಮಶ್ನುತೆ " ಸ್ವರ್ಗವನ್ನು ತಿನ್ನುತ್ತಾನೆಂದರ್ಥ. ಹೀಗೆ ಬರೆದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾದೀತು. ಆದ್ದರಿಂದ ಸ್ವರ್ಗಸುಖವನ್ನು ಅನುಭವಿಸುತ್ತಾನೆ. ಎಂದೇ ಅರ್ಥವನ್ನು ಬರೆಯಬೇಕು.

**ಮಧುರೌಷಧಿಸಿದ್ಧೇನ ಪಯಸಾ ಸರ್ಪಿಷಾ ತಥಾ ।**
**ಇಚ್ಛಾವಿಮಾನಗಾಃ ಕಾಶ್ಚಿನ್ನಾಸ್ಯಾಃ ಕಾರ್ಯಾಃ ಕಥಂಚನ ॥ ೪೩ ॥**

**ಕಟುತಿಕ್ತಕಷಾಯಾಣಿ ಚಾತ್ಯುಷ್ಣಲವಣಾನಿ ಚ ।**
**ಆಯಾಸಂ ಚ ವ್ಯವಾಯಂ ಚ ಗರ್ಭಿಣೀ ವರ್ಜಯೇತ್ಸದಾ ॥ ೪೪**

**ವಿನಾ ಕರ್ಮ ನ ತಿಷ್ಠೇತ ತಥಾ ಸಾ ರಾಹುದರ್ಶನೇ ।**
**ಪ್ರಾದುರ್ಭಾವಾಣಿ ವೇದೇಸ್ಯ ವಿಷ್ಣೋರಮಿತತೇಜಸಃ ॥ ೪೫ ॥**

---

೪೩. ಈ ರೀತಿಯಾಗಿ ಗರ್ಭವತಿಯಾದ ಹೆಂಗಸಿಗೆ ಮೊದಲು ಚಿಕಿತ್ಸೆಯನ್ನು ಮಾಡಬೇಕು. ಮಧುರವಾದ ಔಷಧರಸಗಳಿಂದ ಸಿದ್ಧಪಡಿಸಲ್ಪಟ್ಟ ಹಾಲನ್ನೂ ತುಪ್ಪವನ್ನೂ ಕೊಡಬೇಕೇ ಹೊರ್ತು ಇನ್ನಾವ ಪದಾರ್ಥಗಳನ್ನೂ ಕೊಡಬಾರದು. ಬಸುರಿಯಾದ ಹೆಂಗಸು ಸ್ವೇಚ್ಛೆಯಾಗಿ ಸಿಕ್ಕಿದ ಪದಾರ್ಥಗಳನ್ನು ಪಯೋಗಿಸಬಾರದು ಬಸುರಿಯ ಬಯಕೆ ಎಂದು ಕೆಲವರು ಅವಳು ಹೇಳಿದ್ದನ್ನೆಲ್ಲಾ ಕೊಡುವ ಪದ್ಧತಿ ಯುಂಟು. ಮಧುರವಾದ ಪದಾರ್ಥಗಳನ್ನಲ್ಲದೇ ಇತರ ಕಟ್ವಾದಿ ಪದಾರ್ಥಗಳನ್ನು ಕೊಡಕೂಡದೆಂದು ಮುಂದಿನ ಶ್ಲೋಕದಲ್ಲಿ ನಿಷೇಧಿಸಿರುತ್ತಾರೆ.

೪೪. ಬಹು ಕಾರವಾದ ಮತ್ತು ಕಹಿಯಾದ ಕಷಾಯಗಳನ್ನು ಗರ್ಭಿಣಿಯಾದ ಸ್ತ್ರೀಗೆ ಕುಡಿಸಕೂಡದು. ಬಲುಬಿಸಿಯಾಗಿರುವ ಮತ್ತು ಉಪ್ಪು ಹೆಚ್ಚಾಗಿ ಹಾಕಿದ ಪದಾರ್ಥಗಳನ್ನು ಕೊಡಕೂಡದು. ಗರ್ಭಿಣಿಯು ಆಯಾಸಕರವಾದ ಕೆಲಸಗಳನ್ನು ಮಾಡಬಾರದು. ಮೈಥುನಕ್ಕೆ ಅವಕಾಶಕೊಡಬಾರದು. ಈಗ ಹೇಳಿದ ವಿಷಯ ಗಳನ್ನೆಲ್ಲಾ ನಿಷೇಧಿಸಬೇಕು.

೪೫. ಚಂದ್ರಗ್ರಹಣ ಸೂರ್ಯಗ್ರಹಣಗಳು ಸಂಭವಿಸಿದ ಸಮಯಗಳಲ್ಲಿ ಕೆಲಸವೇನೂ ಇರದೆ ಹೊರಗಿರಕೂಡದು. (ಅಂದರೆ ಕೆಲಸವನ್ನು ಬಯಲಿನಲ್ಲಿ ಮಾಡಕೊಡದು ಒಳಗಡೆಯೂ ಮಾಡಕೂಡದೆಂದು ತಾತ್ಪರ್ಯ.)

ಶೃಣುಯಾತ್ತನ್ಮನಾ ಭೂತ್ವಾ ಚರಿತಂ ಚ ಮಹಾತ್ಮನಃ ।
ಪುನ್ನಾಮ್ನಿ ನಾಮನಕ್ಷತ್ರೇ ಹ್ಯಾಸನ್ನಪ್ರಸವಾ ಗೃಹಂ ॥ ೪೬ ॥

ಪ್ರವಿಶೇತ್ಸೂತಿಕಾಸಂಜ್ಞಂ ಕೃತರಕ್ಷಂ ಸಮಂತತಃ ।
ಸುಭೂಮೌ ನಿರ್ಮಿತಂ ರಮ್ಯಂ ವಾಸ್ತುವಿದ್ಯಾವಿಶಾರದೈಃ ॥ ೪೭ ॥

ಪ್ರಾಗ್ದ್ವಾರಮುತ್ತರದ್ವಾರಮಥವಾ ಸುದೃಢಂ ಶುಭಂ ।
ದೇವಾನಾಂ ಬ್ರಾಹ್ಮಣಾನಾಂ ಚ ಗವಾಂ ಕೃತ್ವಾ ಚ ಪೂಜನಂ ॥ ೪೮ ॥

ವಿಪ್ರ ಪುಣ್ಯಾಹಘೋಷೇಣ ಶಂಖವಾದ್ಯರವೇಣ ಚ ।
ಪ್ರಸೂತಾ ಬಹುಶಸ್ತತ್ರ ತಥಾ ಕ್ಲೇಶಜ್ಞಮಾಶ್ಚ ಯಾಃ ॥ ೪೯ ॥

---

೪೬. ವೇದಗಳಲ್ಲಿ ಪರಮಾತ್ಮನಾದ ಮಹಾವಿಷ್ಣುವು ಅನೇಕ ಅವತಾರಗಳನ್ನು ಮಾಡುತ್ತಾನೆಂದು ಹೇಳಿದೆಯಾದ್ದರಿಂದ ಅಂತಹ ಭಗವಂತನ ಅವತಾರ ಕಥೆಗಳನ್ನು ಗರ್ಭಿಣಿಯಾದವಳು ಶ್ರವಣಮಾಡುತ್ತಲಿದ್ದರೆ ಒಳ್ಳೆಯ ಭಗವದ್ಭಕ್ತನಾದ ಮಗನೇ ಹುಟ್ಟುವನು.

೪೭. ಆಸನ್ನಪ್ರಸವಳಾದ (ಹೆರಿಗೆ ನೋವನ್ನು ಅನುಭವಿಸುವ) ಹೆಂಗಸು ಒಳ್ಳೆಯ ನಕ್ಷತ್ರದಲ್ಲಿ ಸೂತಿಕಾಗೃಹ (ಹೆರಿಗೆ ಮನೆ) ವನ್ನು ಪ್ರವೇಶಿಸಬೇಕು. ವಾಸ್ತು ವಿದ್ಯಾವಿಶಾರದರಾದವರಿಂದ ಆ ಸೂತಿಕಾಗೃಹವು ಚೆನ್ನಾಗಿ ನಿರ್ಮಿಸಲ್ಪಟ್ಟಿರಬೇಕು.

೪೮. ಆ ಸೂತಿಕಾಗೃಹಕ್ಕೆ ಪೂರ್ವದಿಕ್ಕಿಗೆ ಅಥವಾ ಉತ್ತರದಿಕ್ಕಿಗೆ ಬಾಗಲಿರಬೇಕು. ಆ ಮನೆಯು ದೃಢವಾಗಿಯೂ ಶುಭಕರವಾಗಿಯೂ ಇರಬೇಕು. ಇಂತಹ ಮನೆಗೆ ಗರ್ಭಿಣಿಯು ಪ್ರವೇಶಿಸುವುದಕ್ಕಿಂತ ಮುಂಚೆ ಬ್ರಾಹ್ಮಣರಿಗೂ ಗೋವುಗಳಿಗೂ ಪೂಜೆಯನ್ನು ಮಾಡಬೇಕು.

೪೯. ಈ ರೀತಿ ಪೂಜಾಕ್ರಮಗಳು ಬೆಳೆದ ಬಳಿಕ ಪೂರ್ಣಗರ್ಭಿಣಿಯು ಪ್ರಸೂತಿಗೃಹಕ್ಕೆ ಪ್ರವೇಶಮಾಡುವ ಸಮಯದಲ್ಲಿ ಬ್ರಾಹ್ಮಣರಿಂದ ಪುಣ್ಯಾಹಮಂತ್ರಗಳ ಘೋಷಣೆಯಾಗುತ್ತಿರಬೇಕು. ಆ ಮನೆಯಲ್ಲಿ ಹಿಂದೆ ಎಷ್ಟೋ ಹೆರಿಗೆಗಳಾಗಿರಬೇಕು. ಹೆರಿಗೆ ನೋವನ್ನು ಅನುಭವಿಸಿದ ಅನುಭವವುಳ್ಳ ಅನೇಕ ಮಂದಿ ಸ್ತ್ರೀಯರು ಅಲ್ಲಿ ಇರಬೇಕು.

ಹೃದಾ ವಿಶ್ವಸನೀಯಾಶ್ಚ ಪರಿಚರ್ಯೈಃ ಸ್ತ್ರಿಯಶ್ಚ ತಾಂ।
ವಾತಾನುಲೋಮನೈರ್ಹೃದ್ಯೈಸ್ತತ್ರೈನಾಮುಪಚಾರಯೇತ್ ॥ ೫೦ ॥

ಆಹಾರೈಶ್ಚ ವಿಹಾರೈಶ್ಚ ಪ್ರಸವಾಯ ಸುಖಂ ದ್ವಿಜ।
ಏರಣ್ಡಮೂಲಮಿಶ್ರೇಣ ಸಘೃತೇನ ತಥೈವ ತಾಂ ॥ ೫೧ ॥

ಸುಖಪ್ರಸವನಾರ್ಥಾಯ ಪಶ್ಚಾತ್ಕಾಯೇ ತು ಮ್ರಕ್ಷಯೇತ್।
ಬಲಾಕಲ್ಕಕಷಾಯೇಣ ಸಿದ್ಧಂ ಕ್ಷೀರಂ ಚತುರ್ಗುಣಂ ॥ ೫೨ ॥

ತೈಲಮಭ್ಯಂಗನಾರ್ಥಾಯ ಸೂತಾಯಾಮುಪಕಲ್ಪಯೇತ್।
ಅಥ ಜಾತಾನ್ನಪಾನೇಚ್ಛಾಂ ಪಂಚಕೋಲಪ್ರಸಾಧಿತಾಂ ॥ ೫೩ ॥

ಪಿಬೇದ್ಯವಾಗೂಂ ಸಸ್ನೇಹಾಂ ತಥಾ ನ್ಯೈ ನೀಲಕುಂಚಿಕಾಂ।
ದಶಾಹಂ ಸೂತಿಕಾಗಾರಂ ಚಾಯುಧೈಶ್ಚ ವಿಶೇಷತಃ ॥ ೫೪ ॥

---

೫೦. ಹೆರಿಗೆಮನೆಗೆ ಬರುವ ಹೆಂಗಸರು ನಂಬಿಕೆಯುಳ್ಳವರಾಗಿಯೂ ಮನೋಹರರಾಗಿಯೂ ಇರಬೇಕು. ಅಂತಹವರೇ ಗರ್ಭಿಣಿಯು ಹೆರುವ ಸಮಯದಲ್ಲಿ ಅವಳನ್ನು ಉಪಚಾರ ಮಾಡುತ್ತಲಿರಬೇಕು.

೫೧. ಸುಖಪ್ರಸುವವಾಗುವ ಉದ್ದೇಶದಿಂದ ಆಹಾರಗಳ ವಿಷಯದಲ್ಲಿ ಗರ್ಭಿಣಿಯನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಲಿರಬೇಕು. ಮತ್ತು ಕೆಳಹೊಟ್ಟೆಯನ್ನು ಹರಳೆಣ್ಣೆಯಿಂದಲಾಗಲೀ ತುಪ್ಪದಿಂದಲಾಗಲೀ ಸೇವಿಸಿ ನೀರನ್ನು ಹಾಕುತ್ತಿರಬೇಕು.

೫೨. ಸುಖಪ್ರಸುವವಾಗುವುದಕ್ಕಾಗಿ ಜನನೇಂದ್ರಿಯದ ಹಿಂಭಾಗ ಮುಂಭಾಗಗಳನ್ನು ಅಂದರೆ, ಕೆಳಹೊಟ್ಟೆ ಮತ್ತು ಸೊಂಟಗಳಿಗೆ ಎಣ್ಣೆಯನ್ನು ಹಚ್ಚಿ ಮೃದುಕರವಾಗಿ ಸವರಿಸಿ, ನೀರು ಹಾಕುತ್ತಿರಬೇಕು. ಕಾಡಂಗಡಲೇ ಬೇರಿನ ಕಷಾಯವನ್ನು ಇಳಿಸಿ ಅದಕ್ಕೆ ನಾಲ್ಕರಷ್ಟು ಹಾಲನ್ನು ಬೆರಸಿ ಕುಡಿಯುವುದಕ್ಕೆ ಕೊಡಬೇಕು.

೫೩. ಮಗು ಹುಟ್ಟಿದೊಡನೆ ಅದನ್ನು ತೊಳೆಯುವುದಕ್ಕೋಸ್ಕರ ಬಿಸಿನೀರನ್ನು ಸಿದ್ಧಪಡಿಸಿಕೊಂಡಿರಬೇಕು. ಮಗುವು ಹುಟ್ಟಿದೊಡನೆಯೇ ಬಾಣಂತಿಗೆ ಔಷಧರೂಪವಾಗಿ ಪಂಚಕೋಲ ಕಷಾಯವನ್ನು ಕೊಡಬೇಕು.

೫೪. ಬಿಸಿಗಂಜಿಗೆ ಎಣ್ಣೆಹಾಕಿ ಕುಡಿಸಬೇಕೆಂದು ಕೆಲವರ ಮತ. ಮಗು ಹುಟ್ಟಿದೊಡನೆಯೇ ಮಾಡಬೇಕಾದ ಔಷಧಪಥ್ಯಗಳು ಆಯಾಯ ದೇಶಾನುಗುಣವಾಗಿ ನಾನಾ ವಿಧವಾಗಿವೆ. (ಈಗ ಅನೇಕರು ಇಂಗ್ಲಿಷ್ ಔಷಧವನ್ನೇ ಸೇವಿಸುವರು.)

**ವಹ್ನಿಕಾತಿಂದುಕಾಲಾತ್ಯೈಃ ಪೂರ್ಣಕುಂಭೈಃ ಪ್ರದೀಪಕೈಃ ।**
**ಮುಸಲೇನ ತಥಾ ದ್ವಾರಿ ವರ್ಣಕೈಶ್ಚಿತ್ರಿತೇನ ಚ ॥ ೫೫ ॥**

**ರಕ್ಷಣೀಯಾ ತಥಾ ಷಷ್ಠೀ ನಿಶಾ ತತ್ರ ವಿಶೇಷತಃ ।**
**ರಾಮ ಜಾಗರಣಂ ಕಾರ್ಯಂ ಜನ್ಮದಾನಾಂ ತಥಾsರ್ಚನಂ ॥ ೫೬ ॥**

---

ಟಿಪ್ಪಣಿ: ಈಚಿಗೆ ನಮ್ಮ ಮೈಸೂರು ದೇಶದ ಮುಖ್ಯ ಪಟ್ಟಣಗಳಲ್ಲಿ ಸೂತಿಕಾ ವೈದ್ಯಶಾಲೆ (ಮೆಟರ್ನಿಟಿ ಹೋಂ) ಗಳನ್ನು ವಿಶೇಷವಾಗಿ ಕಲ್ಪಿಸಿ, ಗರ್ಭಿಣಿಯರಿಗೂ ಬಾಣಂತಿಯರಿಗೂ ಸರ್ಕಾರದವರು ಮಹೋಪಕಾರ ಮಾಡಿದ್ದಾರೆ. ಈ ವೈದ್ಯಶಾಸ್ತ್ರವನ್ನು ಚೆನ್ನಾಗಿ ವ್ಯಾಸಂಗಮಾಡಿ ತೇರ್ಗಡೆಹೊಂದಿದ ಸ್ತ್ರೀವೈದ್ಯರುಗಳ (ಲೇಡಿ ಡಾಕ್ಟರ್ಸ್) ನ್ನು ನೇಮಿಸಿರುತ್ತಾರೆ. ಗರ್ಭಿಣಿಯರ ಪರಿಚರ್ಯೆಕ್ಕಾಗಿ ನುರಿತ ಸೂಲಗಿತ್ತಿ (ಮಿಡ್‌ವೈಫ್) ಯರನ್ನು ನೇಮಿಸಿರುತ್ತಾರೆ. ಶಿಶುಗಳೂ ಬಾಣಂತಿಯರೂ ಸೌಖ್ಯದಿಂದಿರಬೇಕೆಂಬುದೇ ನಮ್ಮ ಸರ್ಕಾರದ ಆಶಯವಾಗಿರುವುದರಿಂದ ಈ ವೈದ್ಯಶಾಲೆಗಳ ಪ್ರಯೋಜನವನ್ನು ಜಾತಿಭೇದವಿಲ್ಲದೆ ಪ್ರಜಾಸಮುದಾಯವೆಲ್ಲವೂ ಹೊಂದಬಹುದಾಗಿರುತ್ತದೆ. ಈ ಪ್ರಸೂತಿ ವೈದ್ಯವನ್ನು ಕುಶಲೆಯರೂ, ಅನುಭವಸ್ಥರೂ ಆದ ವೈದ್ಯಸ್ತ್ರೀಯೆಲ್ಲರೂ ತಿಳಿದಿರುತ್ತಾರೆ.

೫೫. ಹೆತ್ತಮನೆ (ಸೂತಿಕಾಗೃಹ) ಯನ್ನು ಹತ್ತು ದಿವಸದವರಿವಿಗೆ ಬಹಳ ಎಚ್ಚರಿಕೆಯಿಂದ ಕಾಪಾಡಿಕೊಂಡಿರಬೇಕು. ಆ ಹೆರಿಗೆಮನೆಯ ಹೊರಬಾಗಿಲಿನ ಎರಡು ಪಕ್ಕದಲ್ಲೂ ಒನಕೆ ಹಾರೆ ಮುಂತಾದ ಆಯುಧಗಳನ್ನು ಇಡಬೇಕು. ಅಗ್ಗಿಷ್ಟಿಕೆಯನ್ನಿಡಬೇಕು. ಅದರಲ್ಲಿ ಧೂಪದ ಚಕ್ಕೆ ಹಾಕಬೇಕು. ದೊಡ್ಡ ದೊಡ್ಡ ದೀಪದ ಕಂಬಗಳಲ್ಲಿ ದೀಪಗಳನ್ನು ಹತ್ತಿಸಿರಬೇಕು. ಬಾಗಿಲಿನಲ್ಲೂ ಹೊಸಲಿನ ಮೇಲೆಯೂ ಬಣ್ಣ ಬಣ್ಣದ ರಂಗವಲ್ಲಿಯ ಚಿತ್ರಗಳನ್ನು ಬರೆಯಬೇಕು.

೫೬. ಈ ರೀತಿ ಹತ್ತುದಿವಸಗಳೂ ಮಾಡಬೇಕಲ್ಲದೆ ಆರನೆಯ ದಿವಸ ರಾತ್ರಿಯಲ್ಲಿ ಬಾಣಂತಿಯ ಮನೆಯಲ್ಲಿ ಎಲ್ಲರೂ ಎಚ್ಚರವಾಗಿ ಮಗು ಮತ್ತು ಬಾಣಂತಿಯರನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಂಡಿರಬೇಕು. (ದೇವಕೀ ದೇವಿಯ ಅಷ್ಟಮ ಗರ್ಭದಲ್ಲಿ ಹುಟ್ಟುವ ಮಗುವು ಕಂಸನನ್ನು ಕೊಲ್ಲತಕ್ಕದ್ದಾಗುವುದೆಂಬ ಭವಿಷ್ಯತ್ತನ್ನು ತಿಳಿದ ಕಂಸನು ದೇವಕಿಯ ಏಳುಗರ್ಭಗಳಲ್ಲಿ ಹುಟ್ಟಿದ ಮಕ್ಕಳನ್ನು ಕೊಂದು ಎಂಟನೆಯ ಗರ್ಭದಲ್ಲಿ ಹುಟ್ಟಿದ ಮಗುವನ್ನು ಸಂಹರಿಸುವುದಕ್ಕಾಗಿ ಆ ಮಗುವನ್ನು ಕೈಯಲ್ಲಿ ಹಿಡಿದು ಕತ್ತಿಯಿಂದ ಕೊಲ್ಲಲು ಪ್ರಯತ್ನಪಟ್ಟಾಗ ಆಗ ದೈವೀ ಮಾಯೆ

**ಪುರುಷಾಃ ಶಸ್ತ್ರಹಸ್ತಾಶ್ಚ ನೃತ್ಯಗೀತೈಶ್ಚ ಯೋಷಿತಃ ।**
**ರಾತ್ರೌ ಜಾಗರಣಂ ಕುರ್ಯುರ್ದಶಮೇಽಹನಿ ಸೂತಿಕಾ ॥ ೩೭ ॥**

**ಸ್ನಾತಾ ಪೂರ್ವವಿಧಾನೇನ ರಕ್ಷಣೀಯಾ ಸಮೀರಣಾತ್ ।**
**ಬಾಲಸ್ಯ ಜಾತಮಾತ್ರಸ್ಯ ನಾಭಿಂ ಛಿತ್ವಾ ಯಥಾವಿಧಿ ॥ ೩೮ ॥**

**ತಾಲುಮುತ್ಥಾಪಯೇನ್ನಾರೀ ಪಿಚುನಾ ಶೋಧಯೇನ್ಮುಖಂ ।**
**ಬ್ರಾಹ್ಮೀ ಸುವರ್ಚಲಾ ಸೋಮಂ ಸೈಂಧವಂ ಪಿಪ್ಪಲೀ ವಚಾ ॥ ೩೯ ॥**

---

ಯಿಂದ ಬದಲಾಗಿದ್ದ ಶಿಶುರೂಪಿಯಾದ ದುರ್ಗಿಯು ಆಕಾಶಕ್ಕೆ ಹಾರಿ ಕಂಸನಿಗೆ ಶತ್ರುವಾದ ಮಗುವು ಗೋಕುಲದಲ್ಲಿ ಬೆಳೆಯುತ್ತಿದೆಯೆಂದು ಹೇಳಿದ ಸಂಗತಿ ಭಾಗವತದಲ್ಲಿದೆ. ಮಕ್ಕಳನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಮಾಯೆಯು ಎಲ್ಲರೂ ನಿದ್ರೆ ಮಾಡುತ್ತಾ ಇರುವಾಗ ಬಾಣಂತಿಯ ಗುಡಲು ಮನೆಗೆ ಆರನೆಯ ರಾತ್ರಿ ಬರುವುದೆಂದೂ ಆ ಕಾಲದಲ್ಲಿ ಎಲ್ಲರೂ ಎಚ್ಚರವಾಗಿದ್ದರೆ ಹಾಗೆಯೇ ಮಗುವನ್ನು ಬಿಟ್ಟು ಹೊರಟು ಹೋಗುವುದೆಂದು ಈಗಲೂ ರೂಢಿಯಲ್ಲಿ ಬಂದಿರುವ ಸಂಗತಿಯನ್ನು ಎಲ್ಲರೂ ತಿಳಿದೇ ಇರುವರು ಆದ್ದರಿಂದಲೇ ಹೆರಿಗೆಯ ಗುಡಲುಮನೆಯಲ್ಲಿರುವವರೆಲ್ಲರೂ ಎಚ್ಚರವಾಗಿರಬೇಕೆಂದು ತಿಳಿಸಿದಾರೆ.

೩೭. ಆ ಆರನೆಯ ರಾತ್ರಿ ಶಸ್ತ್ರಪಾಣಿಗಳಾದ ವೀರರು ಬಾಗಿಲಿನಲ್ಲಿ ಕಾವಲು ಇರಬೇಕು. ನೃತ್ಯವಾದ್ಯಗಳ ಧ್ವನಿಯು ಆಗುತ್ತಲಿರಬೇಕು. ಹೆಂಗಸರು ಹಾಡುಗಳನ್ನು ಹೇಳುತ್ತಿರಬೇಕು. ಈ ರೀತಿ ವಿನೋದವಾಗಿ ಜಾಗರಣೆಯನ್ನು ಮಾಡಿ ಆ ರಾತ್ರಿಯನ್ನು ಕಳೆಯಬೇಕು.

೩೮. ಈ ರೀತಿಯಾಗಿ ಹತ್ತು ದಿವಸಗಳು ಕಳೆದಮೇಲೆ ಹನ್ನೊಂದನೆಯ ದಿವಸ ಹಿಂದೆ ಹೇಳಿದ ವಿಧಾನವನ್ನು ಅನುಸರಿಸಿ ಬಾಣಂತಿಗೆ ಸ್ನಾನಮಾಡಿಸಬೇಕು. ಆ ಸಮಯದಲ್ಲಿ ಮಗುವನ್ನು ವಾಯುವಿನಿಂದ ಸಂರಕ್ಷಿಸಬೇಕು. ಮಗು ಹುಟ್ಟಿದ ಒಡನೆಯೇ ಶಾಸ್ತ್ರವಿಧಿಯನ್ನನುಸರಿಸಿ ಮಗುವಿನ ಹೊಕ್ಕಳನ್ನು ಕುಯಿದುಬಿಡಬೇಕು.

೩೯. ಮಗು ಹುಟ್ಟಿದೊಡನೆ ತಲೆಬಾಯಿಯನ್ನು ಅಥವಾ ನೆತ್ತಿ ಬಾಯನ್ನು ಅದುಮಿ ಕೂಡಿಸಬೇಕು. ನೆತ್ತಿ ಬಾಯಿಯನ್ನು ಬ್ರಹ್ಮರಂಧ್ರವೆಂದು ತಿಳಿದಿರಬೇಕು ಮಗುವು ತಾಯಿಯ ಜಠರದಲ್ಲಿದ್ದಾಗ ಅದಕ್ಕೆ ಆಹಾರವು ಈ ಬ್ರಹ್ಮರಂಧ್ರ (ನೆತ್ತಿ)

**ಕನಕಂ ಸರ್ಪಿಷಾ ದದ್ಯಾಲ್ಲೇಹ್ಯಮೇತದ್ದ್ವಿಜೋತ್ತಮ ।**
**ಲೇಹ್ಯೇನಾನೇನ ಮೇಧಾವೀ ಶೂರಃ ಪಂಡಿತ ಏವ ಚ　　॥ ೬೦ ॥**

**ದರ್ಶನೀಯೋ ಯಶಸ್ವೀ ಚ ಸುಭಗಃ ಸ ಭವಿಷ್ಯತಿ ।**
**ವಿಭೀತಕಾಸ್ಥಿ ಕ್ಷೌದ್ರೇಣ ಘೃಷ್ಟಂ ಶ್ರೇಷ್ಠಮಥಾಂಜನಂ　　॥ ೬೧ ॥**

**ನೇತ್ರರೋಗೇಷು ಬಾಲಾನಾಂ ಸಹರಿದ್ರಂ ಚ ಗೋರಸಂ ।**
**ಶಾರಿವಾ ಚಂದನಂ ಕುಷ್ಠಂ ಸಮಭಾಗಾನಿ ಕಾರಯೇತ್　　॥ ೬೨ ॥**

---

ದಿಂದಲೇ ಹೋಗಬೇಕು. (ಈಗಲೂ ನಿಮ್ಮ ನಿಮ್ಮ ನೆತ್ತಿಯನ್ನು ಮುಟ್ಟಿನೋಡಿ ಕೊಳ್ಳಿರಿ. ಅದು ಎಷ್ಟು ಮೃದುಭಾಗವುಳ್ಳದ್ದೆಂದು ನಿಮಗೇ ಗೊತ್ತಾಗುವುದು.) ಮತ್ತು ಮಗು ಹುಟ್ಟಿದ ತಕ್ಷಣ ಅದನ್ನು ಹಿಂದೆಯೇ ವಿವರಿಸಿದಂತೆ ಬಿಸಿನೀರಿನಿಂದ ತೊಳೆದು ಹತ್ತಿಯಿಂದಾಗಲೀ ಹತ್ತಿಯ ಬಟ್ಟೆಗಳಿಂದಾಗಲೀ ಜಾಗರೂಕತೆಯಿಂದ ಒರಸಬೇಕು. ಆಮೇಲೆ ಮಗುವಿನ ಬಾಯಿಯನ್ನು ಮೆಲ್ಲಗೆ ಬಿಡಿಸಿ ಒಂದೆಲಗನಸೊಪ್ಪು ಸುವರ್ಚಲವಣ ಸೋಮಲತೆ ಸೈಂಧಲವಣ ಹಿಪ್ಪಲೀ ಬಜೆಗಳನ್ನೂ ಚಿನ್ನವನ್ನೂ ಗಂಧದಕಲ್ಲಿನ ಮೇಲೆ ತೇದು ಅದರ ಲೇಹವನ್ನು ತುಪ್ಪದಲ್ಲಿ ಕಲಸಿ ಬಾಯಿಗೆ ಚೀಪಿಸ ಬೇಕು. (ಮಗುವಿನ ಬಾಯಿ ಬಿಡಿಸಿ ಹತ್ತಿ ಬತ್ತಿಯಿಂದ ಈ ಲೇಹವನ್ನು ನಾಲಿಗೆಗೆ ಸವರುತ್ತ ಬಂದರೆ ಜನ್ಮಾಂತರಾಭ್ಯಾಸದಿಂದ ಅದನ್ನು ಮಗುವು ಹೊಟ್ಟೆಗೆ ನುಂಗು ವುದು) ಮಗುವು ಜನಿಸಿದೊಡನೆಯೇ ಈ ವಿಧವಾದ ಲೇಹವನ್ನು ಅದಕ್ಕೆ ತಿನ್ನಿಸೋ ಣದರಿಂದ ಮುಂದೆ ಆ ಮಗುವು ಬೆಳೆದು ದೊಡ್ಡವನಾದಾಗ ಮೇಧಾವಿಯಾಗಿಯೂ ಶೂರನಾಗಿಯೂ ಪಂಡಿತನಾಗಿಯೂ ಪ್ರಸಿದ್ಧಿ ಹೊಂದುವನು.

೬೦. ಇಷ್ಟೇ ಅಲ್ಲ. ಈ ಲೇಹ್ಯಸೇವನೆಯಿಂದ ಆ ಮಗುವು ಬಲು ಸುಂದರವಾಗಿ ದರ್ಶನೀಯವಾಗುವುದು. ಅವನು ದೊಡ್ಡವನಾದಮೇಲೆ ಮಹಾ ಯಶಸ್ವಿಯಾಗಿಯೂ ಸೌಭಾಗ್ಯಶಾಲಿಯಾಗಿಯೂ ಪರಿಣಮಿಸುವನು.

೬೧. ಮಕ್ಕಳಿಗೆ ಕಣ್ಣುನೋವೇನಾದರೂ ಬಂದರೆ ತಾರೇಕಾಯಿತಿರಳನ್ನು ತೇದು ಜೇನುತುಪ್ಪದಲ್ಲಿ ಕಲಸಿ ಅಂಜನ (ಕಪ್ಪು) ದಂತೆ ಮಾಡಿ ಅದನ್ನು ಕಣ್ಣಿಗೆ ಹಚ್ಚಿದರೆ ಕಣ್ಣುನೋವು ವಾಸಿಯಾಗುವುದು.

೬೨. ಅರಿಶಿನ ಗೋರೋಚನ ಸೊಗದೇಬೇರು ಚಂಗಲಕೋಷ್ಠದ ಗಂಧ ಗಳನ್ನು ಸಮಭಾಗವಾಗಿ ತೇದು (ಅರೆದು) ಕಲ್ಕಮಾಡಿ ಮಕ್ಕಳ ತಲೆಗೆ ಹಚ್ಚಿ ನೀರು ಎರೆದರೆ ಕಣ್ಣುನೋವು ವಾಸಿಯಾಗುವುದು.

ಶಿರೋಲೇಪಮಿದಂ ದದ್ಯಾದಕ್ಷಿರೋಗವಿನಾಶನಂ ।
ಆಮ್ರಾಸ್ಥಿ ಸೈಂಧವಂ ಲಾಜಾ ಮಧುನಾ ಸಹ ಲೇಹಯೇತ್ ॥ ೬೩ ॥

ಏಷ ಲೇಪವರಃ ಶ್ರೇಷ್ಠ ಶ್ಛರ್ದಿಪ್ರಶಮನಃ ಶುಭಃ ।
ಅಪಾಮಾರ್ಗವಿಡಂಗಾನಿ ಪಿಪ್ಪಲೀ ಮರಿಚಂ ತಥಾ ॥ ೬೪ ॥

ಸೈಂಧವಂ ತಂಡುಲಂ ಚೈವ ಮಧುಸರ್ಪಿಃ ಸಮನ್ವಿತಂ ।
ವ್ಯಾಘ್ರೀರಸೇನ ಲೇಹೋಯಂ ಹಿಕ್ಕಾಶ್ವಾಸವಿನಾಶನಃ ॥ ೬೫ ॥

ವಿಭೀತಕತ್ವಚಾ ಶ್ರೇಷ್ಠಂ ಹರಿತಾಲಂ ಮನಃಶಿಲಾ ।
ಏತತ್ತೈಲಂ ಪಚೇದ್ದದ್ರುಪಾಮಾಕಿಟಿಭನಾಶನಂ ॥ ೬೬ ॥

ಕ್ಷೌದ್ರೇಣ ಲೇಹ್ಯಾ ತುವರಾ ಪಿಪ್ಪಲ್ಯತಿವಿಷಾಪಹಾ ।
ಶ್ಲೇಷ್ಮರೋಗೇಷು ಸರ್ವೇಷು ಬಾಲಾನಾಂ ಭೇಷಜಂ ಪರಂ ॥ ೬೭ ॥

---

೬೩. ಮಕ್ಕಳು ಆಗಿಂದಾಗ್ಗೆ ಕುಡಿದ ಹಾಲನ್ನು ಕಕ್ಕಿ (ವಾಂತಿ) ಕೊಳ್ಳುವುದುಂಟು. ಈ ಸಂದರ್ಭದಲ್ಲಿ ಮಾವಿನ ಓಟೆಯನ್ನು ತೇದು ಸೈಂಧವಲವಣದ ಪುಡಿಯಲ್ಲಿ ಬೆರಸಿ ಅದನ್ನು ಅರಳು ಹಿಟ್ಟು ಜೇನುತುಪ್ಪದಲ್ಲಿ ಸೇರಿಸಿ ತಿನ್ನಿಸಿದರೆ ವಾಂತಿ ನಿಂತುಹೋಗುವುದು. (ಛರ್ದಿರ್ವಮನರೇತಸೋಃ ಎಂದು ನಾನಾರ್ಥರತ್ನಮಾಲೆಯಲ್ಲಿ ಹೇಳಿದೆ) ಇವುಗಳೆಲ್ಲಾ ಕೈಯೌಷಧಿಗಳೆಂದು ಹೇಳುತ್ತಾರೆ. ಈಗಲೂ ಇಂತಹ ಅನೇಕ ಔಷಧಗಳು ಹಿಂದಿನಕಾಲದ ಹೆಂಗಸರಿಗೆಲ್ಲಾ ಗೊತ್ತಿರುತ್ತದೆ.

೬೪-೬೫ ಉತ್ತರಣೀಬೇರು ವಾಯುವಿಳಂಗ ಹಿಪ್ಪಲಿ ಮೆಣಸು ಸೈಂಧವಲವಣ ಅಕ್ಕಿ ಇವುಗಳನ್ನು ಕುಟ್ಟಿ ಜೇನುತುಪ್ಪದಲ್ಲಿ ಕಲಸಿ ಅದಕ್ಕೆ ಹೆಗ್ಗುಳ್ಳದ ಬೇರಿನ ರಸವನ್ನು ಸೇರಿಸಿ ಲೇಹಮಾಡಿ ಕೊಟ್ಟರೆ(ತಿನ್ನಿಸಿದರೆ) ಮಕ್ಕಳಿಗೆ ಬರುವ ಬಿಕ್ಕಳಿಕೆಯು ಪರಿಹಾರವಾಗುವುದು.

೬೬. ತಾರೇಕಾಯಿನ ತೊಕ್ಕು ಅರಿದಳ ಮಣಿಶಿಲೆ ಇವುಗಳ ಪುಡಿಮಾಡಿ ಎಣ್ಣೆಗೆ ಹಾಕಿ ಕಾಯಿಸಿ ಅದನ್ನು ಲೇಪಿಸಿದರೆ (ಸವರಿದರೆ) ಮಕ್ಕಳಿಗೆ ಬರುವ ಹುಣ್ಣು ವಿಷಬಲು ಕಜ್ಜಿ ಮುಂತಾದ ಚರ್ಮರೋಗಗಳು ಮಾಯುವುವು.

೬೭. ಮಕ್ಕಳಿಗೆ ಶ್ಲೇಷ್ಮ (ಕಫ) ಕಟ್ಟಿ ಉಸುರು ತುಯ್ಯುತ್ತಿದ್ದರೆ ತೊಗರಿ ಹಿಪ್ಪಲಿ ಅತಿಬಜೆ ಇವುಗಳನ್ನು ತೇದು ಜೇನುತುಪ್ಪದಲ್ಲಿ ಕಲಸಿ ತಿನ್ನಿಸಿದರೆ ಕಫ ಕತ್ತರಿಸಿ ಸರಿಯಾಗಿ ಉಸಿರು ಬಿಡುವುವು.

ರೋಧ್ರತ್ವಙ್ಮಧುನಾ ಸಾರ್ಧಮತೀಸಾರವಿನಾಶಿನೀ ।
ಸಪ್ತಪರ್ಣತ್ವಕ್ ಚ ದೂರ್ವಾ ತಥಾ ಕಟುಕರೋಹಿಣೀ ॥ ೬೮ ॥

ಏತದುದ್ವರ್ತನಂ ಶ್ರೇಷ್ಠಂ ಸರ್ವಗ್ರಹವಿನಾಶನಂ ।
ಭಂಗಾಂ ವಚಾಂ ಶಂಖಪುಷ್ಪೀಮೇರಂಡಂ ಸಪ್ತಕರ್ಣಕಂ ॥ ೬೯ ॥

ಸಮನ್ತಪುಷ್ಪೀಸಂಯುಕ್ತಮಪಾಮಾರ್ಗಂ ಚ ಪುಷ್ಕರಂ ।
ಕ್ವಾಥಯಿತ್ವಾ ಚ ದಾತವ್ಯಂ ಸ್ನಾನಂ ಸದ್ಯಃ ಸುಖಾವಹಂ ॥ ೭೦ ॥

ಸರ್ಪಿಷಾ ನಿಂಬಪತ್ರಾಣಿ ಗೋವಿಷಾಣಂ ಘೃತಂ ಮಧು ।
ಏತೇನ ಧೂಪಿತೋ ಬಾಲೋ ಗ್ರಹದೋಷೈರ್ವಿಮುಚ್ಯತೆ ॥ ೭೧ ॥

ಅಪಾಮಾರ್ಗಸ್ಯ ಬೀಜಾನಿ ಬಿಲ್ವಮೂಲಫಲಾನಿ ಚ ।
ಅಗುರುಂ ಚಂದನಂ ಚೈವ ಸಪ್ತಪರ್ಣಸ್ಯ ವಲ್ಕಲಂ । ॥ ೭೨ ॥

---

೬೮. ಮಕ್ಕಳಿಗೆ ಅತಿಯಾಗಿ ಹೊಟ್ಟೆಹೋಗುತ್ತಿದ್ದರೆ (ಭೇದಿಯಾಗುತ್ತಿದ್ದರೆ) ಲೋಧ್ರದ ಚಕ್ಕೆಯನ್ನು ತೇದು ಜೇನುತುಪ್ಪದಲ್ಲಿ ಕಲಸಿ ತಿನ್ನಿಸಿದರೆ ಹೊಟ್ಟೆಹೋಗುವುದು ನಿಂತುಹೋಗುತ್ತದೆ.

೬೯. ಮಕ್ಕಳಿಗೆ ಏನಾದರೂ ಬಾಲಗ್ರಹ ದೋಷವಿದೆಯೆಂದು ಸಂದೇಹ ಬಂದರೆ ಏಳೆಲೆಬಾಳೆಲೆಯ ಗರಿಕೆಗಳನ್ನು ಅರೆದು ಕಟುಕರೋಹಿಣೀಗಂಧದಲ್ಲಿ ಬೆರಸಿ ತಲೆಗೊತ್ತಿ ನೀರೆರೆದರೆ ಗ್ರಹದೋಷ ನಿವಾರಣೆಯಾಗುವುದು.

೭೦. ಭಂಗೀಸೊಪ್ಪು ಬಜೆ ಕಪ್ಪೆಚಿಪ್ಪಿನಿಂದಾದ ಹರಳು ಏಳೆಲೆಬಾಳೆಲೆ ಕಳ್ಳೀಹಾಲು ಉತ್ತರಣೀಬೇರು ತಾವರೇಗೆಡ್ಡೆಗಳನ್ನು ಅರೆದು ಚೆನ್ನಾಗಿ ಕಾಯಿಸಿ ಅದನ್ನು ತಲೆಗೊತ್ತಿಕೊಂಡು ಸ್ನಾನಮಾಡಿಸಿದರೆ ಬಹಳ ಒಳ್ಳೆಯದು.

೭೧. ಗ್ರಹದೋಷವಿರುವ ಮಗುವಿಗೆ ಬೇವಿನಸೊಪ್ಪನ್ನು ತುಪ್ಪದಲ್ಲಿ ಅರೆದು ಹಸುವಿನ ಕೊಂಬನ್ನು ತೇದು ಜೇನುತುಪ್ಪ ತುಪ್ಪಗಳಲ್ಲಿ ಇವುಗಳನ್ನು ಬೆರಸಿ ಒಣಗಿಸಿ ಇದರ ಧೂಪವನ್ನು ಕೊಟ್ಟು ಹೊಗೆ ಹಾಕಿದರೆ ಗ್ರಹದೋಷಗಳೆಲ್ಲವೂ ನಿವಾರಣೆಯಾಗುವುವು.

೭೨-೭೫. ಬಾಲಗ್ರಹ ಹಿಡಿದ ಮಗುವಿಗೆ ಉತ್ತರಣೆಬೀಜ ಬಿಲ್ವಪತ್ರೆಬೇರು ಬಿಲ್ವಪತ್ರೆಹಣ್ಣಿನ ತಿರುಳು ಅಗರು ಚಂದನ ಏಳೆಲೆಬಾಳೆಲೆಗಳ ಕಲ್ಕವನ್ನು ಮಾಡಿ

**ಏತದಾಲೇಪನಂ ಕುರ್ಯಾತ್ಸರ್ವಗ್ರಹವಿನಾಶನಂ ।**
**ಮಾತರಶ್ಚ ಗ್ರಹಾಶ್ಚೈವ ಬಾಲಂ ತು ಬಲಿಕರ್ಮಣಾ ॥ ೭೩ ॥**

**ಕ್ಷಿಪ್ರಮೇವ ಪ್ರಮುಞ್ಚನ್ತಿ ತಸ್ಮಾದ್ಯತ್ನೇನ ಕಾರಯೇತ್ ।**
**ತರಕ್ಷ್ವೃಕ್ಷ ವರಾಹಾಣಾಂ ದಂಷ್ಟ್ರಾ ಗೋರೋಚನಾ ವಚಾ ॥ ೭೪ ॥**

**ರತ್ನಾನ್ಯಯಸ್ತಥಾ ಕೃಷ್ಣಂ ವಸ್ತ್ರಂ ಧಾರ್ಯಂ ತು ಬಾಲಕೈಃ ।**
**ಜಾತಸ್ಯ ರಾಮ ಬಾಲಸ್ಯ ಹೇಮನ್ತೇ ಪ್ರಥಮೇಽಥವಾ ॥ ೭೫ ॥**

---

ಮೈಗೆ ಲೇಪನ ಮಾಡಿದರೆ ಸರ್ವ ವಿಧವಾದ ಗ್ರಹದೋಷವೂ ನಿವಾರಣೆಯಾಗುತ್ತದೆ. ಮತ್ತು ವಕ್ರಗ್ರಹಗಳೇ ಮುಂತಾದ್ದು ಹಿಡಿದಿದ್ದರೆ ಬಲಿಕರ್ಮ ಮಾಡಿದರೆ ಗುಣ ವಾಗುತ್ತದೆ. ಈ ರೀತಿ ಅನ್ನಬಲಿಯನ್ನು ನಾಲ್ಕು ದಾರಿ ಕೂಡುವ ಚೌಕದಲ್ಲಿ ಹಾಕಿದರೆ ಆ ಕ್ಷಣ ಗ್ರಹಗಳೆಲ್ಲಾ ಓಡಿಹೋಗುವುದರಿಂದ ಈ ವಿಧವಾದ ಕೆಲಸಗಳನ್ನು ಅಗತ್ಯವಾಗಿ ಮಾಡಬೇಕು. ಹುಲಿಯುಗುರು ಕರಡಿ ಉಗುರು ಹಂದಿ ಉಗುರುಗಳನ್ನು ಬಾಲಕರ ಮೈಮೇಲೆ ಯಾವಾಗಲೂ ಹಾಕಿರಬೇಕು.

ಟಿಪ್ಪಣಿ : ಪೂರ್ವಿಕರು (ಈಗಲೂ ಅನೇಕರು) ಚಿಕ್ಕಮಕ್ಕಳಿಗೆ ಹನುಮಂತನ ತಾಳಿ ಹುಲಿಯುಗುರಿನ ತಾಳಿ ಮುಂತಾದುವುಗಳಿಗೆ ಚಿನ್ನದ ಹಿಡಿಗಳನ್ನು ಹಾಕಿಸಿ ಕತ್ತಿಗೆ ಕಟ್ಟುವ ಸಂಪ್ರದಾಯವನ್ನು ಎಲ್ಲರೂ ತಿಳಿದೇ ಇರುವರು. ಪೂರ್ವಿಕರು ಮಾಡಿರುವ ಶಾಸ್ತ್ರಗಳನ್ನು ಅರ್ಥವಿಲ್ಲದೆ ಪ್ರಯೋಜನವಿಲ್ಲದೇ ಮಾಡಿಯೇ ಇಲ್ಲ. ಈಗ ಪ್ರತಿಯೊಬ್ಬರೂ ಮಾಡುತ್ತಿರುವ ದಿನಚರ್ಯೆಗಳಲ್ಲಿ ತತ್ವತಃ ವಿಚಾರಮಾಡುವು ದಾದರೆ ಬೇಕಾದಷ್ಟು ಅರ್ಥಗಳಿವೆ. ಇದನ್ನು ಚಿಕಿತ್ಸಕ ಬುದ್ಧಿಯಿಂದ ವಿವೇಚಿಸ ಬೇಕು. ಮಕ್ಕಳಿಗೆ ಬಜೆಯು ಸರ್ವಶ್ರೇಷ್ಠವಾದ ಔಷಧವಾದುದರಿಂದ ಇದಕ್ಕೆ ಮಕ್ಕಳ ತಾಯಿಯೆಂಬ ಅನ್ವರ್ಥವಾದ ನಾಮಕರಣವನ್ನು ಮಾಡಿದಾರೆ. ಆದ್ದರಿಂದ ಬಜೆಯು ಗಂಧವು ಯಾವ ವಿಧದಲ್ಲಿಯಾದರೂ ಮಕ್ಕಳ ಹೊಟ್ಟೆಗೆ ಸೇರುತ್ತಲೇ ಇರಬೇಕು. ಮಾತುಕಥೆ ಬಂದಾಗಲೆಲ್ಲಾ ಮಕ್ಕಳ ಮೈಗೆ ಸ್ವಲ್ಪ ಇರಸುಮುರಸಾದಾಗಲೆಲ್ಲಾ ಬಜೆ ತೇದು ತಿನ್ನಿಸಿರೆಂದು ಈಗಲೂ ಹಳೇಕಾಲದ ನಮ್ಮಂತಹ ಜನರು ಹೇಳುತ್ತಿರುವುದು ಅನೇಕರಿಗೆ ತಿಳಿದೇ ಇದೆ. ಇಂತಹ ಔಷಧಗಳ ಮಾತು ಈಚಿಗೆ ವ್ಯಂಗ್ಯವಾಗುತ್ತಾ ಬಂದು ಮಾತು ಮಾತಿಗೂ ಆಸ್ಪತ್ರೆ ಆಸ್ಪತ್ರೆ ಎನ್ನುವ ಪ್ರಸಂಗ ಪ್ರಾಪ್ತವಾಗಿದೆ. ಕಾಲಾಯ ತಸ್ಮೈನಮಃ, ಇದೇ ಮೇರೆ ಗೋರೋಜನವೂ ಸಹ ಮಕ್ಕಳಿಗೆ ಪರಮ ಶ್ರೇಷ್ಠವಾದ ಔಷಧಿಯಾದುದರಿಂದಲೇ ಗೋರೋಜನ ಬಜೆಗಳು ಹೇಗಾದರೂ ಮಕ್ಕ

ಶಿಶಿರೇ ವಾಪಿ ಕರ್ತವ್ಯಂ ಕರ್ಣವೇಧಂ ತಥಾ ಶೃಣು ।
ಗ್ರಹಾಣಾಂ ತತ್ರ ಸರ್ವೇಷಾಂ ದಿನವಾರಃ ಪ್ರಶಸ್ಯತೆ ॥ ೭೬ ॥

ತಿಥಿಂ ಚತುರ್ಥೀಂ ನವಮೀಂ ವರ್ಜಯಿತ್ವಾ ಚತುರ್ದಶೀಂ ।
ಸಾವಿತ್ರಂ ವೈಷ್ಣವಂತ್ವಾಷ್ಟ್ರಮಾದಿತ್ಯಂ ಪೌಷ್ಣಮಾಶ್ವಿನಂ ॥ ೭೭ ॥

ಕರ್ಣವೇಧೇ ಪ್ರಶಸ್ಯಂತೇ ಸೋಮದೇವಂ ತಥೈವ ಚ ।
ಪೂರ್ವಾಹ್ಣೇ ಪೂಜನಂ ಕೃತ್ವಾ ಕೇಶವಸ್ಯ ಹರಸ್ಯ ಚ ॥ ೭೮ ॥

---

ಹತ್ತಿರ ಇದ್ದೇ ಇರಬೇಕೆಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದಾರೆ. ಇದೇರೀತಿ ಮಕ್ಕಳ ಮೈಮೇಲೆ ರತ್ನಾಭರಣ (ಮುತ್ತಿನ ಕಡಕು ಮುಂತಾದವು) ಗಳು ಇರಬೇಕು. ಮಕ್ಕಳಿಗೆ ಯಾವಾಗಲೂ ಕರೀಬಟ್ಟೆಯ ಅಂಗಿಯನ್ನೇ ಹೊಲಿಸಬೇಕು. (ಕೊಳೆಯಾದರೂ ಕಪ್ಪುಬಟ್ಟೆಯಾದರೆ ಅಸಹ್ಯವಾಗಿ ಕಾಣಿಸುವುದಿಲ್ಲಾ) ಈ ಮಾತುಗಳನ್ನೆಲ್ಲಾ ವಿನೋದಕ್ಕೂ ಅಲಂಕಾರಕ್ಕೂ ಹೇಳಿಲ್ಲವೆಂದೂ ಸರ್ವಗ್ರಹ ಸರ್ವಾರಿಷ್ಟ ನಿವಾರಣೆಗಳಿಗೋಸ್ಕರ ಇವುಗಳನ್ನು ಉಪಯೋಗಿಸಬೇಕೆಂದೂ ತಿಳಿದುಕೊಂಡು ಅದರಂತೆ ಆಚರಿಸಿ ಸುಖವನ್ನು ಹೊಂದಬೇಕು.

೭೬. ಇದುವರಿಗೆ ಬಾಣಂತಿಯರ ಮತ್ತು ಮಕ್ಕಳ ಔಷಧ ಅವರ ಶ್ರೇಯಸ್ಸುಗಳನ್ನು ಕುರಿತು ಹೇಳಿಯಾಯಿತು. ಇನ್ನು ಶುಭಕರ್ಮ ಸಂಸ್ಕಾರದಕಡೆ ತಿರುಗೋಣ. ಮಕ್ಕಳು ಹುಟ್ಟಿದೊಡನೆ ಮಾಡುವ ಕರ್ಮಗಳಿಗೆ ಜಾತಕರ್ಮವೆಂದು ಹೆಸರು. ಈ ವಿಚಾರವನ್ನು ಮೊದಲೇ ಹೇಳಿದೆ. ಕರ್ಣವೇಧೆ ಎಂದರೆ ಕಿವಿ ಚುಚ್ಚುವುದುಸಹ ಒಂದು ಸಂಸ್ಕಾರವೆನಿಸಿಕೊಂಡಿದೆ. ಮಗು ಹುಟ್ಟಿದ ಮೇಲೆ ಹೇಮಂತಋತು ಅಥವಾ ಶಿಶಿರಋತುವಿನಲ್ಲಿ ಅದಕ್ಕೆ ಕಿವಿಯನ್ನು ಚುಚ್ಚಬೇಕು. ಹೀಗೆಂದು ಎಂದೋ ಒಂದು ದಿನ ಚುಚ್ಚಿದರೆ ಆಗುವುದಿಲ್ಲ. ಅದಕ್ಕೂ ದಿನ, ವಾರ, ನಕ್ಷತ್ರಗಳನ್ನೂ ಗ್ರಹಬಲಗಳನ್ನೂ ನೋಡಿಸಿ ಜೋಯಿಸರಿಂದ ಲಗ್ನವಿಡಿಸಿ ಅಂತಹ ಲಗ್ನದಲ್ಲೇ ಕಿವಿಯನ್ನು ಚುಚ್ಚಬೇಕು.

೭೭-೭೮. ಮಕ್ಕಳ ಕಿವಿಯನ್ನು ಚುಚ್ಚುವುದಕ್ಕೆ ಚೌತಿ, ನವಮೀ, ಚತುರ್ದಶಿ ಈ ದಿವಸಗಳು ಪ್ರಶಸ್ತವಾದವುಗಳಲ್ಲ. ಹಸ್ತ (ಸಾವಿತ್ರಿ) ಶ್ರವಣ (ವೈಷ್ಣವ) ಚಿತ್ತ (ತ್ವಾಷ್ಟ್ರ) ಪುನರ್ವಸು (ಆದಿತ್ಯ) ರೇವತಿ (ಪೌಷ್ಣ) ಅಶ್ವಿನಿ (ಆಶ್ವಿನ) ಈ ನಕ್ಷತ್ರಗಳು ಕಿವಿ ಚುಚ್ಚಲು ಒಳ್ಳೇ ನಕ್ಷತ್ರಗಳು. ಸೋಮವಾರ ಬಹಳ ಪ್ರಶಸ್ತವಾದುದು. ಈರೀತಿ

**ಬ್ರಹ್ಮಣಶ್ಚಂದ್ರಸೂರ್ಯಾಭ್ಯಾಂ ದಿಗೀಶಾನಾಂ ತಥೈವ ಚ।**
**ನಾಸತ್ಯಯೋಃ ಸರಸ್ವತ್ಯಾ ಬ್ರಾಹ್ಮಣಾನಾಂ ಗವಾಂ ತಥಾ ॥ ೭೯ ॥**

**ಗುರೂಣಾಂ ಮಣ್ಡಲಂ ಕೃತ್ವಾ ತತ್ರ ದತ್ವಾ ಸುಖಾಸನಂ।**
**ದತ್ವೋಪವೇಶಯೇತ್ತತ್ರ ಧಾತ್ರೀಂ ಶುಕ್ಲಾಂಬರಾಂ ತಥಾ ॥ ೮೦ ॥**

**ಸ್ವಲಂಕೃತಾಂ ತದುತ್ಸಂಗೇ ಬಾಲಂ ಕೃತ್ವಾ ತು ಸಾಂತ್ವಿತಂ।**
**ಧೃತಸ್ಯ ನಿಶ್ಚಲಂ ಸಮ್ಯಗ್ಗಲೇ ಕುಕುರಸಾಂಕಿತೆ ॥ ೮೧ ॥**

---

ದಿನಶುದ್ಧಿಯನ್ನು ನೋಡಿ ಆ ದಿವಸ ಹಗಲು ಹರಿಹರಬ್ರಹ್ಮಾದಿಗಳನ್ನೂ, ಚಂದ್ರ ಸೂರ್ಯರನ್ನೂ, ಅಷ್ಟದಿಕ್ಪಾಲಕರನ್ನೂ, ಅಶ್ವಿನೀ ದೇವತೆಗಳನ್ನೂ, ಸರಸ್ವತಿಯನ್ನೂ, ಬ್ರಾಹ್ಮಣರನ್ನೂ, ಗೋವುಗಳನ್ನೂ, ಗುರುಗಳನ್ನೂ ಸಹ ವೈಭವದಿಂದ ಪೂಜೆಮಾಡಿ ಹಸೇಜಗಲಿಯ ಮೇಲೆ ಹಸೇಮಣೆಯನ್ನು ಹಾಕಿ ಅದರ ಮೇಲೆ ಮೃದುವಾದ ವಸ್ತ್ರಗಳನ್ನು ಪೂರ್ವ ಅಥವಾ ಉತ್ತರಾಗ್ರವಾಗಿ ಹಾಕಿ ಅಲ್ಲಿ ಬಿಳೀಸೀರೆಯನ್ನುಟ್ಟುಕೊಂಡಿರುವ ದಾದಿಯನ್ನು ಕೂರಿಸಿ ಬಳಿಕ ಸರ್ವಾಭರಣಸಂಪನ್ನಳಾದ ಮಗುವಿನ ತಾಯಿಯು ಬಂದು ಹಸೇಮಣೆಯಮೇಲೆ ಕೂತುಕೊಳ್ಳಬೇಕು. ಆ ರೀತಿ ಆಕೆಯು ಕುಳಿತುಕೊಂಡ ಕೂಡಲೇ ದಾದಿಯು ಮಗುವನ್ನು ಅಳದೇ ಇದ್ದಂತೆ ಆಟವಾಡಿಸುತ್ತಾ ಸಮಾಧಾನಪಡಿಸಿ ಆ ಮಗುವನ್ನು ತಾಯಿಯ ತೊಡೆಯಮೇಲೆ ಕೂರಿಸಬೇಕು. (ಮಲಗಿಸಬೇಕು) ಕಿವಿ ಚುಚ್ಚುವ ಭಾಗವನ್ನು ಮೊದಲು ಸ್ವಲ್ಪ ಸುಣ್ಣದಿಂದ ಗುರುತುಮಾಡಿ ಅದರ ಮೇಲೆ ಬಹು ಹಗುರವಾಗಿ ಒಂದಾವರ್ತಿ ಚುಚ್ಚಿ ಚೆನ್ನಾಗಿ ಗುರುತಿಟ್ಟುಕೊಳ್ಳಬೇಕು.

ಆ ಬಳಿಕ ವೈದ್ಯನನ್ನು ಕರೆದು ಅವನಿಂದ ಮಗುವಿನ ಬಲಗಿವಿಯನ್ನೂ ಮುತ್ತೈದೆಯವರಿಂದ ಎಡಗಿವಿಯನ್ನೂ ಚುಚ್ಚಿಸಬೇಕು. ಚುಚ್ಚುವುದಕ್ಕಿಂತ ಮುಂಚೆ ಸೂಜಿಗೆ ಧಾರವನ್ನು ಪೋಣಿಸಿ ಇಟ್ಟುಕೊಂಡಿದ್ದು ಆ ಸೂಜಿಯ ತುದಿಗೆ ಎಣ್ಣೆಯನ್ನು ಸವರಿ ಕಿವಿಗೂ ಚೆನ್ನಾಗಿ ಎಣ್ಣೆ (ಹರಳೆಣ್ಣೆ) ಯನ್ನು ಸವರಿ ಬಲು ಎಚ್ಚರಿಕೆಯಿಂದ ಕಿವಿಯನ್ನು ಚುಚ್ಚಿ ಆ ತೂತನ್ನು ಧಾರದಿಂದಲೇ ಕಟ್ಟಿಬಿಡಬೇಕು. ಪುನಃ ರಕ್ತ ಬರದಂತೆ ಎಣ್ಣೆಯನ್ನು ಸವರಿ ಅದನ್ನು ಉಫ್ ಎಂದು ಊದಿ (ಈ ಸಂದರ್ಭದಲ್ಲಿ ಕೊಬ್ಬರಿಗಿಟಕನ್ನು ಮುರಿದು ಚೂರು ಚೂರು ಮಾಡುವ ಒಂದು ವಾಡಿಕೆಯೂ ಇದೆ.) ಮಗುವಿಗೆ ನೋವು ಆಗದಂತೆ ನೋಡಿಕೊಳ್ಳಬೇಕು. ಕಿವಿಯ ತೂತು ಮಾದಮೇಲೆ

ವಿಧ್ಯೇದ್ದೈವಕೃತೇ ಛಿದ್ರೇ ಸಕೃದೇವ ತು ಲಾಘವಾತ್ ।
ಪ್ರಾಗ್ದಕ್ಷಿಣಂ ಕುಮಾರಸ್ಯ ಭಿಷಗ್ವಾಮಂ ತು ಯೋಷಿತಃ ॥ ೮೨ ॥

ತೈಲಾಭ್ಯಕ್ತೇ ತತಃ ಕರ್ಣೇ ಕಾರ್ಯಮಾಭರಣಂ ಭವೇತ್ ।
ಕರ್ಣವೇಧದಿನೇ ವಿಪ್ರಂ ಸಾಂವತ್ಸರಚಿಕಿತ್ಸಕೌ ।
ಪೂಜ್ಯಾಶ್ಚಾವಿಧವಾ ನಾರ್ಯಃ ಸುಹೃದಶ್ಚ ತಥಾ ದ್ವಿಜಾಃ ॥ ೮೩ ॥

ಚತುರ್ಥೇ,ಮಾಸಿ ಕರ್ತವ್ಯಂ ಶಿಶೋರ್ನಿಷ್ಕ್ರಮಣಂ ಗೃಹಾತ್ ।
ಸೌರಭೌಮದಿನಂ ಚೈವ ತಿಥಿಂ ರಿಕ್ತಾಂ ಚ ವರ್ಜಯೇತ್ ॥ ೮೪ ॥

ಚತುರ್ಥೀಂ ನವಮೀಂ ಚೈವ ರಿಕ್ತಾಂ ಚೈವ ಚತುರ್ದಶೀಂ ।
ಆರ್ಯಮ್ಣಂ ವೈಷ್ಣವಂ ಹಸ್ತಮಾದಿತ್ಯಂ ಪೌಷಮಶ್ವಿನಂ ॥ ೮೫ ॥

ಭಾಗ್ಯಂ ತ್ವಾಷ್ಟ್ರಂ ಚ ಪುಷ್ಯಂ ಚ ತತ್ರ ಕರ್ಮಣಿ ಶಸ್ಯತೇ ।
ದಿಗೀಶಾನಾಂ ದಿಶಂ ತತ್ರ ತಥಾ ಚಂದ್ರಾರ್ಕಯೋರ್ದ್ವಿಜ ॥ ೮೬ ॥

---

ಧಾರವನ್ನು ತೆಗೆದು ಸುವರ್ಣಾಭರಣಗಳಿಂದ ಅಲಂಕರಿಸಬೇಕು. ಅದನ್ನು ಚುಚ್ಚುವ ದಿವಸ ಬ್ರಾಹ್ಮಣ ಮುತ್ತೈದೆಯರಿಗೂ, ಪುರೋಹಿತರು, ಜೋಯಿಸರು, ವೈದ್ಯರು ಇವರುಗಳಿಗೂ ಊಟಕ್ಕೆ ಹೇಳಿ ಉಪಚಾರಮಾಡಬೇಕು. ಮತ್ತು ಸ್ನೇಹಿತರ ಗುಂಪನ್ನೂ ಸಹ ಕರೆಯಿಸಿ ತಿಂಡಿಗಳನ್ನು ಕೊಡಬೇಕು.

೮೪-೮೮. ಹುಟ್ಟಿದ ಮಗುವನ್ನು ನಾಲ್ಕು ತಿಂಗಳು ತನಕ ಬೀದಿಗೆ ಕರೆದು ಕೊಂಡು ಹೋಗಕೂಡದು. ನಾಲ್ಕನೇ ತಿಂಗಳಿನಲ್ಲಿ ಮಗುವನ್ನು ಹೊರಗೆ ಕರೆದು ಕೊಂಡು ಹೋಗುವುದಕ್ಕೂ ಒಂದು ಶಾಸ್ತ್ರ ಉಂಟು. ಇದಕ್ಕೆ ನಿಷ್ಕ್ರಮಣ (ಹೊರಕ್ಕೆ ಹೊರಡುವುದು) ಎಂದು ಹೆಸರು. ಭಾನುವಾರ, ಮಂಗಳವಾರಗಳಲ್ಲಿಯೂ ರಿಕ್ತತಿಥಿ ಗಳಲ್ಲಿಯೂ ಮಗುವನ್ನು ಹೊರಗೆ ಕರೆದುಕೊಂಡು ಹೋಗಬಾರದು. ಮತ್ತು ಚತುರ್ಥಿ ನವಮೀ, ಚತುರ್ದಶೀ ಈ ತಿಥಿಗಳೂ ಸಹ ಪ್ರಶಸ್ತವಾದುವುಗಳಲ್ಲ. ಉತ್ತರೆ (ಆರ್ಯಮ್ಣ) ಹಸ್ತ, ಪುನರ್ವಸು, ಪುಷ್ಯ, ಅಶ್ವಿನಿ, ಚಿತ್ತೆ ಈ ನಕ್ಷತ್ರಗಳು ನಿಷ್ಕ್ರಮಣಕ್ಕೆ ಯೋಗ್ಯವಾದ ನಕ್ಷತ್ರಗಳು. ಇಂತಹ ಶುಭವಾದ ನಕ್ಷತ್ರಗಳನ್ನು ನೋಡಿ ಆ ದಿವಸ ಪರಮಾತ್ಮನಾದ ಮಹಾವಿಷ್ಣುವನ್ನೂ, ಆಕಾಶವನ್ನೂ ಪೂಜಿಸಿ ಮಗುವಿಗೆ ಅಲಂಕಾರ ಮಾಡಿ ಅದನ್ನು ಕರೆದುಕೊಂಡು ದಾದಿ (ಧಾತ್ರೀ) ಯು ಹೊರಕ್ಕೆ ಹೊರಡಬೇಕು. ಆಗ ದ್ವಿಜರ ಪುಣ್ಯಾಹವಾಚನಗಳಾಗುತ್ತಿರಬೇಕು, ಸ್ವಸ್ತಿವಾಚನಗಳಾಗುತ್ತಿರಬೇಕು.

ಪೂಜನಂ ವಾಸುದೇವಸ್ಯ ಗಗನಸ್ಯ ಚ ಕಾರಯೇತ್ ।
ತತ್ರ ಸ್ವಲಂಕೃತಾ ಧಾತ್ರೀ ಬಾಲಮಾದಾಯ ಪೂಜಿತಂ ॥ ೮೭ ॥

ಬಹಿರ್ನಿಷ್ಕ್ರಾಮಯೇದ್ಗೇಹಾಚ್ಛಂಖಪುಣ್ಯಾಹನಿಸ್ವನೈಃ ।
ತತಸ್ತತ್ರ ಪಠೇನ್ಮಂತ್ರಂ ಯಂ ತು ರಾಮ ನಿಬೋಧ ಮೇ ॥ ೮೮ ॥

ಚಂದ್ರಾರ್ಕಯೋರ್ದಿಗೀಶಾನಾಂ ದಿಶಾಂ ಚ ಗಗನಸ್ಯ ಚ ।
ನಿಕ್ಷೇಪಾರ್ಥಮಿದಂ ದದ್ಮಿ ತೇ ಮೆ ರಕ್ಷಂತು ಸರ್ವದಾ ॥ ೮೯ ॥

ಅಪ್ರಮತ್ತಂ ಪ್ರಮತ್ತಂ ವಾ ದಿವಾ ರಾತ್ರಾವಥಾಪಿ ವಾ ।
ರಕ್ಷಂತು ಸರ್ವತಃ ಸರ್ವೇ ದೇವಾಃ ಶಕ್ರಪುರೋಗಮಾಃ ॥ ೯೦ ॥

ಸ್ತ್ರೀಣಾಮವಿಧವಾನಾಂ ತು ದ್ವಿಜಾನಾಂ ಸುಹೃದಾಂ ತಥಾ ।
ತದಾ ತು ಪೂಜಾ ಕರ್ತವ್ಯಾ ಗೀತನೃತ್ಯೈಸ್ತಥೋತ್ಸವೈಃ ॥ ೯೧ ॥

---

ನಾನಾ ವಿಧವಾದ ವಾದ್ಯಧ್ವನಿಗಳಾಗುತ್ತಿರಬೇಕು. ಅಂತಹ ಸಮಯದಲ್ಲಿ ಮಗುವನ್ನು ಹೊರಕ್ಕೆ ಕರೆದುಕೊಂಡು ಹೋಗುವಾಗ ಮುಂದೆ ಹೇಳುವ ಮಂತ್ರವನ್ನು ಹೇಳಬೇಕು. ಆ ಮಂತ್ರವಾವುದೆಂಬುದನ್ನು ಈಗ ನಿನಗೆ ತಿಳಿಸುತ್ತೇನೆ, ಕೇಳು. ಪರಶುರಾಮನೇ!

೮೯-೯೦. ಚಂದ್ರಾರ್ಕಯೋರ್ದಿಗೀಶಾನಾಮ್ ಎಂದು ಆರಂಭಮಾಡಿ ಶಕ್ರಪುರೋಗಮಾಃ ಎನ್ನುವವರೆಗೆ ಈ ೮೯-೯೦ ನೇ ಎರಡು ಶ್ಲೋಕಗಳೇ ಆ ಮಂತ್ರಗಳು. ಅವುಗಳ ಅರ್ಥವನ್ನಿಲ್ಲಿ ಬರೆಯುತ್ತೇನೆ.

ಚಂದ್ರಸೂರ್ಯರಿಗೂ, ಅಷ್ಟದಿಕ್ಪಾಲಕರಿಗೂ ಆಕಾಶಕ್ಕೂ ಸಹ ಈ ಮಗುವನ್ನು ಒಪ್ಪಿಸಿಕೊಟ್ಟಿದ್ದೇನೆ. ನೀವೆಲ್ಲರೂ ಈ ಮಗುವನ್ನು ಕಾಪಾಡಿಕೊಂಡಿರಬೇಕು. ಈ ಮಗುವು ಜ್ಞಾನದಿಂದಾಗಲೀ, ಅಜ್ಞಾನದಿಂದಾಗಲೀ, ರಾತ್ರಿಯಲ್ಲಾಗಲೀ, ಹಗಲಲ್ಲಿಯಾಗಲೀ ಎಲ್ಲೇ ಬಿದ್ದಿರಲಿ ಎಲೈ ಇಂದ್ರಾದಿದೇವತೆಗಳಿರಾ; ನೀವು ಈ ಮಗುವನ್ನು ಸಂರಕ್ಷಣೆಮಾಡಿಕೊಂಡಿರಬೇಕು.

೯೧. ಈ ನಿಷ್ಕ್ರಮಣೋತ್ಸವದ ದಿವಸ ಒಂದು ದೊಡ್ಡ ಸಂತೋಷಕೂಟವನ್ನು ಏರ್ಪಡಿಸಿ ಬ್ರಾಹ್ಮಣ ಮುತ್ತೈದೆಯರುಗಳನ್ನೂ, ಆಪ್ತ ಬಂಧುಮಿತ್ರರನ್ನೂ ಕರಸಿ ಅವರ ಮುಂದೆ ಗೀತವಾದ್ಯ ನೃತ್ಯಗಳನ್ನು ಮಾಡಿಸಿ ಅವರನ್ನು ಕಾಲೋಚಿತವಾದ (ಟೀ ಪಾರ್ಟಿ) ಉಪಾಹಾರಗಳಿಂದ ಸಂತೋಷಪಡಿಸ (ಪೂಜಿಸ) ಬೇಕು.

**ಪಂಚಮೇ ಚ ತಥಾ ಮಾಸಿ ಭೂಮೌ ತಮುಪವೇಶಯೇತ್ ।
ತತ್ರ ಸರ್ವೇಗ್ರಹಾಃ ಶಸ್ತಾ ಭೌಮೋ ರಾಮ ವಿಶೇಷತಃ　　॥ ೯೨ ॥**

**ತಿಥಿಂ ಚ ವರ್ಜಯೇದ್ರಿಕ್ತಾನ್ಯೃಕ್ಷಾಣಿ ಶೃಣು ಭಾರ್ಗವ ।
ಉತ್ತರಾತ್ರಿತಯಂ ಸೌಮ್ಯಂ ಚಾಶ್ವತ್ಥಂ ಶಕ್ರದೈವತಂ　　॥ ೯೩ ॥**

**ಪ್ರಾಜಾಪತ್ಯಂ ಚ ಹಸ್ತಂ ಚ ಶಸ್ತಮಾಶ್ವಿನದೈವತಂ ।
ವರಾಹಂ ಪೂಜಯೇದ್ದೇವಂ ಪೃಥಿವೀಂ ಚ ದ್ವಿಜೋತ್ತಮ　　॥ ೯೪ ॥**

**ಪೂಜನಂ ಸರ್ವತಃ ಕೃತ್ವಾ ಗುರುದೇವದ್ವಿಜನ್ಮನಾಂ ।
ಭೂಭಾಗಮುಪಲಿಪ್ಯಾಥ ಕೃತ್ವಾ ತತ್ರ ತು ಮಣ್ಡಲಂ　　॥ ೯೫ ॥**

**ಶಂಖಪುಣ್ಯಾಹಶಬ್ದೇನ ಭೂಮೌ ತಮುಪವೇಶಯೇತ್ ।
ಮಂತ್ರಶ್ಚಾತ್ರ ಭವೇದ್ರಾಮ ತನ್ಮೇ ನಿಗದತಃ ಶೃಣು　　॥ ೯೬ ॥**

---

೯೨. ಐದನೆಯ ತಿಂಗಳಲ್ಲಿ ಮಗುವನ್ನು ನೆಲದಮೇಲೆ ಮಲಗಿಸಬೇಕು. ಮಗುವು ಈ ಸಮಯದಲ್ಲಿ ತನ್ನಷ್ಟಕ್ಕೆ ತಾನೇ ಮಗುಚಿಕೊಂಡು ತಲೆಯನ್ನೆತ್ತಿ ಆಟವಾಡುವುದು. ಇದು, ಜನಸಾಮಾನ್ಯರಿಗೆಲ್ಲಾ ಗೊತ್ತಾದ ವಿಷಯವೇ ಆಗಿದೆ. ಈ ರೀತಿ ಭೂಮಿಯ (ನೆಲದ) ಮೇಲೆ ಮಲಗಿಸುವುದಕ್ಕೂ ಒಂದು ಶಾಸ್ತ್ರವಿದೆ. ಅದನ್ನು ಮುಂದೆ ವಿವರಿಸಲಾಗುವುದು. ಇದಕ್ಕೆ ಎಲ್ಲಾ ವಾರಗಳೂ ಅದರಲ್ಲೂ ಮಂಗಳವಾರ ವಂತೂ ಬಹಳ ಒಳ್ಳೆಯದೆಂದು ತಿಳಿಯಬೇಕು.

೯೩. ರಿಕ್ತತಿಥಿಗಳನ್ನೂ ರಿಕ್ತನಕ್ಷತ್ರಗಳನ್ನೂ ಬಿಟ್ಟು ಉಳಿದ ತಿಥಿ ನಕ್ಷತ್ರ ಗಳೆಲ್ಲವೂ ಒಳ್ಳೆಯವೇ ಆಗಿವೆ. ಉತ್ತರ, ಹಸ್ತ, ಚಿತ್ತ, ಮೃಗಶಿರ, ವಿಶಾಖೆ, ಉತ್ತರಾ ಭಾದ್ರಪದ, ಅಶ್ವಿನೀ ನಕ್ಷತ್ರಗಳಾದರೆ ಬಹಳ ಉತ್ತಮವೇ ಆಯಿತು.

೯೪-೯೬. ಮಗುವನ್ನು ನೆಲದಮೇಲೆ ಮಲಗಿಸುವುದಕ್ಕಿಂತ ಮುಂಚೆ ವರಾಹ ಸ್ವಾಮಿಯ ಪೂಜೆಯನ್ನು ಮಾಡಬೇಕು. ಬಳಿಕ ಭೂದೇವಿಯನ್ನು ಪೂಜಿಸಿ ಗುರು ದೇವತೆಗಳನ್ನೂ, ಬ್ರಾಹ್ಮಣರನ್ನೂ ಭಕ್ತಿಯಿಂದ ಪೂಜೆಮಾಡಿ ಭೂಮಿಯನ್ನು ಚೆನ್ನಾಗಿ ಗುಡಿಸಿ ಮಂಡಲವನ್ನುಮಾಡಿ ಅದರ ಮೇಲೆ ರಂಗವಲ್ಲಿಗಳ ಚಿತ್ರಗಳನ್ನು ಬರೆದು ಮಗುವನ್ನು ಆ ಮಂಡಲದ ಮಧ್ಯಭೂಭಾಗದಲ್ಲಿ ಮಲಗಿಸಬೇಕು. ಆಗ ಶಂಖ ಪುಣ್ಯಾಹಾದಿಗಳ ಶಬ್ದವಾಗುತ್ತಿರಬೇಕು. ಆ ಸಮಯದಲ್ಲಿ ಮಗುವಿನ ತಂದೆಯು ಮುಂದೆ ವಿವರಿಸುವಂತೆ ಭೂಮಿಯನ್ನು ಪ್ರಾರ್ಥಿಸುವ ಮಂತ್ರವನ್ನು ಹೇಳಬೇಕು.

ರಕ್ಷಣಂ ವಸುಧೇದೇವಿ ಸದಾ ಸರ್ವಗತಂ ಶುಭೇ ।
ಆಯುಃ ಪ್ರಮಾಣಂ ಸಕಲಂ ನಿಕ್ಷೇಪಸ್ತೇ ಹರಿಪ್ರಿಯೆ ॥ ೯೭ ॥

ಅಂತರಾದಾಯುಷಸ್ತಸ್ಯ ಯೇ ಕೇಚಿತ್ಪರಿಪಂಥಿನಃ ।
ಜೀವಿತಾರೋಗ್ಯವಿತ್ತೇಷು ನಿರ್ದಹಸ್ವಾಚಿರೇಣ ತಾನ್ ॥ ೯೮ ॥

ವರೇಣ್ಯಾಶೇಷಭೂತಾನಾಂ ಮಾತಾ ತ್ವಮಸಿ ಕಾಮಧುಕ್ ।
ಅಜರಾ ಚಾಪ್ರಮೇಯಾ ಚ ಸರ್ವಭೂತನಮಸ್ಕೃತಾ ॥ ೯೯ ॥

ಚರಾಚರಾಣಾಂ ಭೂತಾನಾಂ ಪ್ರತಿಷ್ಠಾತ್ವಂ ತ್ವಮರ್ಹಸಿ ।
ಕುಮಾರಂ ಪಾಹಿ ಮಾತಸ್ತ್ವಂ ಬಾಲಂ ತದನುಮನ್ಯತಾಂ ॥ ೧೦೦ ॥

---

೯೭-೧೦೦. ರಕ್ಷಣಂ ವಸುಧೇ ದೇವಿ, ಎಂಬ ಶ್ಲೋಕದಿಂದ ಆರಂಭಮಾಡಿಕೊಂಡು ಕುಮಾರಂ ಪಾಹಿ ಮಾತಸ್ತ್ವಮ್ ಎಂಬ ಶ್ಲೋಕವು ಪೂರ್ತಿಯಾಗುವವರಿಗಿನ ನಾಲ್ಕು ಶ್ಲೋಕಗಳೇ ಆ ಮಂತ್ರಗಳು. ಅದರ ಕನ್ನಡದ ಅನುವಾದವನ್ನು ಇಲ್ಲಿ ಬರೆಯುತ್ತೇನೆ.

ಅಮ್ಮ ಭೂಮಾತೆಯೇ ಈ ಮಗು ನಿನ್ನದು. ಇದು ಎಲ್ಲೆಲ್ಲಿಯೋ ಬಿದ್ದಿರುತ್ತದೆ. ಇದು ಎಲ್ಲೆಲ್ಲಿ ಉರುಳಿಕೊಂಡು ಮುಗುಚಿಕೊಂಡು ಬಿದ್ದಿದ್ದರೂ ಇದನ್ನು ಕಾಪಾಡಿಕೊಂಡಿರುವ ಭಾರ ನಿನ್ನದಮ್ಮ, ತಾಯಿ, ಅಮ್ಮಾ, ಭೂಮಾತೆಯೇ! ನೀನು ಮಹಾವಿಷ್ಣುವಿಗೆ ಪ್ರಿಯಳಾದವಳು. ಈ ಮಗುವಿನ ಸಕಲ ಆಯುಃಪ್ರಮಾಣವೂ ನಿನ್ನ ಕಯ್ಯಲ್ಲಿದೆ. ಈ ಅರಿಯದೇ ಇದ್ದ ಮಗುವನ್ನು ಆಯುಸ್ಸುಹಾಕಿಕೊಂಡು ಬದುಕಿರುವಂತೆ ಮಾಡಿ ಕಾಪಾಡುವ ಭಾರ ನಿನ್ನದಾಗಿದೆಯಮ್ಮ. ಈ ಮಗುವು ಬದುಕಿ ಬಾಳುವುದಕ್ಕೆ ಸಾವಿರಾರು ವಿಘ್ನದೇವತೆಗಳು ಹಠಮಾಡಿಕೊಂಡು ಇದಕ್ಕೆ ಎದುರಾಗಿ ಕೆಡಕುಮಾಡುವುದಕ್ಕೆ ಕಾದು ನಿಂತಿವೆ. ಇದು ಬದುಕಿ ಬಾಳುವುದಕ್ಕೆ ಸಹಾಯಕಾರಕಗಳಾದ ಆಯುರಾರೋಗ್ಯೈಶ್ವರ್ಯಾದಿ ಭಾಗ್ಯಗಳನ್ನು ಸುಲಿಗೆ ಮಾಡುವುದಕ್ಕಾಗಿ ಬರುವ ಸಕಲ ವಿಘ್ನರೂಪಗಳಾದ ಭೂತಗಣಗಳನ್ನೂ ನೀನು ಸುಟ್ಟು ಬೂದಿಮಾಡಿ ಈ ಮಗುವನ್ನು ಕಾಪಾಡಿಕೋ ತಾಯಿ.

ಅಮ್ಮ ಭೂದೇವಿ! ಸಕಲ ಭೂತಗಳಿಗಿಂತ ನೀನು ಪರಮಶ್ರೇಷ್ಠಳಾದವಳಮ್ಮ. ನೀನು ಲೋಕಕ್ಕೆ ತಾಯಾದವಳು. ಕೇಳಿದವರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸುವವಳೇ ನೀನು. ನಿನಗೆ ಮುಪ್ಪಿಲ್ಲ. ನಿನ್ನ ಮಹಿಮೆಯು ಬಲುದೊಡ್ಡದು. ನೀನು ಸರ್ವ

**ತಸ್ಯೋಪವೇಶನಂ ಕೃತ್ವಾ ಭೂಮೌ ಬ್ರಾಹ್ಮಣಭೋಜನಂ ।**
**ಶಕ್ತ್ಯಾ ಕೃತ್ವಾ ತತಃ ಕಾರ್ಯಶ್ಚೋತ್ಸವಃ ಪೂರ್ವವದ್ದ್ವಿಜ ॥ ೧೦೧ ॥**

**ಷಷ್ಠೇಽನ್ನಪ್ರಾಶನಂ ಮಾಸಿ ಕರ್ತವ್ಯಂ ಭೌಮವರ್ಜಿತೇ ।**
**ದಿನವಾರೆ ತಿಥಿಂ ರಿಕ್ತಾಂ ವರ್ಜನೀಯಾಂ ತಥೈವ ಚ ॥ ೧೦೨ ॥**

**ನಕ್ಷತ್ರಾಣಿ ತಥೈವಾತ್ರ ದಾರುಣೋಗ್ರಾಣಿ ವರ್ಜಯೇತ್ ।**
**ಸಾಧಾರಣೇ ತಥಾ ರಾಮ ಜ್ಯೇಷ್ಠಾಂತೇಷ್ವಪಿ ಶಸ್ಯತೆ ॥ ೧೦೩ ॥**

**ಬ್ರಹ್ಮಾಣಂ ಶಙ್ಕರಂ ವಿಷ್ಣುಂ ಚನ್ದ್ರಾರ್ಕೌ ಚ ದಿಗೀಶ್ವರಾನ್ ।**
**ಭುವಂ ದಿಶಶ್ಚ ಸಂಪೂಜ್ಯ ಹುತ್ವಾ ವಹ್ನೌ ತಥಾ ಚರುಮ್ ॥ ೧೦೪ ॥**

---

ಭೂತಗಳಿಂದಲೂ ನಮಸ್ಕೃತಳಾದವಳು. ಚರಾಚರರೂಪವಾದ ಸಕಲ ಭೂತಗಳೂ ಬದುಕಿರುವುದು ನಿನ್ನ ಪರಮಾನುಗ್ರಹದಿಂದಲೇ. ಹೀಗಿರುವಲ್ಲಿ ಇದೊಂದು ನನ್ನ ಎಳೇ ಮಗುವನ್ನು ನೀನು ಕಾಪಾಡಲಾರೆಯಾ ? ಅಮ್ಮಾ ಭೂಮಾತೆಯೇ, ಕೈ ಜೋಡಿಸಿ ಪುನಃ ಬೇಡಿಕೊಳ್ಳುತ್ತೇನೆ. ನಾನು ಇದುವರಿವಿಗೆ ಹೇಳಿದ್ದಕ್ಕೆಲ್ಲ ನೀನು ಅನುಮತಿಸಿ ಈ ಮಗುವನ್ನು ರಕ್ಷಿಸು.

೧೦೧. ಈ ರೀತಿಯಾಗಿ ಹೇಳಿ ಆ ಮಗುವನ್ನು ಆ ಮಂಡಲದಲ್ಲಿ ಮಲಗಿಸಬೇಕು. ಆದಿನ ಯಥಾಶಕ್ತಿಯಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೧೦೨. ಆರನೆಯ ತಿಂಗಳಲ್ಲಿ ಮಗುವಿಗೆ ಅನ್ನಪ್ರಾಶನವನ್ನು ಮಾಡಿಸಬೇಕು. ಇದಕ್ಕೆ ಒಳ್ಳೆಯ ಮುಹೂರ್ತವನ್ನೇ ಹುಡುಕಿಮಾಡಬೇಕು. ಮಂಗಳವಾರದ ವಿನಹ ಉಳಿದ ಯಾವ ವಾರವಾದರೂ ಆಗಬಹುದು. ರಿಕ್ತತಿಥಿನಕ್ಷತ್ರಗಳು ಪ್ರಶಸ್ತವಲ್ಲ.

೧೦೩. ಆದಿನಕ್ಷತ್ರಗಳು ಕೂಡದು. ಜ್ಯೇಷ್ಠಾನಕ್ಷತ್ರ ಮೊದಲುಗೊಂಡು ಕಡೆ ಕಡೆಯಲ್ಲಿ ಬರುವ ನಕ್ಷತ್ರಗಳು ಅನ್ನಪ್ರಾಶನಕ್ಕೆ ಯೋಗ್ಯವಾದುವು.

೧೦೪. ಅನ್ನಪ್ರಾಶನದ ದಿವಸ ಬ್ರಹ್ಮವಿಷ್ಣುಮಹೇಶ್ವರರುಗಳನ್ನೂ ಸೂರ್ಯ ಚಂದ್ರರುಗಳನ್ನೂ ಅಷ್ಟದಿಕ್ಪಾಲಕರುಗಳನ್ನೂ ಭೂಮ್ಯಾಕಾಶಗಳನ್ನೂ ದಶದಿಕ್ಕುಗಳನ್ನೂ ಪೂಜೆಮಾಡಿ ಚರು (ಅನ್ನ)ವನ್ನೂ ಹೋಮಮಾಡಬೇಕು. ಮೇಲೆ ಹೇಳಿದ ಎಲ್ಲಾ ದೇವತೆಗಳಿಗೂ ಈ ಚರುವಿನ ಹವಿಸ್ಸನ್ನು ಕೊಡಬೇಕು.

**ಏತೇಷಾಮೇವ ದೇವಾನಾಂ ಕೃತ್ವಾ ಬ್ರಾಹ್ಮಣಪೂಜನಮ್ ।**
**ದೇವತಾಪುರತಸ್ತಸ್ಯ ಧಾತ್ರ್ಯ್ಯಙ್ಗಗತಸ್ಯ ಚ ॥ ೧೦೫ ॥**

**ಅಲಂಕೃತಸ್ಯ ದಾತವ್ಯಂ ವೀರ ಕಾಂಸ್ಯೇ ತು ಕಾಂಚನೇ ।**
**ಮಧ್ವಾಜ್ಯಕನಕೋಪೇತಂ ಪ್ರಾಶಯೇತ್ಪಾಯಸಂ ತತಃ ॥ ೧೦೬ ॥**

**ತತಸ್ತ್ವನ್ನಪತೇ ರಾಮ ಮಂತ್ರಶ್ಚಾತ್ರ ವಿಧೀಯತೆ ।**
**ಕೃತಪ್ರಾಶಂ ತದೋತ್ಸಂಗಾದ್ಧಾತ್ರೀ ಬಾಲಂ ತು ವಿನ್ಯಸೇತ್ ॥ ೧೦೭ ॥**

**ದೇವಾಗ್ರತೋಽಥ ವಿನ್ಯಸ್ಯ ಶಿಲ್ಪಭಾಂಡಾನಿ ಸರ್ವಶಃ ।**
**ಶಸ್ತ್ರಾಣಿ ಚೈವ ಶಾಸ್ತ್ರಾಣಿ ತತಃ ಪಶ್ಯೇತ ಲಕ್ಷಣಮ್ ॥ ೧೦೮ ॥**

**ಪ್ರಥಮಂ ಯಂ ಸ್ಪೃಶೇದ್ಬಾಲಃ ಶಿಲ್ಪಭಾಂಡಂ ಸ್ವಯಂ ತಥಾ ।**
**ಜೀವಿಕಾ ತಸ್ಯ ಬಾಲಸ್ಯ ತೇನೈವ ತು ಭವಿಷ್ಯತಿ ॥ ೧೦೯ ॥**

---

೧೦೫. ಈ ರೀತಿ ಪೂಜಾಹೋಮಗಳಾದ ಬಳಿಕ ಬ್ರಾಹ್ಮಣಸಮಾರಾಧನೆಯನ್ನು ಮಾಡಬೇಕು. ಆ ಮೇಲೆ ದೇವರ ಮುಂದೆ ಆ ಮಗುವನ್ನು ಒಡವೆಗಳಿಂದಲಂಕರಿಸಿ ದಾದಿಯ ತೊಡೆಯ ಮೇಲೆ ಕುಳ್ಳಿರಿಸಬೇಕು.

೧೦೬. ಆಮೇಲೆ ಚಿನ್ನದ ಬಟ್ಟಲಲ್ಲಿ ತುಪ್ಪ ಜೇನುತುಪ್ಪ ಚಿನ್ನದ ರೇಖುಗಳಿಂದ ಕಲಸಿದ ಪಾಯಸವನ್ನು ಮೊದಲು ಮಗುವಿಗೆ ತಿನ್ನಿಸಬೇಕು.

೧೦೭. ಈ ರೀತಿ ಪರಮಾನ್ನವನ್ನು ಮಗುವಿಗೆ ತಿನ್ನಿಸುವಾಗ "ಅನ್ನಪತೇನ್ನಸ್ಯನೋಧೇಹಿ" ಎಂಬ ಮಂತ್ರವನ್ನು ಹೇಳಬೇಕು. ಈ ರೀತಿ ಅನ್ನಪ್ರಾಶನ ಮುಹೂರ್ತವು ಬೆಳೆದ ಬಳಿಕ ಆ ಮಗುವನ್ನು ದಾದಿಯ ತೊಡೆಯಿಂದ ಕೆಳಕ್ಕೆ ಇಳಿಸಿ ಕೂರಿಸಬೇಕು.

೧೦೮. ಮಗುವನ್ನು ದೇವರ ಮುಂದೆ ಕೂರಿಸಿ ಅದರ ಮುಂದೆ ಕಲ್ಲುಮಡಿಕೆ ಶಸ್ತ್ರಗಳು ಶಾಸ್ತ್ರಗಳು ಮುಂತಾದ ಪದಾರ್ಥಗಳನ್ನೆಲ್ಲಾ ಇಟ್ಟು ತೋರಿಸಿ ಅದರ ಹೆಸರನ್ನು ಹೇಳಿ ಮುಟ್ಟುವಂತೆ ತಿಳಿಸಬೇಕು.

೧೦೯. ಮಗುವು ಮೊದಲು ಯಾವ ಕಲ್ಲುಗಡಿಗೆಯನ್ನು ಮುಟ್ಟುವುದೋ ಅದರಿಂದಲೇ ಅದರ ಜೀವಿಕೆಯು ಮುಂಬರಿಯುತ್ತದೆ.

ದನ್ತಜನ್ಮನಿ ಬಾಲಾನಾಂ ತೇನೈವ ತು ಭವಿಷ್ಯತಿ ।
ದನ್ತಜನ್ಮನಿ ಬಾಲಾನಾಂ ಲಕ್ಷಣಂ ತು ನಿಬೋಧ ಮೆ ॥ ೧೧೦ ॥

ಉಪರಿ ಪ್ರಥಮಂ ಯಸ್ಯ ಜಾಯನ್ತೇ ಚ ಶಿಶೋರ್ದ್ವಿಜಾಃ
ದನ್ತೈರ್ವಾ ಸಹ ಯಸ್ಯ ಸ್ಯಾಜ್ಜನ್ಮ ಭಾರ್ಗವ ಜಾಯತೆ ॥ ೧೧೧ ॥

ಮಾತರಂ ಪಿತರಂ ವಾಽಪಿ ಖಾದೇದಾತ್ಮನಮೇವ ಚ ।
ತತ್ರ ಶಾನ್ತಿಂ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೧೧೨ ॥

ಗಜಪೃಷ್ಠಗತಂ ಬಾಲಂ ನೌಸ್ಥಂ ವಾ ಸ್ಥಾಪಯೇತ್ದ್ವಿಜ ।
ತದಭಾವೇ ತು ಧರ್ಮಜ್ಞ ಕಾಂಚನೇ ತು ವರಾಸನೆ ॥ ೧೧೩ ॥

ಸರ್ವೌಷಧೈಃ ಸರ್ವಗನ್ಧೈರ್ಬೀಜೈಃ ಪುಷ್ಪೈಃ ಫಲೈಸ್ತಥಾ ।
ಪಂಚಗವ್ಯೇ ತು ರತ್ನೈಶ್ಚ ಪತಾಕಾಭಿಶ್ಚ ಭಾರ್ಗವ ॥ ೧೧೪ ॥

---

೧೧೦. ಮಗುವಿಗೆ ಆ ಮೇಲೆ ಏಳನೇ ತಿಂಗಳಲ್ಲಿ ಹಲ್ಲು ಹುಟ್ಟುವುದಕ್ಕೆ ಆರಂಭವಾಗುತ್ತದೆ ಎಂದು ಪುಷ್ಕರನು ಹೇಳುತ್ತಿರುವಲ್ಲಿ ಪರಶುರಾಮನು ಪುಷ್ಕರನನ್ನು ಕುರಿತು ಹಲ್ಲು ಹುಟ್ಟುವಾಗ ಮಗುವಿಗೆ ಯಾವ ಲಕ್ಷಣಗಳುಂಟಾಗುವುದೆಂದು ತಿಳಿಸಬೇಕೆಂದು ಪ್ರಶ್ನೆಮಾಡಲು ಪುಷ್ಕರನು ಉತ್ತರ ಹೇಳುತ್ತಾನೆ.

೧೧೧. ಮಗುವಿಗೆ ಮೊದಲು ಮುಂದುಗಡೆ ಹಲ್ಲು ಮೊಳೆಯುವುದಕ್ಕೆ ಆರಂಭವಾಗುವುದು. ಹಲ್ಲು ಮೊಳೆಯುವುದಕ್ಕೆ ಆರಂಭವಾದೊಡನೆ ಅದಕ್ಕೆ ಜನ್ಮವು ಆರಂಭವಾಯಿತೆಂದು ತಿಳಿಯಬೇಕು.

೧೧೨. ಹಲ್ಲು ಹುಟ್ಟುವುದಕ್ಕೆ ಆರಂಭವಾದೊಡನೆ ಆ ಮಗುವು ತೀಟಿ (ನವೆ) ಯಿಂದ ತಾಯಿತಂದೆಗಳನ್ನೂ ತನ್ನನ್ನೂ ಕಚ್ಚಲು ಆರಂಭಮಾಡುತ್ತದೆ. ಆ ಸಮಯದಲ್ಲಿ ಒಂದು ಶಾಂತಿಯಾಗಬೇಕು. ಅದೇನೆಂಬುದನ್ನೀಗ ಹೇಳುತ್ತೇನೆ ಕೇಳು. ಇದಕ್ಕೆ ದಂತಜನನ ಶಾಂತಿ ಎಂದು ಹೆಸರು.

೧೧೩. ಮಗುವನ್ನು ಆನೆಯ ಬೆನ್ನಿನ ಮೇಲಾಗಲೀ ದೋಣಿಯ ಮೇಲಾಗಲೀ ಕೂರಿಸಬೇಕು. ಅಥವಾ ಚಿನ್ನದ ಹಸೆಯ ಮಣೆಯ ಮೇಲೆ ಕೂರಿಸಬೇಕು.

೧೧೪. ಏಳು ದಿವಸದ ವರಿವಿಗೆ ಮಗುವಿಗೆ ಶಾಂತಿಕರ್ಮವು ಬೆಳೆಯಬೇಕು. ಮೊದಲು ಸರ್ವೌಷಧರಸಗಳಿಂದಲೂ ಗಂಧೋದಕ ಫಲೋದಕ ಪಂಚಗವ್ಯ ರತ್ನೋದಕಗಳಿಂದ ಅಭಿಷೇಕವಾಗಬೇಕು.

**ಸ್ಥಾಲೀಪಾಕೇನ ಧಾತಾರಂ ಪೂಜಯೇತ್ತದನನ್ತರಂ ।**
**ಸಪ್ತಾಹಂ ಚಾತ್ರ ಕರ್ತವ್ಯಂ ತಥಾ ಬ್ರಾಹ್ಮಣಭೋಜನಮ್ ॥ ೧೧೫ ॥**

**ಅಷ್ಟಮೇಽಹನಿ ವಿಪ್ರಾಣಾಂ ತಥಾ ದೇಯಾ ಚ ದಕ್ಷಿಣಾ ।**
**ಕಾಂಚನಂ ರಜತಂ ಗಾಶ್ಚ ಭುವಂ ಚಾತ್ಮಾನಮೇವ ವಾ ॥ ೧೧೬ ॥**

**ದನ್ತಜನ್ಮನಿ ಮಾಸಾನ್ಯಸಮ್ಭವೇ ಸಪ್ತಮಾದಪಿ ।**
**ಅಷ್ಟಮೇಽಹನಿ ವಿಪ್ರಾಣಾಂ ಶೃಣುಸ್ನಾನಮತಃ ಪರಂ ॥ ೧೧೭ ॥**

---

೧೧೫. ಬಳಿಕ ಸ್ಥಾಲೀಪಾಕದಿಂದ ಹೋಮಕರ್ಮಗಳು ನಡೆಯಬೇಕು. ಆ ಮೇಲೆ ಬ್ರಹ್ಮನನ್ನು ಕಲಶದಲ್ಲಿ ಆವಾಹಿಸಿ ಪೂಜೆಮಾಡಬೇಕು. ಈ ರೀತಿ ಏಳು ದಿವಸಗಳ ವರಿವಿಗೆ ಈ ಕ್ರಮಗಳು ತಪ್ಪದೇ ನಡೆಯಬೇಕು. (ಸಪ್ತಾಹ ಕ್ರಮಗಳೂ ಸಪ್ತಾಹೋತ್ಸವಗಳೂ ಈ ಕ್ರಮವನ್ನನುಸರಿಸಿಯೇ ಆಗಿನಿಂದ ಆರಂಭವಾಗಿವೆ. ಉದಾಹರಣೆ: ಭಾಗವತಸಪ್ತಾಹ, ರಾಮಸಪ್ತಾಹ, ಕೀರ್ತನಸಪ್ತಾಹ, ಇತ್ಯಾದಿಗಳು.) ಮುಖ್ಯಾಭಿಪ್ರಾಯವೇನೆಂದರೆ ಏಳು ದಿನಗಳ ವರಿವಿಗೆ ಸ್ವಲ್ಪವೂ ಬಿಡದೆ ಅವಿಚ್ಛಿನ್ನವಾಗಿ ಯಾವುದಾದರೊಂದು ದೇವತಾಕಾರ್ಯಗಳನ್ನು ಮಾಡುವುದರಿಂದ ಆ ಸಪ್ತಾಹ ಸೇವೆಗೆ ಮೆಚ್ಚಿ ಭಗವಂತನು (ಆವಾಹಿತ ದೇವತೆ) ಪ್ರಸನ್ನನಾಗಿ ಯಜಮಾನನ ಇಷ್ಟಾರ್ಥವನ್ನು ಸಲ್ಲಿಸುವನೆಂದು ತಿಳಿಯಬೇಕು. ಇದೇ ಸಪ್ತಾಹದ ಮೂಲ ತಾತ್ಪರ್ಯಾರ್ಥವೆಂದೂಹಿಸಿ ಈ ದಂತಜನನ ಸಪ್ತಾಹಾವಸರದಲ್ಲಿ ಈ ಟಿಪ್ಪಣಿಯನ್ನು ಬರೆಯಲಾಗಿದೆ. ಈ ರೀತಿ ಸಪ್ತಾಹೋತ್ಸವವು ಬೆಳೆದ ಬಳಿಕ ಬ್ರಾಹ್ಮಣರಿಗೆ ಸಮಾರಾಧನೆಯನ್ನು ಮಾಡಿಸಬೇಕು.

೧೧೬. ಎಂಟನೆಯ ದಿವಸ ಬ್ರಾಹ್ಮಣರೆಲ್ಲರನ್ನೂ ಕರೆಸಿ ಅವರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟು ಸುವರ್ಣ ರಜತ ಗೋ-ಭೂದಾನಾದಿಗಳನ್ನು ಮಾಡಬೇಕು. ಅಥವಾ ಆತ್ಮಾರ್ಪಣೆ ಮಾಡಬೇಕು.

೧೧೭. ಏಳನೇ ತಿಂಗಳಲ್ಲಿ ಮಗುವಿಗೆ ಹಲ್ಲು ಹುಟ್ಟದೆ, ಎಂಟನೇ ತಿಂಗಳಲ್ಲಿ ಮೊಳೆಯುವ ಸೂಚನೆ ಕಂಡು ಬಂದರೆ ಆಗ ಆ ಮಗುವಿಗೆ ಮಾಡಿಸಬೇಕಾದ ಅಭಿಷೇಕ ವಿಧಿಯನ್ನು ಹೇಳುತ್ತೇನೆ ಕೇಳು.

ಭದ್ರಾಸನೇ ನಿವೇಶ್ಯೈನಂ ಮೃದ್ಭಿರ್ಮೂಲೈಃ ಫಲೈಸ್ತಥಾ ।
ಸರ್ವೌಷಧೈಃ ಸರ್ವಗಂಧೈಃ ಸರ್ವಬೀಜೈಸ್ತಥೈವ ಚ ॥ ೧೧೮ ॥

ಸ್ನಾಪಯೇತ್ಪೂಜಯೇಚ್ಚಾತ್ರ ವಹ್ನಿಂ ಸೋಮಂ ಸಮೀರಣಮ್ ।
ಪೂರ್ವತಶ್ಚ ತಥಾ ಖ್ಯಾತಾನ್ದೇವದೇವಂ ಚ ಕೇಶವಮ್ ॥ ೧೧೯ ॥

ಏತೇಷಾಮೇವ ಜುಹುಯಾದ್ಘೃತಮಗ್ನೌ ಯಥಾವಿಧಿ ।
ಬ್ರಾಹ್ಮಣಾನಾಂ ಚ ದಾತವ್ಯಾ ತತಃ ಪೂಜಾ ಚ ದಕ್ಷಿಣಾ ॥ ೧೨೦ ॥

ತತಸ್ತ್ವಲಂಕೃತಂ ಬಾಲಂ ಚಾಸನೇ ತೂಪವೇಶಯೇತ್ ।
ಆಸನಂ ಛತ್ರಮೂರ್ಧಾನಾಂ ಬೀಜೈಸ್ತಂ ಸ್ನಾಪಯೇತ್ತತಃ ॥ ೧೨೧ ॥

ಸುಸ್ವಿನ್ನೈರ್ಬಾಲಕಾನಾಂ ಚ ತೈಶ್ಚ ಕಾರ್ಯಂ ಚ ಪೂಜನಮ್ ।
ಪೂಜ್ಯಾಶ್ಚ ವಿಧವಾ ನಾರ್ಯೋ ಬ್ರಾಹ್ಮಣಾಃ ಸುಹೃದಸ್ತಥಾ ॥ ೧೨೨ ॥

---

೧೧೮. ಮಗುವನ್ನು ಭದ್ರಾಸನದ (ಹಸೆಮಣೆಯ) ಮೇಲೆ ಕುಳ್ಳಿರಿಸಿ ಮೃಣ್ಮಯಜಲಗಳಿಂದಲೂ ಮಿಶ್ರಜಲಗಳಿಂದಲೂ ಫಲಮೂಲಗಳಿಂದಲೂ ಸ್ನಾನ ಮಾಡಿಸಬೇಕು (ಪ್ರೋಕ್ಷಿಸಿದರೂ ಸಾಕು.)

೧೧೯. ಆ ಬಳಿಕ ಅಗ್ನಿಮುಖದಲ್ಲಿ ಹೋಮಕರ್ಮವನ್ನಾಚರಿಸಬೇಕು ಆಮೇಲೆ ಚಂದ್ರನನ್ನೂ ವಾಯುವನ್ನೂ ಮೇಲೆ ಮೊದಲೇ ವಿವರಿಸಿರುವ ದೇವಾದಿ ದೇವತೆಗಳನ್ನೂ ಕೇಶವನನ್ನೂ ಸಹ ಪೂಜಿಸಬೇಕು.

೧೨೦. ಈ ರೀತಿ ಪೂಜಿತರಾದ ಸಕಲದೇವತೆಗಳಿಗೂ ಅಗ್ನಿಯಲ್ಲಿ ಆಜ್ಯ ಹೋಮವನ್ನು ಮಾಡಬೇಕು. ಆ ಬಳಿಕ ಋತ್ವಿಜರಾಗಿದ್ದ ಸಕಲ ಬ್ರಾಹ್ಮಣರನ್ನೂ ಪೂಜಿಸಿ ದಕ್ಷಿಣೆಯನ್ನು ಕೊಡಬೇಕು.

೧೨೧. ಆ ಬಳಿಕ ಮಗುವಿಗೆ ಚೆನ್ನಾಗಿ ಅಲಂಕಾರಮಾಡಿ ಹಸೆಯಮೇಲೆ ಕೂರಿಸಿ ಮಂತ್ರೋದಕಗಳಿಂದ ಪ್ರೋಕ್ಷಿಸಬೇಕು.

೧೨೨. ಆಮೇಲೆ ಅಲ್ಲಿ ಬಂದಿದ್ದ ಬಾಲಕರುಗಳಿಗೆಲ್ಲಾ ತಿಂಡಿತೀರ್ಥಗಳನ್ನು ಹಂಚಬೇಕಲ್ಲದೆ ಬ್ರಾಹ್ಮಣಸುವಾಸಿನಿಯರನ್ನೂ ಸುಹೃದ್ಬಾಂಧವರನ್ನೂ ಚೆನ್ನಾಗಿ ಉಪಚರಿಸಬೇಕು.

ಪ್ರಾಪ್ತೇಽಥ ಪಂಚಮೇ ವರ್ಷೇ ತ್ವಪ್ರಸುಪ್ತೇ ಜನಾರ್ದನೇ ।
ಪ್ರಥಮಾಂಚ ತಥಾ ಷಷ್ಠೀಂ ವರ್ಜಯಿತ್ವಾ ತಥಾಽಷ್ಟಮೀಮ್ ॥ ೧೨೩ ॥

ರಿಕ್ತಾಂ ಪಂಚದಶೀಂ ಚೈವ ಸೌರಭೌಮದಿನೇ ತಥಾ ।
ಧ್ರುವಾಣಿ ಯಾಮ್ಯಂ ಚ ತಥಾ ನಕ್ಷತ್ರಾಣಿ ವಿವರ್ಜಯೇತ್॥ ॥೧೨೪ ॥

ಸೌಮ್ಯವರ್ಗಶ್ಚರೇ ಲಗ್ನೇ ಹಿತೇ ತತ್ರ ನವಾಂಶಕೇ ।
ತ್ರಿಕೋಣಕೇಂದ್ರಗಾಃ ಸೌಮ್ಯಾಃ ಪಾಪಾಶ್ಚೋಪಚಯೇ ಶುಭಾಃ ॥ ೧೨೫ ॥

ನಕ್ಷತ್ರಾಣಾಂ ವಿವರ್ಜ್ಯಾನಾಂ ಮುಹೂರ್ತಾಶ್ಚ ವಿವರ್ಜಯೇತ್ ।
ಏವಂ ಸುನಿಶ್ಚಿತೇ ಕಾಲೇ ವಿದ್ಯಾರಮ್ಭಂ ಚ ಕಾರಯೇತ್ । ॥ ೧೨೬ ॥

ಪೂಜಯಿತ್ವಾ ಹರಿಂ ಲಕ್ಷ್ಮೀಂ ತಥಾ ದೇವೀಂ ಸರಸ್ವತೀಮ್ ।
ಸುವಿದ್ಯಾಂ ಸೂತ್ರಕಾರಾಂಶ್ಚ ಸ್ವಾಂ ವಿದ್ಯಾಂಶ್ಚ ವಿಶೇಷತಃ ॥ ೧೨೭ ॥

---

೧೨೩. ಮಕ್ಕಳಿಗೆ ಐದನೇವರ್ಷ ಆರಂಭವಾದಮೇಲೆ ಆಷಾಢಮಾಸ ಹುಟ್ಟು ವುದಕ್ಕೆ ಮುಂಚೆ ಮಾಘಾದಿಪಂಚಕಗಳಲ್ಲಿ ಚೌಲ ಮತ್ತು ಅಕ್ಷರಾಭ್ಯಾಸವನ್ನು ಮಾಡಿ ಸಬೇಕು. ಆ ಕ್ರಮವನ್ನೀಗ ವಿವರಿಸುವೆನು. ಈ ಶುಭ ಕರ್ಮಕ್ಕೆ ಪಾಡ್ಯ, ಷಷ್ಠೀ ಅಷ್ಟಮೀ, ತಿಥಿಗಳು ಪ್ರಶಸ್ತವಾದುವುಗಳಲ್ಲ.

೧೨೪. ಶೂನ್ಯ ತಿಥಿಗಳು ಪೂರ್ಣಿಮೆ ಭಾನುವಾರ ಮಂಗಳವಾರಗಳು ಧ್ರುವ ನಕ್ಷತ್ರ ಯಾಮ್ಯನಕ್ಷತ್ರಗಳು ಚೌಲಕ್ಕೆ ಯೋಗ್ಯವಾದುವುಗಳಲ್ಲ.

೧೨೫-೧೨೬. ಜ್ಯೋತಿಷ್ಕರನ್ನು ಕರೆಯಿಸಿ ಮಗುವಿನ ಜಾತಕವನ್ನೂ ಕುಂಡಲಿ ಯನ್ನೂ ತೋರಿಸಿ ಲಗ್ನ ನವಾಂಶ ಕೇಂದ್ರಸ್ಥಾನ ಶುದ್ಧಿಯನ್ನು ನೋಡಿ ವರ್ಜ್ಯತಿಥಿ ನಕ್ಷತ್ರಗಳನ್ನೂ ವಾರಗಳನ್ನೂ ಬಿಟ್ಟು ಒಳ್ಳೇ ಮುಹೂರ್ತವನ್ನಿಡಿಸಿ ಚೌಲ ಮತ್ತು ಅಕ್ಷರಾಭ್ಯಾಸವನ್ನು ನೆರವೇರಿಸಬೇಕು.

೧೨೭. ಅಕ್ಷರಾಭ್ಯಾಸ (ವಿದ್ಯಾಭ್ಯಾಸ) ದ ದಿವಸ ಮೊದಲು ಮಹಾಗಣಪತಿ ಯನ್ನೂ ಬಳಿಕ ಮಹಾವಿಷ್ಣುವನ್ನೂ ಮಹಾಲಕ್ಷ್ಮೀ ಮಹಾಕಾಳೀ ಮಹಾಸರಸ್ವತೀ ಯರನ್ನೂ ಸದ್ವಿದ್ಯೆಯನ್ನೂ ಸೂತ್ರಕಾರರಾದ ಮಹರ್ಷಿಗಳನ್ನೂ ವಿಶೇಷತಃ ಸ್ವಧರ್ಮೋಚಿತವಾದ ವಿದ್ಯಾಧಿದೇವತೆಯನ್ನೂ ಪೂಜಿಸಬೇಕು.

ಏತೇಷಾಮೇವ ದೇವಾನಾಂ ನಾಮ್ನಾತು ಜುಹುಯಾದ್ಘೃತಮ್ ।
ದಕ್ಷಿಣಾಭಿರ್ದ್ವಿಜೇಂದ್ರಾಣಾಂ ಕರ್ತವ್ಯಂ ಚಾತ್ರ ಪೂಜನಂ ॥ ೧೨೮ ॥

ಧಾತ್ರ್ಯುತ್ಸಂಗಾದಥಾದಾಯ ಬಾಲಂ ತು ಕೃತವಾಪನಮ್ ।
ಸ್ವಲಂಕೃತಂ ಪ್ರದಾತವ್ಯಮುತ್ಸಂಗೇ ತು ತದಾ ಗುರೋಃ ॥ ೧೨೯ ॥

ಗುರುಶ್ಚಾತ್ರ ಭವೇದ್ವಿದ್ವಾನ್ ಸ್ನಾತಃ ಶುಕ್ಲಾಮ್ಬರಃ ಶುಚಿಃ ।
ಪ್ರಗೃಹ್ಯ ತಂ ತು ನಿಕ್ಷೇಪಂ ಗುರುರಪ್ಯಥ ಭಾರ್ಗವ ॥ ೧೩೦ ॥

ಪ್ರಾಙ್‌ಮುಖಃ ಸುಮುಖಾಸೀನೋ ವಾರುಣಾಶಾಮುಖಂ ಶಿಶುಮ್ ।
ಅಧ್ಯಾಪಯೇತ್ತು ಪ್ರಥಮಂ ಕುರ್ಯಾದ್ಬಾಲೋಽಪಿ ವನ್ದನಮ್ ॥ ೧೩೧ ॥

---

೧೨೮. ಪೂಜೆಯಾದ ನಂತರ ಎಲ್ಲಾ ದೇವತೆಗಳ ಹೆಸರಿನಲ್ಲೂ ಅಗ್ನಿಯಲ್ಲಿ ಆಜ್ಯಾಹುತಿಯನ್ನು ಕೊಡಬೇಕು. ಬಳಿಕ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಉಪಚರಿಸಬೇಕು.

೧೨೯. ಮಗುವಿಗೆ ಚೌಲಮಾಡಿಸಿ ಮಂಗಳಸ್ನಾನವಾದ ನಂತರ ಅದನ್ನು ಅಲಂಕರಿಸಿ ದಾದಿಯು ಎತ್ತಿಕೊಂಡು ಬಂದು ಆ ಮಗುವನ್ನು ಗುರುಗಳ ತೊಡೆಯ ಮೇಲೆ ಕುಳ್ಳಿರಿಸಬೇಕು.

೧೩೦. ಈ ಸಮಯದಲ್ಲಿ ಮಹಾವಿದ್ವಾಂಸನಾದ ಗುರುವೂ ಸಹ ಮಂಗಳ ಸ್ನಾನವನ್ನು ಮಾಡಿ ಶುಕ್ಲಾಂಬರಗಳನ್ನು ಧರಿಸಿ ಆ ಮಗುವನ್ನು ತನ್ನ ಬಲತೊಡೆಯ ಮೇಲೆ ಕೂರಿಸಿಕೊಳ್ಳಬೇಕು. (ಇಲ್ಲಿ ಗುರುವೆಂದರೆ ತಂದೆಯೆಂದು ಅರ್ಥಮಾಡಿಕೊಳ್ಳಬೇಕು.)

೧೩೧. ತಂದೆ ( ಗುರು ಅಥವಾ ಆಚಾರ್ಯ ) ಯು ಪೂರ್ವಾಭಿಮುಖವಾಗಿ ಕುಳಿತುಕೊಂಡು ಮಗುವನ್ನು ತನ್ನ ತೊಡೆಯಮೇಲೆ ಪಶ್ಚಿಮಾಭಿಮುಖವಾಗಿರುವಂತೆ ಕುಳ್ಳಿರಿಸಿಕೊಳ್ಳಬೇಕು. ವಿದ್ಯಾ (ಅಕ್ಷರಾ) ಭ್ಯಾಸ ಮಾಡುವುದಕ್ಕಿಂತ ಮುಂಚೆ ಆ ಮಗುವಿನ ಕೈಯಲ್ಲಿ ತಂದೆಗೆ ನಮಸ್ಕಾರ ಮಾಡಿಸಬೇಕು. ಆ ಬಳಿಕ ವಿದ್ಯೆಯನ್ನು (ಅಕ್ಷರವನ್ನು) ಬರೆಸಬೇಕು, ಹೇಳಿಕೊಡಬೇಕು.

**ಬ್ರಾಹ್ಮಣಾನಾಂ ಗುರೂಣಾಂ ಚ ದೇವತಾನಾಮನನ್ತರಂ ।**
**ತತಸ್ತು ಪೂಜ್ಯಾ ವಿತ್ತೇನ ಧಾತ್ರೀ ರಾಮ ಗುರುಸ್ತಥಾ ॥ ೧೩೨ ॥**

**ದಕ್ಷಿಣಾಭಿರ್ದ್ವಿಜೇಂದ್ರಾಣಾಂ ಕರ್ತವ್ಯಂ ತರ್ಪಣಂ ತಥಾ ।**
**ತತಃ ಪ್ರಭೃತ್ಯನಧ್ಯಾಯಾನ್ವರ್ಜನೀಯಾನ್ವಿವರ್ಜಯೇತ್ ॥ ೧೩೩ ॥**

**ಅಷ್ಟಮೀದ್ವಿತಯಂ ರಾಮ ಪಕ್ಷಾಂತೇ ಚ ದಿನದ್ವಯಮ್ ।**
**ಆಶೌಚಮಿಂದ್ರಯಾತ್ರಾಂ ಚ ಭೂಕಮ್ಪಂ ರಾಹುದರ್ಶನಮ್ ॥ ೧೩೪ ॥**

---

೧೩೨. ವಿದ್ಯೋಪದೇಶಾನಂತರ ಆ ಮಗುವು (ಬಾಲಕನು) ಬ್ರಾಹ್ಮಣರಿಗೂ ಗುರುಹಿರಿಯರಿಗೂ ದೇವತೆಗಳಿಗೂ ನಮಸ್ಕಾರ ಮಾಡಬೇಕು. ಈ ರೀತಿ ಅಕ್ಷರಾಭ್ಯಾಸಮುಹೂರ್ತವು ಬೆಳೆದ ಬಳಿಕ ತನ್ನನ್ನು ಪೋಷಿಸಿದ ಧಾತ್ರಿ (ದಾದಿ) ಗೂ ಗುರುಗಳಿಗೂ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಡಬೇಕು.

೧೩೩. ಆಮೇಲೆ ಅಲ್ಲಿಗೆ ಬಂದಿದ್ದ ಸಮಸ್ತ ಬ್ರಾಹ್ಮಣರಿಗೂ ದಕ್ಷಿಣೆತಾಂಬೂಲಗಳನ್ನು ಕೊಟ್ಟು ಅವರೆಲ್ಲರಿಗೂ ಭೋಜನಮಾಡಿಸಬೇಕು. ವಿದ್ಯಾಭ್ಯಾಸಕ್ಕಿಂತ ಮುಂಚೆ ಮಾಡಬೇಕಾದ ಕರ್ಮಗಳನ್ನು ಇದುವರಿಗೆ ಹೇಳಿಯಾಯಿತು. ಇನ್ನು ಯಾವ ಯಾವ ದಿವಸ ಪಾಠವನ್ನು ಓದಬಾರದೋ ಅಂತಹ ಅನಧ್ಯಯನದಿವಸವನ್ನು ಹೇಳುತ್ತೇನೆ. ಇಂತಹ ಅನಧ್ಯಯನ ದಿವಸಗಳಲ್ಲಿ ಪಾಠವನ್ನು ಹೇಳಿಸಿಕೊಳ್ಳಲೂ ಬಾರದು ಓದಿದ ಪಾಠವನ್ನು ಆವರ್ತಿ (ಘಟ್ಟಿ) ಮಾಡಲೂಬಾರದು.

೧೩೪. ಅನಧ್ಯಯನಗಳಾವುವೆಂದರೆ ಎರಡು ಅಷ್ಟಮಿಗಳು ( ಅಷ್ಟಮೀ ವ್ಯಾಪನೆ ಇರತಕ್ಕ ಸಪ್ತಮೀ ಮತ್ತು ಮಾರನೆಯ ದಿನ ಬರುವ ಅಷ್ಟಮೀ) ಪಕ್ಷಾಂತ್ಯದಲ್ಲಿ ಬರುವ ಅನಧ್ಯಯನತ್ರಯ ಅಥವಾ ಚತುಷ್ಟಯ (ದ್ವಾದಶೀ ದಿವಸ ಸಾಯಂಕಾಲವೇ ತ್ರಯೋದಶೀ ವ್ಯಾಪ್ತಿ ಇದ್ದರೆ ಆ ದಿವಸವು ಪ್ರದೋಷವೆನಿಸುವುದು ಪ್ರದೋಷಾಂತ್ಯದಲ್ಲಿ ಬರುವ ತ್ರಯೋದಶೀ ಚತುರ್ದಶೀ ಪೂರ್ಣಿಮಾ ಅಥವಾ ಅಮಾವಾಸ್ಯೆ ಮತ್ತು ಮುಂದಿನ ಪಾಡ್ಯಮಿಗಳು ಅನಧ್ಯಯನ ಚತುಷ್ಟಯುವೆನಿಸುವುದು.) ತ್ರಯೋದಶೀ ದಿನ ಪ್ರದೋಷವಾದಮೇಲೆ ಬರುವ ಪಾಡ್ಯಮೀ ಪೂರ್ತಿಯಾಗಿ ಮೂರು ದಿವಸಗಳು ಅನಧ್ಯಯನತ್ರಯಗಳೆನಿಸಿಕೊಳ್ಳುವುವು.

ವ್ಯತೀತಂ ಚಾಪ್ಯಹೋರಾತ್ರ ಮುಲ್ಕಾಪಾತಂ ಚ ಭಾರ್ಗವ ।
ಅಕಾಲಸ್ತನಿತಂ ಚೈವ ನಿರ್ಜ್ಯೋತಿಷಮಥಾಮ್ಬರಮ್ ॥ ೧೩೫ ॥

ತಥಾ ಕಾಲೇಪ್ರಚಂಡಶ್ಚ ಯದಾ ವಾಯುಸ್ತದಾ ಭವೇತ್ ।
ಪ್ರದೋಷೇ ಚಾಪ್ಯಸಂಶ್ರದ್ಧೇ ಚೈತ್ಯವೃಕ್ಷ ಚತುಷ್ಪಥೇ ॥ ೩೧೬॥

ಗೋಯಾನೇ ಕುಂಜರೇ ಚಾಶ್ವೇ ನ ಚ ನಾವಿ ತಥಾ ಭವೇತ್ ।
ಶ್ವಶೃಗಾಲರವೇ ಘೋರೇ ತಥಾ ಚ ಖರನಿಸ್ವನೇ ॥ ೧೩೭ ॥

ತಥಾ ವಾದಿತ್ರಶಬ್ದೇ ಚ ತಥೈವ ನಗರೋತ್ಸವೇ ॥ ೧೩೮ ॥

ಕಾಲೇಷು ದೇಶೇಷು ಮಯೋದಿತೇಷು
ಪಠನ್ತಿ ಯೇ ನಾಮ ನ ತೇಷು ವಿದ್ಯಾ ।

---

೧೩೫. ಆಶೌಚ ದಿವಸಗಳು ಬಲೀಂದ್ರಪೂಜೆ ಭೂಕಂಪ ಗ್ರಹಣ ಉಲ್ಕಾಪಾತ ಸಮಯಗಳು. ಅಕಾಲಮೇಘ ಗರ್ಜನೆ ಮೋಡಮುಸುಕಿಕೊಂಡು ಸೂರ್ಯರಶ್ಮಿಯೇ ಕಾಣದೇ ಇದ್ದ ದಿವಸ.

೧೩೬-೧೩೮. ಸುಂಟರಗಾಳಿ ಬೀಸುವ ಸಮಯ. ದನಬರುವ ಹೊತ್ತು. (ಮುಚ್ಚಂಜೆ) ಬಂಡಿಯಮೇಲೆ ಆನೆಯಮೇಲೆ ಕುದುರೆಯಮೇಲೆ ದೋಣಿಗಳಮೇಲೆ ಕುಳಿತುಕೊಂಡು ಹೋಗುವ ಸಮಯ. ನಾಯಿ, ನರಿ, ಕತ್ತೆಗಳು ಭಯಂಕರವಾಗಿ ಕೂಗುತ್ತಿರುವ ಸಮಯ. ಓಲಗ ತಾಳ ಮೇಳಗಳು ಆಗುತ್ತಿರುವ ಸಮಯ. ಊರಿನಲ್ಲಿ ಯಾವುದಾದರೊಂದು ಮೆರವಣಿಗೆ (ಉತ್ಸವ) ಹೊರಟಿದ್ದಾಗ. ಇಂತಹ ಸಮಯಗಳೂ ಸಹ ಅನಧ್ಯಯನ ಸಮಯಗಳೆಂದು ತಿಳಿದುಕೊಳ್ಳಬೇಕು.

೧೩೯. ಎಲೈ ಪರಶುರಾಮನೇ, ಕೇಳು :—ನಾನು ಇದುವರಿವಿಗೆ ಹೇಳಿರುವ ದೇಶಕಾಲಗಳಾವುವುಂಟೊ ಅವೆಲ್ಲವೂ ಅನಧ್ಯಯನ ಕಾಲಗಳೆಂದು ತಿಳಿಯಬೇಕು. ಇಂತಹ ಅನಧ್ಯಯನ ಕಾಲಗಳಲ್ಲಿ ಯಾರು ವ್ಯಾಸಂಗ ಮಾಡುವರೋ·ಅವರಿಗೆ ವಿದ್ಯೆ

**ಫಲಂಪ್ರಯಚ್ಛೇತ್ಯಥ ವಾಽರಿಶತ್ರೋ-**
**ರ್ಲೋಕೇ ಪರೆ ವಾ ಯದಿ ವಾಪಿ ಚಾಸ್ಮಿನ್ । ॥ ೧೩೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಬಾಲತಂತ್ರೋ ನಾಮ ದ್ವಿಪಂಚಾಶತ್ತಮೋಽಧ್ಯಾಯಃ**



---

ಹತ್ತುವುದಿಲ್ಲ. ಹಾಗೇನಾದರೂ ಈ ಮಾತನ್ನು ಮೀರಿ ಯಾರಾದರೂ ವಿದ್ಯೆಯನ್ನು ಅನಧ್ಯಯನಕಾಲಗಳಲ್ಲೋದಿದರೆ ಅದು ವಿರೋಧವಾದ ಫಲವನ್ನು ಕೊಡುವುದಲ್ಲದೇ ಅಂತಹ ಮನುಷ್ಯನಿಗೆ ಶತ್ರುಗಳು ಹೆಚ್ಚುವರೆಂದು ತಿಳಿದುಕೊಳ್ಳಯ್ಯ, ಪರಶುರಾಮ. ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಬಾಲತಂತ್ರವೆಂಬ ಹೆಸರಿನ
ಐವತ್ತೆರಡನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತ್ರಿಪಂಚಾಶತ್ತಮೋಽಧ್ಯಾಯಃ

ಶ್ರೀ ಪರಶುರಾಮ ಉವಾಚ

ಪುತ್ರೀಯಂ ಭಗವಾನ್ಸ್ನಾನಂ ಪುತ್ರೀಯಮಥ ಸಪ್ತಮೀಮ್ ।
ಪುತ್ರೀಯಂ ಚ ಸಮಾಚಕ್ಷ್ವ ತಥಾ ವೈ ಕೇಶವವ್ರತಂ ॥ ೧ ॥

ಪುಷ್ಕರ ಉವಾಚ

ಉಪೋಷಿತೌ ಕೃತ್ತಿಕಾಸು ಯಜಮಾನ ಪುರೋಹಿತೌ ।
ರೋಹಿಣ್ಯಾಂ ಸ್ನಾಪನಂ ಕುರ್ಯಾರ್ಯಜಮಾನಸ್ಯ ಭಾರ್ಗವ ॥ ೨ ॥

ಕ್ಷೀರವೃಕ್ಷಪ್ರರೋಹಾಭ್ಯಾಂ ಸಿತಮಾಲ್ಯವಿಭೂಷಿತಮ್ ।
ಪ್ರಿಯಂಗುಚಂದನೋಪೇತಾನ್ಪಂಚ ಕುಂಭಾನ್ಪ್ರಪೂಜಯೇತ್ । ॥ ೩ ॥

---

## ಐವತ್ತಮೂರನೆಯ ಅಧ್ಯಾಯವು.

೧. ಪರಶುರಾಮನು ಪ್ರಶ್ನೆ ಮಾಡುತ್ತಾನೆ:—ಎಲೈ ಪುಷ್ಕರನೇ, ಮಕ್ಕಳಾಗುವುದಕ್ಕೋಸ್ಕರ ಮಾಡಬೇಕಾದ ಪುತ್ರೀಯಸ್ನಾನದ ಕ್ರಮವನ್ನೂ ಪುತ್ರೀಯ ಸಪ್ತಮೀ ವ್ರತವನ್ನೂ ದಯವಿಟ್ಟು ನನಗೋಸ್ಕರ ತಿಳಿಸು.

೨. ಪುಷ್ಕರನು ಉತ್ತರ ಹೇಳುತ್ತಾನೆ:—ಯಜಮಾನ, ಪುರೋಹಿತರಿಬ್ಬರೂ ಕೃತ್ತಿಕಾ ನಕ್ಷತ್ರದ ದಿವಸ ಉಪವಾಸದಿಂದಿದ್ದು, ಮಾರನೆಯ ರೋಹಿಣೀ ನಕ್ಷತ್ರದ ದಿವಸ ಪುರೋಹಿತನು ಯಜಮಾನನಿಗೆ ಮುಂದೆ ಹೇಳುವಂತೆ ಸ್ನಾನಮಾಡಿಸಬೇಕು.

೩. ಕುಟ್ಟಿದರೆ ಹಾಲು ಬರುವ ಮರಗಳ (ಆಲ, ಮುಂತಾದುವು) ಚಿಗುರು ಪ್ರಿಯಂಗು (ಪ್ರೇಂಖಣದ ಗಿಡ) ವಿನ ಚಿಗುರುಗಳೇ ಮುಂತಾದ ಪಂಚಪಲ್ಲವ (ಐದು ವಿಧ ಚಿಗುರು) ಗಳನ್ನೂ, ಗಂಧವನ್ನೂ ಸಹ ಪೂರ್ಣಕುಂಭಗಳಲ್ಲಿ ಹಾಕಿ ಅದನ್ನು ಅಲಂಕರಿಸಿ ಅಲ್ಲಿ ಬ್ರಹ್ಮನನ್ನಾವಾಹಿಸಿ ಧೂಪ ದೀಪಾದಿಗಳಿಂದ ಅರ್ಚಿಸಬೇಕು.

ಪ್ರಾಙ್ಮುಖಂ ವ್ರೀಹಿರಾಶಿಸ್ಥಂ ಕುಂಭೈಸ್ತ್ರೈರಭಿಷೇಚಯೇತ್
ವಿಷ್ಣುಂ ಶಶಾಂಕಂ ವರುಣಂ ರೋಹಿಣೀಂ ಚ ಪ್ರಜಾಪತಿಂ ॥ ೪ ॥

ಪೂಜಯೇತ್ಪ್ರಯತಃ ಶ್ರದ್ಧೀ ಗಂಧಮಾಲ್ಯಾನುಲೇಪನೈಃ ।
ಧೂಪಃ ಪ್ರಜಾಪತೇರ್ದೇಯಸ್ತಥೈವ ಶಟಕೇಶಯೋಃ ॥ ೫ ॥

ಪಂಚಪೃಷ್ಠವೃಷಾನ್ದಿಗ್ಧಾನ್ಧಘ್ನಾ ಚ ವಿನಿವೇದಯೇತ್ ।
ಪ್ರಜಾಧ್ಯಕ್ಷಾಯ ಹೋಮಂಚ ದೇವತಾನಾಂ ತು ಕಾರಯೇತ್ ॥ ೬ ॥

ಘೃತೇನ ಸರ್ವಬೀಜೈಶ್ಚ ಶುಕ್ಲವಾಸಾ ಜಿತೇಂದ್ರಿಯಃ ।
ದಕ್ಷಿಣಾಂ ಗುರವೇ ದೇಯಾತ್ಕಾಮ್ಯಂ ಗೌರ್ವಾಸಸೀ ಶುಭೇ ॥ ೭ ॥

ಸುವರ್ಣಂ ಚ ಮಹಾಭಾಗ ವಿಪ್ರಾಣಾಮಥ ಶಕ್ತಿತಃ ।
ಶುಕ್ಲಾ ಚ ಗೌರ್ವೃಷಃಶುಕ್ಲಸ್ತಯೋರ್ಲೋಮ ಶಫಂ ತಥಾ ॥ ೮ ॥

---

೪. ಈ ರೀತಿಯಾಗಿ ಐದು ಕಲಶಗಳನ್ನು ಭತ್ತದ ರಾಶಿಯಮೇಲಿಟ್ಟು ಆ ಕುಂಭಗಳಲ್ಲಿ ಮೇಲೆ ಬರೆದಂತೆ ಒಂದರಲ್ಲಿ ಬ್ರಹ್ಮನನ್ನೂ, ಉಳಿದ ನಾಲ್ಕು ಕಲಶಗಳಲ್ಲಿ ವಿಷ್ಣು, ಚಂದ್ರ, ವರುಣ, ರೋಹಿಣಿಯರನ್ನೂ ಆವಾಹಿಸಬೇಕು.

೫. ಕಲಶಗಳೆಲ್ಲವೂ ಪೂರ್ವಾಭಿಮುಖವಾಗಿರಬೇಕು. ಈ ಕಲಶಗಳಲ್ಲಿರುವ ಜಲಗಳಿಂದ ಯಜಮಾನನಿಗೆ ಅಭಿಷೇಕ (ಪ್ರೋಕ್ಷಣೆ) ಮಾಡಬೇಕು. ಈ ಐದು ದೇವತೆಗಳನ್ನೂ ಶ್ರದ್ಧೆಯಿಂದ ಪೂಜಿಸಬೇಕು.

೬. ಧೂಪ ದೀಪ ನೈವೇದ್ಯ ತಾಂಬೂಲಗಳನ್ನು ಸಮರ್ಪಿಸಿ ಹಾಲು ಮೊಸರು ಗಳನ್ನು ನಿವೇದಿಸಬೇಕು. ಆ ಬಳಿಕ ಬ್ರಹ್ಮನಿಗೂ, ಇತರ ದೇವತೆಗಳಿಗೂ ಅಗ್ನಿಯಲ್ಲಿ ಆಜ್ಯಾಹುತಿಯನ್ನು ಕೊಡಬೇಕು.

೭. ಆ ದಿವಸ ಶುಭ್ರವಸ್ತ್ರವನ್ನು ಧರಿಸಿ ಜಿತೇಂದ್ರಿಯನಾಗಿರಬೇಕು. ಗುರುವಿಗೆ ದಕ್ಷಿಣೆಯನ್ನು ಕೊಡಬೇಕು. ಮತ್ತು ಗೋದಾನ, ವಸ್ತ್ರದಾನಗಳನ್ನೂ ಸಹ ಮಾಡಬೇಕು.

೮. ಎಲೈ ಪರಶುರಾಮನೇ, ಕೇಳು :—ಆ ದಿವಸ ಅಲ್ಲಿ ನೆರೆದಿದ್ದ ಬ್ರಾಹ್ಮಣ ರೆಲ್ಲರಿಗೂ ಸುವರ್ಣನಾಣ್ಯವನ್ನು ದಕ್ಷಿಣಾರೂಪವಾಗಿ ಕೊಡಬೇಕು. ಒಂದು ಬಿಳೀ ಹಸುವಿನ, ಒಂದು ಬಿಳೀ ಎತ್ತಿನ ಕೂದಲುಗಳನ್ನೂ, ಅದರ ಕಾಲಿನ ಗೊರಸಿನ ಒಂದು ಚೂರನ್ನೂ ಸೇರಿಸಿ,

ಶೃಂಗಾಣಿ ತ್ರಿವೃತಂ ಕೃತ್ವಾ ಮಣಿರ್ಧಾರ್ಯಸ್ತತೋ ಭವೇತ್ ॥ ೯ ॥

ಅಲಂಕೃತಂ ಕೇಶಮಿದಂ ಸದೈವ ಸ್ನಾನಂ ತು ।
ಕುರ್ವನ್ಪುರುಷೋಽಥವಾ ಸ್ತ್ರೀ ॥
ಪುತ್ರಾನವಾಪ್ನೋತಿ ತಥೇಷ್ಟತಾಂ ಚ ।
ಪುಷ್ಟಿಂ ತಥಾಗ್ರ್ಯಾಂ ವಿಪುಲಾಂ ಚ ಕೀರ್ತಿಂ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪುತ್ರೀಯರೋಹಿಣೀ ಸ್ನಾನವರ್ಣನಂ ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

೯. ಮೂರಾವರ್ತಿ ಅದನ್ನು ಹೊಸೆದು ಅದರ ಕೊಂಬಿಗೆ ಸುತ್ತಿ, ಅದನ್ನು ಧಾರಕ್ಕೆ ಸುತ್ತಿಕೊಂಡು ಆ ಧಾರಕ್ಕೆ ಮಣಿಯನ್ನು ಪೋಣಿಸಿ, ಅದನ್ನು ಮೈಯಲ್ಲಿ ಧರಿಸಬೇಕು.

೧೦. ಈ ರೀತಿ ಮೇಲೆ ವಿವರಿಸಿದ ಕ್ರಮದಂತೆ ಹೆಂಗಸಾಗಲೀ ಅಥವಾ ಗಂಡಸಾಗಲೀ ಯಾರು ಈ ಪುತ್ರೀಯಸ್ನಾನವನ್ನು ಆಚರಿಸುವರೋ, ಅವರು ಪುತ್ರ ಸಂಪತ್ತನ್ನು ಹೊಂದುವವರಲ್ಲದೆ ತಮ್ಮ ಮನಸ್ಸಿನ ಇಷ್ಟಾರ್ಥಗಳನ್ನು ಸಹ ತಪ್ಪದೆ ಹೊಂದುತ್ತಾರೆ. ಇಷ್ಟೂ ಅಲ್ಲದೆ ಪುಷ್ಟಿಯನ್ನೂ, ಶ್ರೇಷ್ಠವಾದ ಕೀರ್ತಿಯನ್ನೂ ಸಹ ಹೊಂದುತ್ತಾರೆಂದು ಪುಷ್ಕರನು ಪರಶುರಾಮನಿಗೆ ವಿವರಿಸಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಪುತ್ರೀಯರೋಹಿಣೀಸ್ನಾನ ವರ್ಣನೆಯೆಂಬ
ಹೆಸರಿನ ಐವತ್ತಮೂರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಚತುಷ್ಪಂಚಾಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

ಮಾರ್ಗಶೀರ್ಷೇ ಶುಭೇ ಮಾಸಿ ಶುಕ್ಲಪಕ್ಷೇ ದ್ವಿಜೋತ್ತಮ ।
ಪುತ್ರೀಯಾಂ ಸಪ್ತಮೀಂ ರಾಮ ಗೃಹ್ಣೀಯಾತ್ಪ್ರಯತಃ ಶುಚಿಃ ॥ ೧ ॥

ಅಥವಾ ಪುತ್ರಕಾಮಾ ಸ್ತ್ರೀ ವಿಧಿನಾ ಯೇನ ತಚ್ಛೃಣು ।
ಹವಿಷ್ಯಾಶೀ ಶಿರಃಸ್ನಾತಃ ಕೃತ್ವಾ ಬ್ರಾಹ್ಮಣಪೂಜನಮ್ ॥ ೨ ॥

ಅಧಃಶಾಯೀ ದ್ವಿತೀಯೇಽಹ್ನಿ ಗೋವಿಷಾಣೋದಕೇನ ಚ ।
ಸ್ನಾತ್ವೋಪವಿಶ್ಯ ಚ ತಥಾ ಶುಭೇ ದೇಶೇ ತು ಮಂಡಲಮ್ ॥ ೩ ॥

---

### ಐವತ್ತನಾಲ್ಕನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:-ಎಲೈ ಪರಶುರಾಮನೇ, ಕೇಳು. ಇದುವರಿವಿಗೆ ನಿನಗೆ ಪುತ್ರೀಯರೋಹಿಣೀಸ್ನಾನ ವಿಧಿಯನ್ನು ಹೇಳಿಯಾಯಿತು. ಈಗ ಪುತ್ರೀಯ ಸಪ್ತಮೀಸ್ನಾನ ವಿಧಿಯನ್ನುಸುರುವೆನು. ಈ ಸ್ನಾನವನ್ನು ಮಂಗಳಕರವಾದ ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ಮಾಡಬೇಕು.

೨. ಇದನ್ನು ಪುತ್ರಾಪೇಕ್ಷಿಗಳಾದ ಗಂಡಸಾಗಲಿ, ಹೆಂಗಸೇ ಆಗಲಿ ಮಾಡ ಬಹುದು. ಅದರ ವಿಧಿಯನ್ನೀಗ ಹೇಳುತ್ತೇನೆ. ಮೊದಲನೇ ದಿವಸ ಈ ವ್ರತ ಮಾಡುವವನು ತಲೆಗೆ ಸ್ನಾನಮಾಡಿ ಬ್ರಾಹ್ಮಣಪೂಜೆಯನ್ನು ಮಾಡಬೇಕು. ಆ ದಿವಸ ಹವಿಷ್ಯಾನ್ನವನ್ನು ಮಾತ್ರ ತಿಂದುಕೊಂಡಿರಬೇಕು. ನೆಲದಮೇಲೆ ಮಲಗಬೇಕು.

೩-೪. ಎರಡನೇ ದಿವಸ ಗೋಶೃಂಗದಿಂದ ಬಂದ ಉದಕದಿಂದ ಸ್ನಾನಮಾಡಿ, ಪರಿಶುದ್ಧವಾದ ಪ್ರದೇಶದಲ್ಲಿ ಕುಳಿತು ಮಂಡಲವನ್ನು ಮಾಡಿ, ಆ ಮಂಡಲದ ಮೇಲೆ

ತತ್ರಾಷ್ಟಪತ್ರಂ ಕಮಲಂ ವಿನ್ಯಸೇದ್ವರ್ಣಕೈಃ ಶುಭೈಃ ।
ತಸ್ಯೈನ ಕರ್ಣಿಕಾಮಧ್ಯೇ ಭಾಸ್ಕರಂ ಚಂದನೇನ ತು ॥ ೪ ॥

ರಕ್ತೇನ ಪೂಜಯೇದ್ದೇವಂ ಗಂಧಮಾಲ್ಯಾನುಲೇಪನೈಃ ।
ಭಕ್ಷ್ಯೈರ್ಭೋಜ್ಯೈಸ್ತಥಾ ಪೇಯೈರ್ಧೂಪೈರ್ದೀಪೈಸ್ತಥೈವ ಚ ॥ ೫ ॥

ಏವಂ ಸಂಪೂಜನಂ ಕೃತ್ವಾ ಸರ್ವಕಾಮಪ್ರದಸ್ಯತು ।
ನಕ್ತಂ ಭುಂಜೀತ ಧರ್ಮಜ್ಞ ಸರ್ವಕರ್ಮವಿವರ್ಜಿತಃ ॥ ೬ ॥

ದನ್ತೋಲೂಖಲಕೋ ಭೂತ್ವಾ ಕೃತ್ವಾ ಸಂವತ್ಸರವ್ರತಮ್ ।
ವ್ರತಾವಸಾನೇ ದಾತವ್ಯಾ ಶಕ್ತ್ಯಾ ಬ್ರಾಹ್ಮಣದಕ್ಷಿಣಾ ॥ ೭ ॥

---

ರಂಗವಲ್ಲಿಗಳಿಂದ ಅಷ್ಟದಳಕಮಲಗಳನ್ನು ಬರೆದು, ಅದರ ಕರ್ಣಿಕಾಮಧ್ಯದಲ್ಲಿ ಸೂರ್ಯಮಂಡಲವನ್ನಿಟ್ಟು ಅದನ್ನು ಪೂಜೆಮಾಡಬೇಕು.

೫. ಸೂರ್ಯನನ್ನು ರಕ್ತಗಂಧ, ರಕ್ತಾಕ್ಷತೆ, ರಕ್ತಪುಷ್ಪಗಳಿಂದಲೇ ಪೂಜಿಸಿ ಭಕ್ಷ್ಯ ಭೋಜ್ಯ ಧೂಪದೀಪಾದಿಗಳಿಂದ ಅರ್ಚಿಸಬೇಕು.

೬. ಈರೀತಿ ಪೂಜೆಯೆಲ್ಲಾ ಬೆಳದಮೇಲೆ ಹಗಲು ಊಟಮಾಡಕೂಡದು. ಆ ದಿವಸ ಸರ್ವಕಾಮಪ್ರದನಾದ ಸೂರ್ಯನ ಧ್ಯಾನ ವಿನಹ ಇನ್ನಾವ ಕರ್ಮಗಳನ್ನೂ ಮಾಡದೆ ರಾತ್ರಿ ಮಾತ್ರ ಊಟಮಾಡಬೇಕು.

೭. ಇಲ್ಲಿ ದಂತೋಲೂಖಲಕೋ-ಭೂತ್ವಾ ಎಂದು ಹೇಳಿದಾರೆ. ದಂತ ಎಂದರೆ ಹಲ್ಲು. ಉಲೂಖಲವೆಂದರೆ ಒರಳು. ಈ ಎರಡರ್ಥವೂ ಇಲ್ಲಿ ಸಮಂಜಸ ವಾಗುವುದಿಲ್ಲವಾದ್ದರಿಂದ, ಒರಳಲ್ಲಿ ಹಿಟ್ಟನ್ನು ತಿರುವಿದಂತೆ ಇಂದ್ರಿಯಗಳನ್ನು ಅರೆಯ ಬೇಕು. ಅಥವಾ ನಿಗ್ರಹಿಸಬೇಕೆಂದು ಇಲ್ಲಿ ಅರ್ಥಮಾಡಬಹುದೆಂದು ತೋರುವುದ ರಿಂದ, ಇಲ್ಲಿ ಜಿತೇಂದ್ರಿಯನಾಗಿ ಈ ವ್ರತವನ್ನು ವರ್ಷ ಪೂರ್ತಾ ಮಾಡಬೇಕೆಂದು ತಾತ್ಪರ್ಯ ಬರೆದಿದೇನೆ. ಅಭಿಜ್ಞರು ಇನ್ನೇನಾದರೂ ವಿಶೇಷಾರ್ಥವಿದ್ದರೆ ಈ ದಂತೋ ಲೂಖಲವೆಂಬುದರ ಅರ್ಥವನ್ನು ವಿವರಿಸಬೇಕಾಗಿ ಕೋರುತ್ತೇನೆ.

ಈರೀತಿ ಒಂದು ವರ್ಷಕಾಲ ವ್ರತ ಮಾಡಿದ ಬಳಿಕ ಬ್ರಾಹ್ಮಣರಿಗೆ ಯಥಾಶಕ್ತಿ ಯಾಗಿ ದಕ್ಷಿಣೆಗಳನ್ನು ಕೊಡಬೇಕು.

**ತಥಾತ್ರಿಮಧುರಸ್ತ್ರಾಯಂ ಕರ್ತವ್ಯಂ ದ್ವಿಜಭೋಜನಮ್ ।**
**ಅಧಃಶಾಯ್ಯನಿಶಂ ತಾಂ ಚ ಭೂಯಏವ ತಥಾ ಭವೇತ್ ॥ ೮ ॥**

**ಪುತ್ರೀಯಮೇತದ್ವ್ರತಮುತ್ತಮಂ ತೇ**
**ಮಯೋದಿತಂ ಕಲ್ಮಷನಾಶಕಾರೀ ।**
**ಆರಾಧನಂ ದೇವವರಸ್ಯ ರಾಮ**
**ಸರ್ವಾಮಯಘ್ನಂ ಚ ತಥೈತದುಕ್ತಮ್ ॥ ೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಪುತ್ರೀಯಾ ಸಪ್ತಮೀವ್ರತಂನಾಮ ಚತುಷ್ಪಂಚಾಶತ್ತಮೋಽಧ್ಯಾಯಃ**

---

೮. ವ್ರತಕಾಲದಲ್ಲಿ ಮಧುರಪದಾರ್ಥಗಳನ್ನಲ್ಲದೆ ಬೇರೇ ರಸಪದಾರ್ಥಗಳನ್ನು ಭೋಜನಕ್ಕಾಗಿ ಉಪಯೋಗಿಸಕೂಡದು. ವ್ರತಸಮಯದಲ್ಲಿ ನೆಲದಮೇಲೆ ಮಲಗ ಬೇಕೇ ಹೊರ್ತು ಸುಪ್ಪತ್ತಿಗೆಗಳನ್ನು ಉಪಯೋಗಿಸಕೂಡದು.

೯. ಈರೀತಿ ಮಾಡುವ ವ್ರತಕ್ಕೆ ಪುತ್ರೀಯಸಪ್ತಮೀ ವ್ರತವೆಂದು ಹೆಸರು. (ಮುಖ್ಯವಾಗಿ ಇಲ್ಲಿ ತಿಳಿಯಬೇಕಾದ ಮುಖ್ಯಾಭಿಪ್ರಾಯವೇನೆಂದರೆ, ಸಪ್ತಮೀ ತಿಥಿಯು ಸೂರ್ಯನಿಗೆ ಇಷ್ಟವಾದ ದಿವಸವಾದ್ದರಿಂದ ಪ್ರತಿ ತಿಂಗಳ ಶುದ್ಧ ಸಪ್ತಮೀ ದಿವಸವೂ ಸೂರ್ಯನಮಸ್ಕಾರವನ್ನು ತಪ್ಪದೆ ವಿಧಿವಿಹಿತವಾಗಿ ಮಾಡಬೇಕೆಂದು ಹೇಳಿದಂತಾಯಿತು. ಈ ಮಧ್ಯದಲ್ಲಿ ರಥಸಪ್ತಮಿಯೂ ಒಂದಾವರ್ತಿ ಬರುತ್ತದೆ.)

ಎಲೈ ಪರಶುರಾಮನೇ, ಈ ಪರಮಪವಿತ್ರವಾದ ಪುತ್ರೀಯವ್ರತವನ್ನು ಈಗ ನಿನಗೆ ಹೇಳಿರುತ್ತೇನೆ. ಈ ವ್ರತವು ಸಕಲ ಪಾಪಗಳನ್ನೂ ಪರಿಹಾರಮಾಡುವ ಶಕ್ತಿ ಯುಳ್ಳದ್ದು. ಆದ್ದರಿಂದ ದೇವದೇವೋತ್ತಮನಾದ ಭಗವಾನ್ ಸೂರ್ಯನಾರಾಯಣನ ಆರಾಧನೆಯು ಸಕಲವಿಧ ರೋಗಗಳನ್ನೂ ಪರಿಹಾರಮಾಡಿ ಪುತ್ರಪ್ರಾಪ್ತಿಯನ್ನುಂಟು ಮಾಡುವುದೆಂಬ ತತ್ವರಹಸ್ಯವನ್ನು ತಿಳಿದು ಈ ವ್ರತವನ್ನು ಮಾಡಿದರೆ ಸುಪುತ್ರರು ಹುಟ್ಟುವರಯ್ಯಾ! ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ಎರಡನೇ ಖಂಡದಲ್ಲಿ ಪುತ್ರೀಯಸಪ್ತಮೀ ವ್ರತವೆಂಬ ಹೆಸರಿನ ಐವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಪಂಚಪಂಚಾಶತ್ತಮೋಽಧ್ಯಾಯಃ

### ಪುಷ್ಕರ ಉವಾಚ

ಪ್ರೋಷ್ಠಪದ್ಯಾಮತೀತಾಯಾಂ ಕೃಷ್ಣಪಕ್ಷಾಷ್ಟಮೀ ತು ಯಾ ।
ಸೋಪವಾಸೋ ನರಸ್ತಸ್ಯಾಂ ಯೋಷಿದ್ವಾ ತನಯಾರ್ಥಿನೀ ॥ ೧ ॥

ಸ್ನಾತಾ ಸರಸಿ ಧರ್ಮಜ್ಞ ತೋಯೇ ಚಾಪ್ಯಥ ಸಾರಸೇ ।
ಪೂಜನಂ ವಾಸುದೇವಸ್ಯ ಯಥಾ ಕುರ್ಯಾತ್ತಥಾ ಶೃಣು ॥ ೨ ॥

ಘೃತಪ್ರಸ್ಥೇನ ಗೋವಿಂದಂ ಸ್ನಾಪಯಿತ್ವಾ ಜಗದ್ಗುರುಮ್ ।
ಕ್ಷೌದ್ರೇಣ ಚ ತತಃ ಪಶ್ಚಾದ್ದಧ್ನಾ ಚ ಸ್ನಪಯೇತ್ತತಃ ॥ ೩ ॥

---

### ಐವತ್ತೈದನೆಯ ಅಧ್ಯಾಯವು

೧-೨. ಪುಷ್ಕರನು ಪುನಃ ಹೇಳುತ್ತಾನೆ.—ಮಕ್ಕಳಾಗಬೇಕೆಂಬ ಆಸೆಯುಳ್ಳವರು ಮಾಡಬೇಕಾದ ಇನ್ನೂ ಒಂದು ವ್ರತವಿದೆ. ಅದನ್ನೂ ಸಹ ಹೇಳುತ್ತೇನೆ. ಕೇಳು. ಇದಕ್ಕೆ ಪುತ್ರೀಯಾಷ್ಟಮೀ ವ್ರತವೆಂದು ಹೆಸರು. ಈ ವ್ರತವನ್ನು ಭಾದ್ರಪದ ಮಾಸ ಕಳೆದುಹೋಗುತ್ತಿರುವ ಸಂದರ್ಭದಲ್ಲೊದಗುವ ಬಹುಳ ಅಷ್ಟಮಿಯ ದಿವಸ ಮಾಡಬೇಕು. ಆ ಅಷ್ಟಮಿಯ ದಿವಸ ವ್ರತಮಾಡುವ ಯಜಮಾನನು ಉಪವಾಸದಿಂದಿರಬೇಕು. ಪ್ರಾತಃಕಾಲ ಎದ್ದೊಡನೆ ನದಿಯಲ್ಲಾಗಲೀ ಸರೋವರದಲ್ಲಾಗಲೀ ಸ್ನಾನಮಾಡಿ ವಾಸುದೇವನ ಪೂಜೆಯನ್ನು ಮಾಡಬೇಕು. ಆ ಪೂಜಾವಿಧಾನವನ್ನೀಗ ನಿನ್ನೊಡನೆ ವಿವರಿಸುತ್ತೇನೆ, ಕೇಳು.

೩. ವಾಸುದೇವಮೂರ್ತಿಯ ಪ್ರತಿಮೆ ಅಥವಾ ಸಾಲಿಗ್ರಾಮಕ್ಕೆ ಮೊದಲು ಆಜ್ಯಸ್ನಾನವನ್ನೂ, ಆಮೇಲೆ ಜೇನುತುಪ್ಪದ ಅಭಿಷೇಕವನ್ನೂ, ಆಮೇಲೆ ದಧಿಸ್ನಾನವನ್ನೂ ಮಾಡಿಸಬೇಕು.

ಕ್ಷೀರೇಣ ಸ್ನಪನಂ ಕೃತ್ವಾ ತತಃ ಪಶ್ಚಾದ್ವಿವಕ್ಷಿತಮ್ ।
ಸರ್ವೌಷಧೈಶ್ಚ ಗಂಧೈಶ್ಚ ಸರ್ವಬೀಜಫಲೈಸ್ತಥಾ ॥ ೪ ॥

ಸ್ನಾಪಯಿತ್ವಾಽನುಲಿಪ್ಯೇತ ಚಂದನಾಗುರುಕುಂಕುಮೈಃ ।
ಕರ್ಪೂರೇಣ ತಥಾ ರಾಮ ತಥಾ ಜಾತೀಫಲೈಃ ಶುಭೈಃ ॥ ೫ ॥

ತತಃ ಕಾಲೋದ್ಭವೈಃ ಪುಷ್ಪೈಃ ಪೂಜಯಿತ್ವಾ ಜನಾರ್ದನಂ ।
ಧೂಪಂ ಚಾಗುರುಣಾ ದತ್ವಾ ಕೃತ್ವಾ ನೈವೇದ್ಯಮುತ್ತಮಂ ॥ ೬ ॥

ವಿಶೇಷಾದ್ಘೋರಸಪ್ರಾಯಂ ಪುನ್ನಾಗೈರನ್ವಿತೈಃ ಫಲೈಃ ।
ಪೌರುಷೇಣ ಚ ಸೂಕ್ತೇನ ಹುತ್ವಾ ಚಾನಂತರಂ ಘೃತಂ ॥ ೭ ॥

---

೪. ದಧಿಸ್ನಾನಾನಂತರ 'ಶುದ್ಧೋದಕೇನಸ್ನಪಯಾಮಿ' ಎಂದು ಹೇಳಿ, ಅದರಂತೆ ಮಾಡಿದ ಬಳಿಕ ಕ್ಷೀರಾಭಿಷೇಕವನ್ನು ಮಾಡಬೇಕು. ಆಮೇಲೆ ಅಭಿಷೇಕ ಕ್ರಮವನ್ನನುಸರಿಸಿ ಸರ್ವೌಷಧರಸಗಳಿಂದಲೂ, ಗಂಧೋದಕದಿಂದಲೂ, ಸರ್ವಬೀಜ ಫಲರಸಗಳಿಂದಲೂ ಸ್ನಪನವಾಗಬೇಕು.

೫. ಈರೀತಿ ಪಂಚಾಮೃತಾದಿಗಳ ಅಭಿಷೇಕಮಾಡಿದಮೇಲೆ ದೇವರನ್ನು ಶುಭ ವಸ್ತ್ರದಲ್ಲೊರಸಿ, ಸಂಪುಟದಲ್ಲಿ ಇರಿಸಿ, ಗಂಧ, ಹೂ, ಮಂತ್ರಾಕ್ಷತೆ, ಅರಿಶಿನಕುಂಕುಮ, ಸುವಾಸನಾಪುಷ್ಪಗಳಿಂದ ಪೂಜಿಸಬೇಕು.

೬. ಮತ್ತು ಆ ಕಾಲದಲ್ಲಿ ಬಿಡುವ ಹೂವುಗಳನ್ನು ತಂದು ಜನಾರ್ದನ (ವಾಸುದೇವ) ಸ್ವಾಮಿಗೆ ಭಕ್ತಿಯಿಂದ ಪೂಜಿಸಬೇಕು. ಪುಷ್ಪಪೂಜಾನಂತರದಲ್ಲಿ ಧೂಪದೀಪಾದಿ ಸೇವೆಗಳನ್ನು ಮಾಡಿ, ಅತ್ಯುತ್ತಮವಾದ ಭಕ್ಷ್ಯಗಳನ್ನು ನಿವೇದನ ಮಾಡಬೇಕು.

೭. ಬೆಣ್ಣೆ ಕಾಸಿದ ತುಪ್ಪದಲ್ಲಿ ಮಾಡಿದ ಭಕ್ಷ್ಯಗಳನ್ನೂ, ಕೇಸರಿ, ಪಚ್ಚ ಕರ್ಪೂರ, ಏಲಕ್ಕಿಗಳಿಂದ ಕೂಡಿದ ಹಾಲುಕೀರನ್ನೂ (ಪಾಯಸ). ಅತ್ಯುತ್ತಮವಾದ ಹಣ್ಣುಹಂಪಲುಗಳನ್ನೂ ನಿವೇದನಮಾಡಬೇಕು. ಆ ರೀತಿ ಪೂಜೆ ಬೆಳದ ಬಳಿಕ ಪುರುಷಸೂಕ್ತಮಂತ್ರಗಳಿಂದ ಅಗ್ನಿಯಲ್ಲಿ ತುಪ್ಪವನ್ನು ಹೋಮಮಾಡಬೇಕು. (ತುಪ್ಪ ದಿಂದ ಹೋಮಮಾಡು ಅಥವಾ ತುಪ್ಪವನ್ನು ಹೋಮಮಾಡೆಂದೂ ಸಹ ಪ್ರಯೋಗ ಮಾಡುವುದರಿಂದ ತಪ್ಪೇನೂ ಆಗಲಾರದು. ಇದು ಭಾವೇ ಪ್ರಯೋಗವೆನಿಸುವುದು.)

ಶೂದ್ರೋऽಪ್ಯಥವಾ ನಾರೀ ನಾಮ್ನಾ ಹುತ್ವಾ ಜಗದ್ಗುರುಂ ।
ಯವಪಾತ್ರಾಣಿ ದದ್ಯಾತ್ತು ಫಲಾನ್ಯಗ್ನಿ ಕನಕಂ ತಥಾ ॥ ೮ ॥

ಪುತ್ರಾರ್ಥೀ ಪ್ರಾಶನಂ ಕುರ್ಯಾತ್ಫಲೈಃ ಪುನ್ನಾಮಭಿಃ ಶುಭೈಃ ।
ಸ್ತ್ರೀನಾಮಭಿಶ್ಚ ಕನ್ಯಾರ್ಥೀ ತತೋ ಭುಕ್ತ್ವಾ ಯಥೇಪ್ಸಿತಂ ॥ ೯ ॥

ಪುತ್ರಕಾಮಾನವಾಪ್ನೋತಿ ತಥಾ ಸರ್ವಮಭೀಪ್ಸಿತಂ ।
ಹವಿಷ್ಯಂ ದೇವದೇವಸ್ಯ ಭೂಮಿಶೋಭಾಂ ತು ಕಾರಯೇತ್ ॥ ೧೦ ॥

ಸಂವತ್ಸರಮಿದಂ ಕೃತ್ವಾ ವ್ರತಮಾಪ್ನೋತ್ಯಭೀಪ್ಸಿತಂ ।
ಪುತ್ರಕಾಮಾನವಾಪ್ನೋತಿ ತಥಾ ಸರ್ವಾನಭೀಪ್ಸಿತಾನ್ ॥ ೧೧ ॥

---

೮. ಸ್ತ್ರೀಯರೇ ಆಗಲೀ, ಶೂದ್ರರೇ ಆಗಲೀ ಜಗದ್ಗುರುವಾದ ಮಹಾವಿಷ್ಣುವನ್ನು ನಾಮಮಂತ್ರಗಳಿಂದ ಹೋಮಮಾಡಿ ತೃಪ್ತಿಪಡಿಸಬೇಕು.

೯. ಪೂಜಾ, ಹೋಮಗಳಾದ ಬಳಿಕ ಗಂಡುಮಕ್ಕಳಾಗಬೇಕೆನ್ನುವವರು ಪುಲ್ಲಿಂಗದ ಹೆಸರಿರುವ ಹಣ್ಣುಗಳನ್ನೂ (ರಸಾಲ, ಮಾವಿನಹಣ್ಣು, ಪನಸ, ಹಲಸಿನ ಹಣ್ಣು), ಹೆಣ್ಣುಮಕ್ಕಳಾಗಬೇಕೆಂದಾಸೆಯಿರುವವರು ಸ್ತ್ರೀಲಿಂಗ ನಾಮವುಳ್ಳ ಫಲಗಳನ್ನು (ಬದರೀ, ಯಲಚೀ, ಕದಳೀ, ಬಾಳೆಹಣ್ಣು) ತಿಂದು, ಆ ಬಳಿಕ ಬೇಕಾದ ಭಕ್ಷ್ಯಭೋಜನಗಳುಳ್ಳ ಭೋಜನವನ್ನು ಮಾಡಬೇಕು.

೧೦. ಈ ರೀತಿ ನಿಯಮದಿಂದ ಮಾಡುವವರು ತಮ್ಮ ತಮ್ಮ ಕೋರಿಕೆಯಿದ್ದಂತೆ ಹೆಣ್ಣುಮಕ್ಕಳನ್ನಾಗಲಿ, ಗಂಡುಮಕ್ಕಳನ್ನಾಗಲಿ ಪಡೆಯಬಹುದು. ಮತ್ತು ಮನೋರಥಗಳೂ ಸಹ ಪೂರ್ಣವಾಗುವುವು. ದೇವರ ಮುಂದೆ ನೈವೇದ್ಯಕ್ಕಿಡುವಾಗ ಮಂಡಲ ಮಾಡಿ, ಅದರ ಮೇಲೆ ರಂಗೋಲಿ ಹಸೆಯನ್ನು ಬರೆದು ಅದರ ಮೇಲೆ ನೈವೇದ್ಯವನ್ನಿಡಬೇಕು.

೧೧-೧೨. ಈ ರೀತಿ ಈ ವ್ರತವನ್ನು ಒಂದು ವರ್ಷದವರಿಗೆ ಪ್ರತಿ ಅಷ್ಟಮಿಯಲ್ಲೂ ತಪ್ಪದೆ ಯಾರು ಮಾಡುತ್ತಾಬರುವರೋ, ಅಂಥವರು ತಮ್ಮ ತಮ್ಮ

ಪುತ್ರೀಯಮೇತದ್ವ್ರತಮುತ್ತಮಂ ತೇ ।
ಮಯೇರಿತಂ ಯದ್ಯಪಿ ಧರ್ಮನಿತ್ಯಂ ॥
ತಥಾಽಪ್ಯನೇನೈವ ಸಮಸ್ತಕಾಮಾ ।
ನ್ಯಕೇನ ಲೋಕೇ ಪುರುಷಾ ಲಭಂತೇ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇಪುತ್ರೀಯಾಷ್ಟಮಿೂ ವ್ರತಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ**



---

ಇಷ್ಟಾರ್ಥಗಳನ್ನೆಲ್ಲಾ ನಿಸ್ಸಂದೇಹವಾಗಿ ಹೊಂದುವರೆಂದು ಪರಶುರಾಮನಿಗೆ ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ
ದ್ವಿತೀಯ ಖಂಡದಲ್ಲಿ ಪುತ್ರೀಯಾಷ್ಟಮೀ ವ್ರತವೆಂಬ ಹೆಸರಿನ
ಐವತ್ತೈದನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಷಟ್ಪಂಚಾಶತ್ತಮೋಽಧ್ಯಾಯಃ

### ಶ್ರೀ ಪರಶುರಾಮಉವಾಚ

**ಭಗವಂಚ್ಛ್ರೋತುಮಿಚ್ಛಾಮಿ ಪುರುಷಾಣಾಂ ಚಿಕಿತ್ಸಿತಂ ।**
**ತನ್ಮಮಾಚಕ್ಷ್ವದೇವೇಶ ತತ್ರ ಮೇ ಸಂಶಯೋ ಮಹಾನ್ ॥ ೧ ॥**

---

### ಐವತ್ತಾರನೆಯ ಅಧ್ಯಾಯವು

೧. ಪರಶುರಾಮನು ಪುನಃ ಹೇಳುತ್ತಾನೆ:— ಎಲೈ ಭಗವಂತನಾದ ಪುಷ್ಕರನೇ !—

ಟಿಪ್ಪಣಿ :—ಪ್ರಾಣಿಗಳ ಉತ್ಪತ್ತಿ, ನಾಶಗಳನ್ನೂ, ಅವುಗಳ ಗಮನಾಗಮನ ಗಳನ್ನೂ, ಜ್ಞಾನಾಜ್ಞಾನಗಳನ್ನೂ ತಿಳಿಯುವ ಶಕ್ತಿಯುಳ್ಳ ಮಹಾತ್ಮರು ಭಗವಂತ ಶಬ್ದವಾಚ್ಯರಾಗುವರು. ಇವರನ್ನು ಷಡ್ಗುಣೈಶ್ವರ್ಯಸಂಪನ್ನರೆಂದೂ ಕರೆಯುವರು.

ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಂ ।
ವೇತ್ತಿ ವಿದ್ಯಾಮವಿದ್ಯಾಂ ಚ ಸವಾಚ್ಯೋ ಭಗವಾನಿತಿ ॥

ಎಂಬ ಶ್ಲೋಕವೇ ಇದಕ್ಕೆ ಪ್ರಮಾಣ. ಪುಷ್ಕರನಿಗೆ ಇಂತಹ ದಿವ್ಯಜ್ಞಾನವಿದ್ದುದ ರಿಂದಲೇ ಪರಶುರಾಮನು ಭಗವಂತನೆಂದು ಸಂಬೋಧಿಸಿರುವನು. ಎಲೈ ಜ್ಞಾನ ನಿಧಿಯಾದ ಪುಷ್ಕರನೇ! ತಾಯಿಯರು ಮಕ್ಕಳನ್ನು ಹೆತ್ತು ಅವರನ್ನು ಪೋಷಿಸುವಾಗ ಅವರು ದೊಡ್ಡವರಾಗುವವರಿಗೂ ಮಾಡಬೇಕಾದ ಕಾರ್ಯಗಳನ್ನೆಲ್ಲಾ ಇದುವರಿವಿಗೆ ತಿಳಿಸಿರುತ್ತೀಯೆ. ಮುಂದೆ ಅವರು ದೊಡ್ಡವರಾದಮೇಲೆ ಅವರಿಗೆ ಏನಾದರೂ ಖಾಯಿಲೆ, ಕಸಾಲೆ ಸಂಭವಿಸಿದಾಗ ಮಾಡಬೇಕಾದ ಚಿಕಿತ್ಸಾಕ್ರಮವನ್ನು ದಯವಿಟ್ಟು ತಿಳಿಸ ಬೇಕೆಂದು ಪ್ರಾರ್ಥಿಸುತ್ತೇನೆ. ಈ ವಿಷಯದಲ್ಲಿ ನನಗೆ ಬಹಳ ಸಂದೇಹ ಬಂದಿರುವುದ ರಿಂದ ಮನುಷ್ಯರ ಖಾಯಿಲೆಗಳಿಗೆ ಔಷಧಗಳನ್ನು ತಿಳಿಸೋಣವಾಗಬೇಕು.

## ಪುಷ್ಕರ ಉವಾಚ

**ರಕ್ಷನ್ಬಲಂ ಮಹಾಭಾಗ ಲಂಘಯೇಜ್ಜ್ವರಿತಂ ನರಂ**
**ಸವಿಶ್ವಂ ಲಾಜಮನ್ನಂ ತು ಲಂಘಿತಂ ತತ್ತು ಭೋಜಯೇತ್ ॥ ೨ ॥**

**ಮುಸ್ತಪರ್ಪಟಕೋಶೀರ ಚಂದನೋದ್ದೀಚ್ಯನಾಗರೈಃ ।**
**ಘೃತಂ ಶೀತಂ ಪಯಶ್ಚಾತ್ರ ದಾತವ್ಯಂ ತೃಟ್ಪ್ರಶಾಂತಯೇ ॥ ೩ ॥**

**ಷಡಹೇ ಚ ವ್ಯತಿಕ್ರಾಂತೇ ತಿಕ್ತಕಂ ಪಾಯಯೇದ್ರಸಂ ॥ ೪ ॥**

---

೨. ಪುಷ್ಕರನು ಉತ್ತರ ಕೊಡುತ್ತಾನೆ:— ತನ್ನ ಸೈನ್ಯವನ್ನು ರಕ್ಷಿಸುವುದಕ್ಕೋಸ್ಕರ ಕಾಲುಬಲ (ಮನುಷ್ಯ) ವನ್ನು ರಾಜನಾದವನು ಚೆನ್ನಾಗಿ ಕಾಪಾಡಿಕೊಳ್ಳಬೇಕಾದುದು, ಮುಖ್ಯವಾದ ಮೊದಲನೆಯ ಕೆಲಸವಾದ್ದರಿಂದಲೂ ಎಲ್ಲ ರೋಗಗಳಿಗಿಂತ ಮೊದಲು ಬರುವ ಸಕಲ ರೋಗ ರಾಜನೆನಿಸಿದ ಜ್ವರಕ್ಕೆ ಮೊದಲು ಔಷಧವನ್ನು ಮಾಡಬೇಕು. ಯಾರಿಗಾದರೂ ಜ್ವರ ಬಂದರೆ ಅವರಿಗೆ ಅನ್ನವನ್ನು ಕೊಡಬಾರದು. ಅವರು ಲಂಘನ (ಉಪವಾಸ) ದಿಂದಿರಬೇಕು. ಆ ರೀತಿ ಲಂಘನ ಮಾಡುತ್ತಿರುವ ರೋಗಿಗೆ ಅರಳುಗಂಜಿ (ಪಾಯಸ) ಮಾಡಿ ಅದಕ್ಕೆ ಶುಂಠಿಯನ್ನು ತೇದು ಬೆರಸಿ ಅದನ್ನು ಆಹಾರವಾಗಿ ಕೊಡಬೇಕು.

೩. ಜ್ವರ ಬಂದಾಗ ವಿಶೇಷವಾಗಿ ಬಾಯಾರಿಕೆಯಾಗುವುದುಂಟು. ಹಾಗೆ ಬಾಯಾರಿಕೆಯಾದಾಗ ಭದ್ರಮುಸ್ತೆ ಅಥವಾ ತುಂಗಮುಸ್ತೆ ನಪ್ಪು, ಪರಪಾಷ್ಟಕ, ಲಾಮಂಚ, ಒಣಶುಂಠಿಗಳನ್ನು ಜಜ್ಜಿ ನೀರಿಗೆ ಹಾಕಿ ಚೆನ್ನಾಗಿ ಕಾಯಿಸಿ ಆ ಕಾದಾರಿದ ನೀರನ್ನು ಕೊಟ್ಟರೆ ಬಾಯಾರಿಕೆ ಶಮನವಾಗುವುದು. (ಷಡಂಗನಾಕ್ವಾಥವೆಂದು ಇದಕ್ಕೆ ಹೆಸರು.)

೪. ಜ್ವರ ಬಂದು ಆರು ದಿವಸ ಕಳೆದಮೇಲೆ ಕಹಿಪಡವಲದ ರಸವನ್ನು ಎಣ್ಣೆಗೆ ಬೆರಸಿ ಕುಡಿಸಿದರೆ, ಅಜೀರ್ಣದೋಷವೇನಾದರೂ ಇದ್ದರೆ ಗುಣವಾಗುತ್ತದೆ. ಆ ಬಳಿಕ ಭೇದಿಯಾಗುವಂತೆ ಔಷಧಿಯನ್ನು ಕೊಡಬೇಕು.

**ಜೀರ್ಣಷಷ್ಟಿಕನೀವಾರ ರಕ್ತಶಾಲಿಪ್ರಮೋದಕಾಃ ।**
**ತದ್ವಿಧಾಶ್ಚತುರಃ ಶ್ರೇಷ್ಠಾಃ ಯವಾನಾಂ ವಿಕೃತಿಸ್ತಥಾ ॥ ೫ ॥**

**ಮುದ್ಗಾ ಮಸೂರಾಶ್ಚಣಕಾಃ ಕುಲುತ್ಥಾಃ ಸಮುಕುಂಠಕಾಃ ॥**
**ಆಢಕೀ ಚ ಫಲಂ ಮೂಲೇ ಯೂಷಾರ್ಥಂ ಜ್ವರಿಣಾಂ ಹಿತಂ ॥ ೬ ॥**

**ಕೃಷ್ಣಶುಕ್ಲಕವಂತೀರ್ಕತಿತ್ತಿರೈಣ ಕಪಿಂಜಲಾಃ ।**
**ಲಾವಾದ್ಯಾ ಜಾಂಗಲಶ್ರೇಷ್ಠಾ ಜ್ವರಿಣಾಂ ತದ್ವಿಧಾಶ್ಚಯೇ ॥ ೭ ॥**

**ಪಟೋಲಂ ಸಫಲಂ ನಿಮ್ಬಂ ಕರ್ಕೋಟಕಕಟಿಲ್ಲಕಂ ।**
**ಶಾಕಂ ಪರ್ಪಟಕಂ ಚಾದ್ಯಾದಮ್ಲಾರ್ಥೇ ದಾಡಿಮಂ ಹಿತಂ ॥ ೮ ॥**

---

೫. ಜ್ವರವು ನಿಂತು ವಾಸಿಯಾಗುವ ತನಕ ಚೆನ್ನಾಗಿ ಜೀರ್ಣವಾಗುವಂತಹ (ಸುಲಭವಾಗಿ ಜೀರ್ಣವಾಗುವ) ಆಹಾರವನ್ನು ಕೊಡಬೇಕು. ಅವಾವುವೆಂದರೆ :— ಹಳೇ ಅಕ್ಕಿಯ ಅನ್ನ, ಜವೇಗೋಧಿಯ ಅನ್ನ, ಕೆಂಪುಭತ್ತದ(ಕೆಂಬೂತಿ)ಅಕ್ಕಿಯನ್ನು ಒಡೆದು ಮಾಡಿದ (ಉಸಿರಿನಲ್ಲಿ ಬೆಂದ) ಕಡುಬು, ಅಥವಾ ದೋಸೆ, ಉಪ್ಪಿಟ್ಟು, ರೊಟ್ಟಿಯೆಂಬ ನಾಲ್ಕು ವಿಧದ ಅಕ್ಕಿಯ ತಿಂಡಿಗಳನ್ನು ಕೊಡಬಹುದು. ಇದರಲ್ಲಿ ಯಾವುದು ಸೇರಿದರೂ, ಅದನ್ನು ಮಾಡಿಸಿಕೊಂಡು ರೋಗಿಯು ಹೊಟ್ಟೆಗೆ ಆಧಾರ ವಾಗಿರುವಂತೆ ಹೇಗಾದರೂ ಸ್ವಲ್ಪ ಸೇರಿಸಿಕೊಂಡು ತಿನ್ನಬೇಕು.

೬. ಹೆಸರು, ಚಾಣಂಗಿಬೇಳೆ, ದಪ್ಪಕಡಲೆ, ಹುರುಳಿ, ತೊಗರಿ ಇವುಗಳ ಕಾಳುಗಳನ್ನು ನೀರಿನಲ್ಲಿ ಬೇಯಿಸಿ ಅದರ ಕಟ್ಟನ್ನು (ಅಥವಾ ಇವುಗಳ ಧಾನ್ಯದ ಕಟ್ಟನ್ನು) ಕುಡಿದರೆ ಜ್ವರ ಬಂದವರಿಗೆ ಹಿತವಾಗಿರುತ್ತದೆ.

೭. ಜ್ವರ ಬಂದ ಜನರಿಗೆ ತಿತ್ತಿರಿ-ಜಿಂಕೆ-ಕಪಿಂಜಲ-ಲಾವನಹಕ್ಕಿಗಳ ಮಾಂಸ ವನ್ನು ಬೇಯಿಸಿ ಅದರ ರಸವನ್ನು (ಕಟ್ಟನ್ನು) ಕುಡಿದರೆ ಹಿತಕರವು.

೮. ಬಾಯಿ ಕೆಟ್ಟುಹೋಗಿದ್ದರೆ ಪಡವಲಕಾಯಿ - ಪರಪಾಷ್ಟಕ-ಬಿಲ್ವಪತ್ರೆ- ಹಾಗಲಕಾಯಿಗಳನ್ನು ಪಲ್ಯಮಾಡಿ ತಿಂದರೆ ಬಾಯಿ ಸ್ವಚ್ಛವಾಗುತ್ತದೆ. ನಾಲಿಗೆ ಕೆಟ್ಟುಹೋಗಿದ್ದರೆ ಹುಳಿದಾಳಿಂಬೇಹಣ್ಣನ್ನು ತಿಂದರೆ ನಾಲಿಗೆ ಸ್ವಚ್ಛವಾಗುತ್ತದೆ.

**ಅಯೋಗೇ ವಮನಂ ಶಸ್ತಮೂರ್ಧ್ವಗೇ ಚ ವಿರೇಚನಂ ।**
**ರಕ್ತಪಿತ್ತೇ ತಥಾ ಪಾನೇ ಷಡಂಗಂ ಶುಂಠಿವರ್ಜಿತಂ ॥ ೯ ॥**

**ಲಾಜಾ ಸಿಂಚತಿ ಕಾಮಂ ತು ಯವಗೋಧೂಮಶಾಲಯಃ ।**
**ಮಸೂರಮುದ್ಗಚಣಕಾಃ ಖಂಡಿತಾಃ ಸಮುಕುಷ್ಟಿಕಾಃ ॥ ೧೦ ॥**

**ಹೃದ್ಯಾ ಗೋಧೂಮಿಕಾ ಭಕ್ಷ್ಯಾ ಘೃತಕ್ಷೀರೋಪಸಾಧಿತಾಃ ।**
**ಸಕ್ಷೌದ್ರಶಕ್ರರೋಪೇತಾಸ್ತಥಾ ವೃಕ್ಷರಸೋ ಹಿತಃ ॥ ೧೧ ॥**

**ಅತೀಸಾರೇ ಪುರಾಣಾನಾಂ ಶಾಲೀನಾಂ ಭಕ್ಷಣಂ ಹಿತಂ ।**
**ಅನಭಿಷ್ಯಂದಿ ವಾ ಚಾನ್ಯದ್ರೌದ್ರವತ್ಸಕ ಸಂಯುತಂ ॥ ೧೨ ॥**

---

೯. ವಾಯುವು ಅಧೋಮುಖವಾಗಿದ್ದರೆ ವಮನಕ್ಕೂ, ಊರ್ಧ್ವಮುಖವಾಗಿದ್ದರೆ ಭೇದಿಗೂ ಕೊಡಬೇಕು. ರಕ್ತಪಿತ್ತರೋಗದಲ್ಲಿ (ಮೂಗಿನಲ್ಲಿ ರಕ್ತಬೀಳುತ್ತಿದ್ದಾಗ) ಪಾನಾರ್ಥವಾಗಿ ಶುಂಠಿಯನ್ನು ಸೇರಿಸದೆ ಷಡಂಗನಾಕ್ವಾಥವನ್ನು ಕೊಡಬೇಕು. (ಇತಿ ಶ್ಲೋಕನಾಡಿ.)

೧೦. ಅರಳು ಕಾಮವನ್ನು ಅಡಗಿಸುತ್ತದೆ. ಯವಧಾನ್ಯ-ಗೋಧಿ-ಹಳೇ ಧಾನ್ಯಗಳ ಅನ್ನವೂ, ತೊಗರೀಬೇಳೆ-ಹೆಸರು-ಕಡಲೆಗಳ ಬೇಳೆಯ ಸಾರುಗಳೂ ಪುಷ್ಟಿಕರವಾದ ಆಹಾರಗಳು.

೧೧. ಗೋಧಿರೊಟ್ಟಿ, ಗೋಧಿಸಜ್ಜಿಗೆ ಇವುಗಳನ್ನು ತುಪ್ಪದಿಂದ ಮಾಡಿ ತಿನ್ನಬಹುದು. ಹಾಲನ್ನು ಚೆನ್ನಾಗಿ ಕಾಯಿಸಿ, ಅದಕ್ಕೆ ಸ್ವಲ್ಪ ತುಪ್ಪವನ್ನೂ, ಜೇನುತುಪ್ಪ, ಸಕ್ಕರೆಗಳನ್ನೂ, ಆಡುಸೋಗೆಸಪ್ಪಿನ ರಸವನ್ನೂ ಬೆರಸಿ ಕುಡಿಸುವುದು ಒಳ್ಳೆಯದು. ಈ ಔಷಧವು ಹಳೆಯ ಅತಿಸಾರ ಶಮನಕ್ಕೆ ಉಪಯುಕ್ತವಾದುದು.

೧೨. ಅತಿಸಾರ (ಭೇದಿಯಾಗುವ) ಸಮಯದಲ್ಲಿ ಹಳೇ ಅಕ್ಕಿ ಅನ್ನವನ್ನು ಉಣ್ಣಬೇಕು. ಅಥವಾ ಬಜೆಯನ್ನೂ, ಕೊಡಸಿಗೆ ಕಷಾಯವನ್ನೂ ಮಾಡಿ ಕುಡಿಸಿದರೆ ಅತಿಸಾರವು ಶಮನವಾಗುವುದು. ರೋಗವು ಅಭಿಷ್ಯಂದ (ವ್ಯಾಪನೆ) ವಾಗುವುದಿಲ್ಲ.

**ಮಾರುತಾನಾಂ ಜಯೇ ಯತ್ನಃ ಕಾರ್ಯೋ ಗುಲ್ಮೇಷು ಸರ್ವಥಾ ।**
**ವಾಟ್ಯಕ್ಷೀರೇಣ ಚಾಶ್ನೀಯಾದ್ವಸ್ತ್ರಕಂ ಘೃತಸಾಧಿತಂ ॥ ೧೩ ॥**

**ಕುಕ್ಕುಟಾ ಬರ್ಹಿಣಃ ಶ್ರೇಷ್ಠಾಸ್ತಿಕ್ತಾ ಗೋಧೂಮಶಾಲಯಃ ।**
**ಹಿತಾ ಜಠರಿಣಾಂ ಭೋಜ್ಯೇ ಯವಗೋಧೂಮಶಾಲಯಃ ॥ ೧೪ ॥**

**ಮುದ್ಗಾಃ ಕುಲತ್ಥಾಃ ಕೌಲಾನಿ ಜಾಂಗಲಾ ಮೃಗಪಕ್ಷಿಣಃ ।**
**ಪಟೋಲನಿಂಬಧಾನ್ಯಾಂಬುಶುಷ್ಕಮೂಲಕಸೈಂಧವೈಃ ॥ ೧೫ ॥**

**ಮಾತುಲುಂಗರಸಾಜಾತಿಹಿಂಗುವೃಕ್ಷಾಮ್ಲವೇತಸೈಃ ।**
**ಆಹಾರಂ ಜಠರೇ ಯುಕ್ತ್ಯಾ ಯಥಾದೋಷಂ ಪ್ರಕಲ್ಪಯೇತ್ ॥ ೧೬ ॥**

---

೧೩. ಗುಲ್ಮವಾಯುರೋಗವಿದ್ದ ಸಂದರ್ಭದಲ್ಲಿ ವಾಯು ಜೀರ್ಣಿಸುವುದಕ್ಕಾಗಿ ಪ್ರಯತ್ನಪಡಬೇಕು. ಅದಕ್ಕೆ ಚೌಳುಪ್ಪನ್ನು ತುಪ್ಪ, ಆಲದಹಾಲುಗಳಿಗೆ ಬೆರಸಿ, ಕೊಡಸಿಗೆ ಚೂರ್ಣದೊಡನೆ ಅದನ್ನು ಕಲಸಿ ತಿನ್ನಿಸಬೇಕು.

೧೪. ಹೊಟ್ಟೆನೋವು ಬಂದಾಗ ಕೋಳೀಮಾಂಸ, ನವಿಲಿನ ಮಾಂಸಗಳನ್ನಾಗಲೀ ರಸವನ್ನಾಗಲಿ ಉಪಯೋಗಿಸಬೇಕು. ಅಥವಾ ಗೋಧಿ ಅನ್ನ ಅಥವಾ ಹಳೇ ಅಕ್ಕಿ ಅನ್ನವನ್ನು ತಿನ್ನಬೇಕು.

೧೫. ಮತ್ತು ಹೊಟ್ಟೆನೋವಿನ ಸ್ವರೂಪಕ್ಕೆ ತಕ್ಕಹಾಗೆ ಅದರ ದೋಷವೆಂತಿರುವುದೋ ಕಂಡುಹಿಡಿದು ಔಷಧಕೊಡಬೇಕು. ಅವರ ಆಹಾರಾರ್ಥವಾಗಿ ವನ್ಯಮೃಗಪಕ್ಷಿಗಳ ಮಾಂಸವನ್ನಾಗಲೀ, ಹೆಸರು-ಕಡಲೆಗಳ ಕಟ್ಟುಗಳನ್ನಾಗಲೀ, ಪಡವಲಕಾಯಿ-ಬೇವಿನಸಪ್ಪು-ಕೊತ್ತಂಬರಿ-ಮುಡಿವಾಳ- ಒಣಗಿದಮೂಲಂಗಿ - ಸೈಂಧವಲವಣಗಳನ್ನು ಸಹ ಬೆರಸಿ ಕೊಡಬೇಕು.

೧೬. ಮಾದಳದಹಣ್ಣಿನ ರಸ, ಜಾಯಿಕಾಯಿ, ಇಂಗು, ಓಟೆಹುಳಿಗಳನ್ನು ಯುಕ್ತಿಯಿಂದ ದೋಷಾ (ರೋಗಾ) ನುಸಾರವಾಗಿ ಹೊಟ್ಟೆಗೆ ಸೇರಿಸಬೇಕು.

ಟಿಪ್ಪಣಿ :—ವೈದ್ಯಶಾಸ್ತ್ರದಲ್ಲಿ ಮಾಂಸವನ್ನೂ, ಮಾಂಸರಸವನ್ನೂ ಅಷ್ಟಾಂಗಹೃದಯದಲ್ಲಿ ಶಸ್ತ್ರಶಲ್ಯಾದಿಚಿಕಿತ್ಸೆಗಳನ್ನೂ ಹೇಳಿರುತ್ತಾರಾದರೂ ಅಶೋಕಚಕ್ರವರ್ತಿಯ ಕಾಲದಲ್ಲಿ ಈ ಮಾಂಸದ ಔಷಧಗಳನ್ನೂ ಶಸ್ತ್ರಚಿಕಿತ್ಸೆಗಳನ್ನೂ ನಿಲ್ಲಿಸಿದಂತೆ ತಿಳಿದುಬರುತ್ತದೆ.

**ಕುಷ್ಠಿನಾಂ ಚ ತಥಾ ಶಸ್ತಂ ಪಾನಾರ್ಥೇ ಖದಿರೋದಕಂ ।**
**ಮಸೂರಮುದ್ಗಾ ಯೂಷಾರ್ಥೇ ಭೋಜ್ಯೇ ಜೀರ್ಣಾಶ್ಚ ಶಾಲಯಃ ॥ ೧೭ ॥**

**ನಿಂಬಪರ್ಪಟಕೌ ಶಾಕೌ ಛಾಗಲಾನಾಂ ತಥಾ ರಸಃ ।**
**ವಿಡಂಗಂ ಮರಿಚಂ ಶುಂಠೀ ಕುಷ್ಠಂ ರೋಧ್ರಂ ಸಸರ್ಜಕಂ ॥ ೧೮ ॥**

**ಮನಃ ಶಿಲೈಃ ಕೃತೋ ಲೇಪಃ ಕುಷ್ಠಹಾ ಮೂತ್ರಪೇಷಿತಃ ।**
**ಅಪೂಪಸಕ್ತುಕುಲ್ಮಾಷವಾಜ್ಯಾದ್ಯಾ ಮೇಹಿನಾಂ ಹಿತಾಃ ॥ ೧೯ ॥**

**ಯವಾನ್ನವಿಕೃತಿರ್ಮುದ್ಗಾಃ ಕುಲತ್ಥಾ ಜೀರ್ಣಶಾಲಯಃ ।**
**ತಿಕ್ತರೂಕ್ಷಾಣಿ ಶಾಕಾನಿ ತಿಕ್ತಾನಿ ಹರಿತಾನಿ ಚ ॥ ೨೦ ॥**

**ತಿಲಾನಿ ತಿಲಶಿಗ್ರುರ್ವಾ ಬಿಭೀತೆಂಗದಜಾನಿ ತು ।**
**ಅನಭಿಷ್ಯಂದಿ ಯಚ್ಚಾನ್ಯದ್ಭೋಜನೇ ತತ್ಪ್ರಶಸ್ಯತೆ ॥ ೨೧ ॥**

---

೧೭. ಕುಷ್ಠರೋಗವು ಪ್ರಾಪ್ತವಾದಾಗ ಕುಡಿಯುವುದಕ್ಕೆ ಕಗ್ಗಲಿಚಕ್ಕೆಯ ಕಷಾಯವನ್ನು ಉಪಯೋಗಿಸಬೇಕು. ಸುಲಭವಾಗಿ ಜೀರ್ಣವಾಗುವಂತಹ ಹಳೇ ಅಕ್ಕಿಯನ್ನು ಆಹಾರಕ್ಕಾಗಿ ಉಪಯೋಗಿಸಬೇಕು. ಹೆಸರು-ತೊಗರೀಸಾರುಗಳ ಕಟ್ಟುಗಳನ್ನು ಸಾರಿನ ಬದಲಾಗಿ ಉಪಯೋಗಿಸಬೇಕು.

೧೮-೧೯. ಹಸುವಿನ ಗಂಜಲದಲ್ಲಿ ಬೇವಿನಸಪ್ಪು-ಪರಪಾಷ್ಟಕ-ಪಾದರಸ-ವಾಯುವಿಳಂಗ-ಮೆಣಸು-ಶುಂಠಿ-ಚಂಗಲಕೋಷ್ಟ-ಲೋಧ್ರ-ರಾಳ- ಮಣಿಶಿಲೆಗಳನ್ನು ಹಾಕಿ ಚೆನ್ನಾಗಿ ಅರೆದು ಲೇಪನಮಾಡಿದರೆ ಕುಷ್ಠರೋಗವು ಪರಿಹಾರವಾಗುವುದು. ಮೇಹರೋಗಿಗಳಿಗೆ ಅಕ್ಕಿಹಿಟ್ಟಿನ ದೋಸೆ, ಹಲಸಂದೆ ದೋಸೆಗಳು ಹಿತವಾದ ಆಹಾರಗಳು.

೨೦-೨೧. ಯವಾನ್ನವೂ-ಅದರ ವಿಕೃತಿಗಳೂ (ಉಪ್ಪಿಟ್ಟು, ದೋಸೆ ಮುಂತಾದುವು) ಹೆಸರು, ಹಳೇ ಅಕ್ಕಿ, ಕಾಯಿಪಲ್ಯಗಳು (ಶಾಕವರ್ಗಗಳು) ಎಳ್ಳು, ನುಗ್ಗೆಕಾಯಿ, ನುಗ್ಗೆಸಪ್ಪು, ಗೇರು, ಇಂಗಳದಹಣ್ಣೇ ಮುಂತಾದುವುಗಳು, ಕುಷ್ಠ ಮತ್ತು ಮೇಹರೋಗಿಗಳ ಆಹಾರಕ್ಕೆ ಅನುಕೂಲವಾದುವು. ಇದನ್ನು ಉಪಯೋಗಿಸಿದರೆ ಈ ರೋಗಗಳು ವ್ಯಾಪಿಸುವುದಿಲ್ಲ. (ಈ ಪದಾರ್ಥಗಳ ಪ್ರಯೋಗವನ್ನು ವೈದ್ಯರನ್ನೇ ಕೇಳಿ ಮಾಡಿಸಿ ಉಪಯೋಗಿಸಬೇಕು.)

ಮುದ್ಗಾಃ ಸಯುವಗೋಧೂಮಾ ಧಾನ್ಯಂ ವರ್ಷಸ್ಥಿತಂ ಚ ಯತ್ ।
ಜಾಂಗಾಲಸ್ವರಸಃ ಪ್ರೋಕ್ತೋ ಭೋಜನೆ ರಾಜಯಕ್ಷ್ಮಿಣಾಂ ॥ ೨೨ ॥

ಕುಲತ್ಥಮುದ್ಗಕಾಲಾಬುಶುಷ್ಕಮೂಲಕಜಾಂಗಲೈಃ ಃ
ಯೂಷೈರ್ವಾ ವಾಷ್ಕಿರೈಃ ಸ್ನಿಗ್ಧೈರ್ದಧಿದಾಡಿಮಸಾಧಿತೈಃ ॥ ೨೩ ॥

ಮಾತುಲುಂಗರಸಕ್ಷೌದ್ರದ್ರಾಕ್ಷಾವ್ಯೋಷಾದಿಸಂಸ್ಕೃತೈಃ ।
ಯವಗೋಧೂಮ ಶಾಲ್ಯನ್ನೈರ್ಭೋಜಯೇದ್ವಾವಸಂ ಪರಂ ॥ ೨೪ ॥

ದಶಮೂಲಫಲಾರಾಸ್ನಾಕುಲತ್ಥೈರುಪಸಾಧಿತೈಃ ।
ಪಯೋವ್ಯೂಷರಸಕ್ವಾಥಃ ಶ್ವಾಸಹಿಕ್ಕಾನಿವಾರಣಃ ॥ ೨೫ ॥

---

೨೨. ಕ್ಷಯರೋಗವಿದ್ದವರಿಗೆ ಹೆಸರು, ಯವಧಾನ್ಯ ಗೋಧಿ, ಹಳೇ ಕೊತ್ತಂಬರಿ, ಕಾಡು ಪ್ರಾಣಿಗಳ ಮಾಂಸರಸವನ್ನು ಆಹಾರಾರ್ಥವಾಗಿ ಉಪಯೋಗಿಸುವುದರಿಂದ ಆ ರೋಗವು ತಗ್ಗುತ್ತಾ ಬರುವುದು.

೨೩. ರಾಜಯಕ್ಷ್ಮ ಅಥವಾ ಕ್ಷಯರೋಗದವರಿಗೆ ಪಥ್ಯವಾಗಿ ಉಪಯೋಗಿಸುವುದಕ್ಕೆ ಅಹಾರಪದಾರ್ಥಗಳನ್ನಿಲ್ಲಿ ವಿವರಿಸಲಾಗಿದೆ. ಹುರಳಿ, ಹೆಸರು. ಸೋರೇಕಾಯಿ, ಒಣಗಿದ ಮೂಲಂಗಿ, ಪ್ರಾಣಿಗಳ (ಹಕ್ಕಿಗಳ) ಮಾಂಸದ ಸಾರ, ಮೇಲ್ಕಂಡ ಧಾನ್ಯದ ಕಟ್ಟುಗಳು ಮೊಸರು, ದಾಳಿಂಬೆ ಹಣ್ಣು, ಹಾಲು, ಮೆಣಸು, ಶುಂಠಿ, ಹಿಪ್ಪಲಿಗಳ ಕಷಾಯ, ಮಾದಳದ ಹಣ್ಣು, ಅದರ ರಸ ಸಹ.

೨೪. ಜೇನುತುಪ್ಪ, ದ್ರಾಕ್ಷಿಹಣ್ಣಿನ ರಸ (ಇವುಗಳನ್ನು ತ್ರಿಕಟು ಕಷಾಯಕ್ಕೆ ಕದರಿ ಕುಡಿಸಬೇಕು.) ಹಳೇಭತ್ತ, ಗೋಧಿ, ಶಾಲ್ಯಾನ್ನ, ಯವಧಾನ್ಯಾದಿಗಳು ಪಥ್ಯಕಾರಿಗಳು.

೨೫. ದಶಮೂಲಾರಿಷ್ಠ, ರಾಸ್ನೆ, ಹುರಳಿ ಕಟ್ಟು, ವ್ಯೂಷರಸದ ಕಷಾಯ, (ತ್ರಿಕಟು) ಹಾಲು ಇವುಗಳು ಉಬ್ಬಸ ಮತ್ತು ಬಿಕ್ಕಳಿಕೆ ರೋಗಗಳನ್ನು ಗುಣಪಡಿಸುವುವು.

**ಶುಷ್ಕಮೂಲಕಕೌಲತ್ಥಮೌದ್ಗಜಾಂಗಲಜೈ ರಸೈಃ ।**
**ಯವಗೋಧೂಮಶಾಲ್ಯನ್ನಂ ಜೀರ್ಣಾಂಶೋಽಶಂ ಸಮಾಚರೇತ್ ॥ ೨೬ ॥**

**ಜೀರ್ಣಂ ಪಕ್ವರಸಂ ಶೀಧುಮಾರ್ದ್ವೀಕಾಂಸ್ತ್ವಥ ವಾ ಪಿಬೇತ್।**
**ಶೋಥವಾನ್ಸಗುಡಾಂ ಪಥ್ಯಾಂ ಖಾದೇದ್ವಾ ಗುಡಲಾವನಂ ॥ ೨೭ ॥**

**ಚಿತ್ರಂ ವಿಚಿತ್ರಕಂ ಚೋಭೌ ಗ್ರಹಣೀರೋಗನಾಶನೌ ।**
**ಪುರಾಣಯವಗೋಧೂಮಶಾಲಯೋಃ ಜಾಂಗಲಂ ರಸಂ ॥ ೨೮ ॥**

**ಮುದ್ಗಾಮಲಕ ಖರ್ಜೂರಮೃದ್ವೀಕಾಬದರಾಣಿ ಚ ।**
**ಮಧುಸರ್ಪಿಃಪಯಸ್ತಕ್ರಂ ನಿಂಬಪರ್ಪಟಿಕೌ ವೃಷಂ ॥ ೨೯ ॥**

---

೨೬. ಈ ರೋಗಗಳಿದ್ದಾಗ ಸುಲಭವಾಗಿ ಜೀರ್ಣವಾಗುವ ಈ ಕೆಳಗೆ ಕಂಡ ಆಹಾರಗಳನ್ನೇ ಕೊಡಬೇಕು. ಒಣಗಿದ ಮೂಲಂಗಿ, ಹುರಳಿ ಕಟ್ಟು, ಹೆಸರು ಕಟ್ಟು ಹಕ್ಕಿಗಳ ಮಾಂಸದ ರಸ, ಯವ ಗೋಧೂಮ, ಶಾಲ್ಯಾನ್ನಾದಿಗಳು, ಸುಲಭವಾಗಿ ಜೀರ್ಣಿಸತಕ್ಕ ಆಹಾರಗಳು.

೨೭. ಶೋಥೆರೋಗವಿರುವವರಿಗೆ ದ್ರಾಕ್ಷೀಹಣ್ಣಿನ ರಸವನ್ನು ಕುಡಿಸಬೇಕು. ಅಳಲೆಕಾಯಿ, ಚೂರ್ಣಕ್ಕೆ ಬೆಲ್ಲವನ್ನು ಬೆರಸಿ ತಿನ್ನಬೇಕು. ಗಂಡಲಾವನವನ್ನು ಸೇವಿಸಿದರೂ ಒಳ್ಳೆಯದು.

೨೮. ಅತಿಸಾರ (ಗೃಹಿಣೀ) ರೋಗಕ್ಕೆ ಚಿತ್ರ (ಚಿತ್ರಮೂಲ) ವಿಚಿತ್ರಕ ಮೂಲಿಕೆಗಳನ್ನು ಉಪಯೋಗಿಸಬೇಕು. ಇದರಿಂದ ಗೃಹಿಣೀ ರೋಗ ನಿವಾರಣೆಯಾಗುವುದು. ಈ ರೋಗಕ್ಕೆ ಸುಲಭವಾಗಿ ಜೀರ್ಣವಾಗುವ ಪಥ್ಯಾಹಾರವೆಂದರೆ ಹಳೇ ಅಕ್ಕಿ ಅನ್ನ, ಗೋಧಿ, ಪಕ್ಷಿಗಳ ಮಾಂಸ ರಸಗಳು.

೨೯. ವಾಯುರೋಗಗಳಿಗೆ ಹೆಸರು, ನೆಲ್ಲಿಕಾಯಿ, ಖರ್ಜೂರ, ದ್ರಾಕ್ಷಿ, ಯಲಚಿಹಣ್ಣು, ಜೇನುತುಪ್ಪ, ತುಪ್ಪ, ಹಾಲು, ಮಜ್ಜಿಗೆ, ಬೇವಿನ ಸೊಪ್ಪು, ಪರಪಾಷ್ಟಕ, ಆಡುಸೋಗೆ, ಇವುಗಳು ಔಷಧವಾಗಿಯೂ ಆಹಾರವಾಗಿಯೂ ಉಪಯೋಗಿಸಲ್ಪಡುವ ಪದಾರ್ಥಗಳು.

ತಕ್ರವೃದ್ಧ್ಯಾನುಶಸ್ಯನ್ತೇ ಸತತಂ ವಾತರೋಗಿಣಾಂ ।
ಹೃದ್ರೋಗಿಣೇ ಪ್ರದಾತವ್ಯಂ ಪ್ರಯತ್ನೇನ ವಿರೇಚನಂ ॥ ೩೦ ॥

ಪಿಪ್ಪಲೀನಾಂ ಪ್ರಯೋಗಶ್ಚ ಪ್ರವೃತೇ ಧರ್ಮಿಣಸ್ತಥಾ ।
ಚಕಾರ ನಾಡೀ ಶೀಧೂನಿ ಯುಕ್ತಾ ಚ ಶಿಶಿರಾಂಭಸಾ ॥ ೩೧ ॥

ಯುಕ್ತಸೌವರ್ಚಲಾಜಾಕ್ಷಿಮಥ ಶಸ್ತಂ ಮದಾತ್ಯಯೆ ।
ಸಕ್ಷಾದ್ರಪಯಸಾ ಲಾಕ್ಷಾಂ ಪಿಬೇತ ಕ್ಷತವಾನ್ನರಃ ॥ ೩೨ ॥

ಕ್ಷಯಂ ಮಾಂಸರಸಾಹಾರೋ ವಹ್ನಿಸಂರಕ್ಷಣಾಜ್ಜಯೇತ್ ।
ಶಾಲಯೋ ಭೋಜನೇ ಶಕ್ತಾ ನೀವಾರಕಲಮಾದಯಃ ॥ ೩೩ ॥

ಯವಾನ್ನವಿಕೃತಿರ್ಮಾಸಂ ಶಾಕಂ ಸೌವರ್ಚಲಂ ಸುಧೀಃ ।
ಪಥ್ಯಂ ತಥೈವ ತಾಸಾಂ ಚ ಮಂಡಂ ತಕ್ರಂ ಚ ವಾರುಣೀ ॥ ೩೪ ॥

---

೩೦. ವಾತರೋಗಿಗಳು ವಿಶೇಷ ತಕ್ರವೃದ್ಧಿಯಿಂದ ಅನುಶಾಸನ (ಗುಣ) ಹೊಂದುತ್ತಾರೆ. ಎದೇನೋವಿ (ಹೃದ್ರೋಗಿ) ರುವವರಿಗೆ ವಿರೇಚನಕ್ಕೆ (ಭೇದಿಗೆ) ಔಷಧ ಕೊಡಬೇಕು.

೩೧. ಈ ರೀತಿ ಭೇದಿಗೆ ಔಷಧ ಕೊಟ್ಟ ಬಳಿಕ ಹಿಪ್ಪಲಿಯ ಚೂರ್ಣವನ್ನಾಗಲಿ ಕಷಾಯವನ್ನಾಗಲಿ ತಣ್ಣೀರಿಗೆ ಬೆರಸಿ ಕೊಟ್ಟರೆ ಎದೆನೋವು ಪರಿಹಾರವಾಗುವುದು.

೩೨. ಸೌವರ್ಚಲವಣವನ್ನೂ ಜೀರಿಗೆಪುಡಿಯನ್ನೂ ಬೆರಸಿ ಮದಾತ್ಯಯ (ಮೂರ್ಛೆ, ಹುಚ್ಚು ಇತ್ಯಾದಿ) ಗಳಲ್ಲಿ ತಿನ್ನಿಸಬೇಕು. ಎದೆಯೊಳಗೆ ಹುಣ್ಣು ಗಾಯಗಳಾಗಿದ್ದರೆ ಅರಗಿನ ಕಷಾಯಕ್ಕೆ ಜೇನುತುಪ್ಪ, ಹಾಲು ಇವುಗಳನ್ನು ಬೆರಸಿ ಕುಡಿದರೆ ಗಾಯ ಮಾಗುವುದು.

೩೩-೩೪. ಅಗ್ನಿಪಾಟವವುಂಟಾಗ (ಜೀರ್ಣಶಕ್ತಿಯಾಗ) ಬೇಕಾದರೆ ಮಾಂಸ ರಸವನ್ನು ಉಪಯೋಗಿಸಬೇಕಲ್ಲದೆ, ಹಳೇ ಭತ್ತದ ಅಕ್ಕಿಯ ಅನ್ನ, ಸಾಮೆ, ನವಣೆ ಅನ್ನಗಳನ್ನು ಉಪಯೋಗಿಸಬೇಕು. ಮಾಂಸ, ಶಾಕಾದಿಗಳಿಗೆ ಸೌವರ್ಚಲವಣವನ್ನು ಉಪಯೋಗಿಸಿ ತಿನ್ನಬೇಕು. ಮಜ್ಜಿಗೆ, ಮೊಸರು, ನೀರು, ವಾರುಣೀ ಇವುಗಳು ಪಾನಕ್ಕೆ ಹಿತವಾದವುಗಳು.

**ಮುಸ್ತಾಭ್ಯಾಸಸ್ತಥಾ ಲೇಪಃ ಚಿತ್ರಕೇಣ ಹರಿದ್ರಯಾ ।**
**ಯವಾನ್ನವಿಕೃತಿಃ ಶಾಲಿರ್ವಾಸ್ತುಕೀ ಚ ಸುವರ್ಚಲಂ ॥ ೩೫ ॥**

**ತ್ರಪುಸೀ ಚಾರುಗೋಧೂಮಾಃ ಕ್ಷೀರೇಕ್ಷುಘೃತಸಂಯುತಾಃ ।**
**ಮೂತ್ರಕೃಚ್ಛ್ರೇ ಚ ಶಸ್ತಾಃ ಸ್ಯುಃ ಪಾನೇ ಮಂಡಸುರಾದಯಃ ॥ ೩೬ ॥**

**ಲಾಜಾ ಸಕ್ತು ತಥಾ ಕ್ಷೌದ್ರಂ ಶಾಲ್ಯಂ ಮಾಂಸಪರೂಷಕಂ ।**
**ವೃಂತಾಕಾಲಾಂಬುಶಿಖಿನಶ್ಛರ್ದಿಘ್ನಾಃ ಪಾನಕಾನಿ ಚ ॥ ೩೭ ॥**

**ಶಾಲ್ಯನ್ನಂ ತೋಯಪಯಸೀ ಕೇವಲೋಽಪ್ಯಶ್ರಿತೇಽಪಿ ವಾ ।**
**ತೃಷ್ಣಾಘ್ನಾ ಮುಸ್ತಗುಡಯೋರ್ಗುಲಿಕಾ ವಾ ಮುಖೆ ಧೃತಾ ॥ ೩೮ ॥**

---

೩೫. ಎದೆಯೊಳಗಿನ ಹುಣ್ಣು ವಾಸಿಯಾಗಬೇಕಾದರೆ ಹೊರಗಡೆ ಲೇಪನ ಮಾಡಬೇಕಾದ್ದು. ಕೊನ್ನಾರಿಗಡ್ಡೆ, ಚಿತ್ರಮೂಲ, ಅರಿಶಿನಗಳನ್ನು ಅರೆದು ಅದನ್ನು ಲೇಪನಮಾಡಬೇಕು. ಪಥ್ಯವೇನೆಂದರೆ:— ಹಳೇ ಅಕ್ಕಿ ಅನ್ನ, ಮಾಂಸರಸ, ಚಕ್ಕೋತನ ಸಪ್ಪಿನ ಪಲ್ಯ, ಸೌವರ್ಚಲವಣ.

೩೬. ತಪಸಿಸಪ್ಪಿನ ರಸ, ಗೋಧಿಹಿಟ್ಟು, ಅಥವಾ ರವೆಯ ಪಾಯಸ, ಹಾಲು, ಕಬ್ಬಿನರಸಗಳಿಗೆ ಮೊಸರು ನೀರನ್ನು ಬೆರಸಿ ಕುಡಿಯುತ್ತ ಬಂದರೆ ಮೂತ್ರಕೃಚ್ಛ್ರವು ಪರಿಹಾರವಾಗುವುದು.

೩೭. ವಾಂತಿಯು ನಿಲ್ಲಬೇಕಾದರೆ, ಅರಳು, ಸಕ್ಕರೆ, ಜೇನುತುಪ್ಪ, ಶಾಲ್ಯನ್ನ, ಮಾಂಸರಸ, ಬದನೆ, ಸೋರೆಬೇರುಗಳ ಮತ್ತು ನವಿಲುಗರಿಯ ಕರುಕು ಇವುಗಳನ್ನು ಬೆರಸಿ ಪಾನಕಮಾಡಿಕೊಟ್ಟರೆ ವಾಂತಿ ನಿಲ್ಲುವುದು.

೩೮. ದಾಹ (ಬಾಯಾರಿಕೆ) ರೋಗಕ್ಕೆ ಶಾಲ್ಯನ್ನ, ಹಾಲು, ನೀರುಗಳನ್ನು ಬೆರಸಿ ಕಾಯಿಸಿ ಕುಡಿಯುವುದೂ, ಕೊನ್ನಾರಿಗಡ್ಡೆಯ ಚೂರ್ಣ, ಬೆಲ್ಲವನ್ನೂ ಬೆರಸಿ ಗುಳಿಗೆಮಾಡಿ ತಿನ್ನುವುದೂ ಸಹ ದಾಹೋಪಶಮನ ಮಾರ್ಗಗಳು.

ಯವಾನ್ನವಿಕೃತಿಯೂರ್ಷಂ ಶುಷ್ಕಮೂಲಕಜಂ ತಥಾ ।
ಶಾಕಂ ಪಟೋಲವೇತ್ರಾಗ್ರಮೂರುಸ್ತಂಭವಿನಾಶನಂ ॥ ೩೯ ॥

ಮುಕ್ತಾಢಕ ಮಸೂರಾಣಾಮತೀರೈರ್ಜಾಂಗಲೈಸ್ತಥಾ ।
ಸಸೈಂಧವಘೃತದ್ರಾಕ್ಷಾ ಶುಂಠ್ಯಾಮಲಕಕೋಲಜೈಃ ॥ ೪೦ ॥

ಯೂಷೈಃ ಪುರಾಣಗೋಧೂಮಯವಶಾಲ್ಯನ್ನಮಭ್ಯಸೇತ್ ।
ವಿಸರ್ಪಂ ಸಸಿತಾಕ್ಷೌದ್ರ ಮೃದ್ವೀಕಾದಾಡಿಮೋದರಃ ॥ ೪೧ ॥

ರಕ್ತಷಷ್ಟಿಕಗೋಧೂಮ ಯವಮುದ್ಗಾದಿವಲ್ಲಘು ।
ಕಾಚಮಾಚೀ ಚ ವೇತ್ರಾಗ್ರಂ ವಾಸ್ತುಕಂ ಚ ಸುವರ್ಚಲಾ ॥ ೪೨ ॥

ವಾತಶೋಷಿತನಾಶಾಯ ತೋಯಂ ಶಸ್ತಂ ಸಿತಾ ಮಧು ।
ನಾಸಾರೋಗೇ ಚ ಸಹಿತಂ ಘೃತದೂರ್ವಾಪ್ರಸಾಧಿತಂ ॥ ೪೩ ॥

---

೩೯. ಮಂಡಿನೋವು ಅಥವಾ ವಾಯುವಿನಿಂದ ಮಂಡಿ ಹಿಡಿದುಕೊಂಡಿದ್ದರೆ ಒಣಗಿಸಿದ ಮೂಲಂಗಿಯನ್ನು ಚೆನ್ನಾಗಿ ಬೇಯಿಸಿ ಅದು ಕುದಿದು ಕಟ್ಟುಬಿಡುವುದಕ್ಕೆ ಮುಂಚೆ ಅದನ್ನು ಕೆಳಗಿಳಿಸಿಕೊಂಡು ಅದನ್ನು ಕುಡಿಯುವುದೂ, ಪಡವಲ, ಬೆತ್ತದ ಕುಡಿಗಳನ್ನೂ ಹಾಕಿ ನೀರಿಗೆ ಬೆರಸಿ ಆ ರೀತಿ ಕಾಯಿಸಿದ ಶಾಖದ ನೀರನ್ನು ಕುಡಿದರೆ ಮಂಡಿನೋವು ಹೋಗುವುದು. (ಇವು ಬಾಧಾ ನಿವಾರಣೆಯ ಅನುಪಾನಗಳು.)

೪೦-೪೩. ವಾತಶೋಣಿತ (ವಾತರಕ್ತ) ರೋಗದಲ್ಲಿ ಮುಕ್ತಾಢಕ, ಚಾಣಂಗಿ ಬೇಳೆ, ಕಾಡುಹಕ್ಕಿಗಳ ಮಾಂಸ, ಸೈಂಧವಲವಣ ಸಹಿತವಾದ ಘೃತ, ದ್ರಾಕ್ಷಿ, ಶುಂಠಿ, ನೆಲ್ಲಿಕಾಯಿ, ಯಲಚಿ, ಹಳೆ ಅಕ್ಕಿ ಅನ್ನ, ಗೋಧಿ, ಯವೆಧಾನ್ಯ, ಶಾಲ್ಯನ್ನಗಳನ್ನೂ, ಸಾರಿನ ಕಟ್ಟುಗಳನ್ನೂ ಉಪಯೋಗಿಸಬೇಕು. ವಿಸರ್ಪರೋಗದಲ್ಲಿ (ಇದೇ ವಾತ ರಕ್ತದಲ್ಲಿ) ಜೇನುತುಪ್ಪ, ಸಕ್ಕರೆ, ದ್ರಾಕ್ಷಿ, ದಾಳಿಂಬೆ ಹಣ್ಣು, ಕೆಂಬೂತಿ ಅಕ್ಕಿ ಅನ್ನ, ಗೋಧಿ, ಯವೆ ಹೆಸರು ಕಟ್ಟು, ಕಾಕಮಾಚಿ, (ಗಣಿಕೆ ಸಪ್ಪು) ಬೆತ್ತದ ಕುಡಿ, ಕಿಲಿ ಕೀರ ಸಪ್ಪು, ಸೌವರ್ಚಲವಣ, ಇವುಗಳ ನೀರನ್ನು ಕಾಯಿಸಿ ಅದಕ್ಕೆ ಸಕ್ಕರೆ, ಜೇನು ತುಪ್ಪ, ಹಾಕಿ ಕುಡಿದರೆ ಶಮನವಾಗುವುದು.

ಭೃಂಗರಾಜರಸೇ ಸಿದ್ಧೇ ತೈಲಂ ಧಾತ್ರೀರಸೋಽಪಿ ವಾ ।
ನ ಸ್ಯಾತ್ಸರ್ವಾಮಯೇಷ್ವಿಷ್ಟಂ ಮೂರ್ಧಜತ್ರೂರ್ಧ್ವವೇಷ್ವಥ ॥ ೪೪ ॥

ಶೀತತೋಯಾನ್ವಪತನಂ ತಿಲಾನಾಂ ರಾಮ ಭಕ್ಷಣಂ ।
ದ್ವಿಜದಾರ್ಢ್ಯಕರಂ ಪ್ರೋಕ್ತಂ ತಥಾ ಪುಷ್ಟಿಕರಂ ಶುಭಂ ॥ ೪೫ ॥

ಗಂಡೂಷಸ್ತಿಲತೈಲೇನ ದ್ವಿಜದಾರ್ಢ್ಯಕರಃ ಪರಃ ।
ವಿಡಂಗಚೂರ್ಣಂ ಗೋಮೂತ್ರಂ ಸರ್ವಕೃಮಿವಿನಾಶನಂ । ॥ ೪೬ ॥

ಧಾತ್ರೀಫಲಾನ್ಯಥಾಜ್ಯಂ ಚ ಶಿರೋಲೇಪನ ಮುತ್ತಮಂ ।
ಶಿರೋರೋಗವಿನಾಶಾಯ ಸ್ನಿಗ್ಧಶೀತಂ ಚ ಭೋಜನಂ ॥ ೪೭ ॥

---

೪೪. ಮೂಗು ನೋವು, ತಲೆನೋವು ಮುಂತಾದ ಮೂರ್ಧಜತ್ರೂರ್ಧ್ವವ ರೋಗಗಳು ಪ್ರಾಪ್ತವಾದಾಗ ಗರಿಕೆ ಸಪ್ಪಿನ ರಸ ಹಾಕಿ ಕಾಯಿಸಿದ ಘೃತ, ಗರಿಗದ ಸಪ್ಪು, ಎಣ್ಣೆ ಸೇರಿಸಿ ಕಾಯಿಸಿದ ತೈಲ, ಅಥವಾ ನೆಲ್ಲಿಕಾಯಿಯ ರಸದೊಡನೆ ಕಾಯಿಸಿದ ತೈಲ (ಭೃಂಗಾಮಲಕ ತೈಲ) ವು ಶ್ರೇಷ್ಠವಾದುದು. ಇದರ ಆಘ್ರಾಣ (ನಶ್ಯ) ದಿಂದ ಸರ್ವರೋಗವೂ ಶಮನವಾಗುವುದು.

೪೫. ಎಳ್ಳನ್ನು ಚೆನ್ನಾಗಿ ಅಗಿದು ತಿಂದು ತಣ್ಣೀರನ್ನು ಕುಡಿದರೆ ಹಲ್ಲುಗಳು ಗಟ್ಟಿಯಾಗುವುವಲ್ಲದೆ ಇದು ಪುಷ್ಟಿಪ್ರದ, ಶುಭಪ್ರದವಾದುದೆಂದೂ ಸಹ ಹೇಳಲ್ಪಟ್ಟಿದೆ

೪೬. ಹಲ್ಲುಗಳು ಗಟ್ಟಿಯಾಗಬೇಕಾದರೆ ಅಚ್ಚೆಳ್ಳೆಣ್ಣೆಯನ್ನು ಬಾಯಿಗೆ ತುಂಬಿ ಕೊಂಡು ಮುಕ್ಕಳಿಸುತ್ತಿರಬೇಕು. ಹುಳುಕು ಹಲ್ಲಾಗಿ ಹಲ್ಲುನೋವಾಗಿದ್ದರೆ ಗಂಜ ಳದಲ್ಲಿ ವಾಯುವಿಳಂಗದ ಪುಡಿಯನ್ನು ಅರೆದುಬೆರಸಿ ಹಲ್ಲಿಗೆ ಲೇಪಮಾಡಿದರೆ ನೋವು ಹೋಗುವುದು. ಕ್ರಿಮಿನಾಶವಾಗುವುದು.

೪೭. ತಲೆನೋವಿನ ಔಷಧಿ : ನೆಲ್ಲಿಕಾಯಿ ರಸಕ್ಕೆ ತುಪ್ಪವನ್ನು ಬೆರಸಿ ತಲೆಗೆ ತಿಕ್ಕುತ್ತಾ ಬರಬೇಕು. ರುಚಿಯಾಗಿಯೂ ತಂಪಾಗಿಯೂ ಇರುವ ಆಹಾರವನ್ನು ಸೇವಿಸಬೇಕು.

ತೈಲಂ ವಾ ವಸ್ತಿ ಮೂತ್ರಂ ವಾ ಕರ್ಣಪೂರಣಮುತ್ತಮಂ ।
ಕರ್ಣಶೂಲವಿನಾಶಾಯ ಶುದ್ಧಂ ತೈಲಂ ನಿಷೇಚಯೇತ್ ॥೪೮॥

ಗಿರಿಭೃಚ್ಚಂದನಂ ಮಾಲ್ಯಂ ಮಾಲತೀಕಾಲಿಕಾಸ್ತಥಾ ।
ಸಂಯೋಜ್ಯ ಯಾ ಕೃತಾ ವರ್ತಿಃ ಕ್ಷತಚಕ್ರಹರೀ ತು ಸಾ । ॥ ೪೯ ॥

ವ್ಯೋಷಂ ತ್ರಿಫಲಯಾ ಯುಕ್ತಂ ಸುರೂಕಂ ಚ ರಸಾಂಜನಂ ।
ಸರ್ವಾಕ್ಷಿರೋಗಶಮನಂ ತಥಾ ಚೈವ ರಸಾಂಜನಂ ॥ ೫೦ ॥

ಆಜ್ಯಭೃಷ್ಟಂ ಶಿಲಾಪಿಷ್ಟಂ ರೋಧ್ರಂ ಕಾಂಜಿಕಸೈಂಧವೈಃ ।
ಆಶ್ಚ್ಯೋತನವಿನಾಶಾಯ ಸರ್ವರೋಗಾಮಯೇಷು ಚ ॥ ೫೧ ॥

ಗಿರಿಭೃಚ್ಚಂದನೈರ್ಲೇಪೋ ಬಹಿರ್ಲೇಪಸ್ಯ ಶಸ್ಯತೇ ।
ನೇತ್ರಾಮಯವಿಘಾತಾರ್ಥಂ ತ್ರಿಫಲಾಂ ಶೀಲಯೇತ್ಸದಾ ॥ ೫೨ ॥

---

೪೮. ಕಿವಿನೋವು (ಕರ್ಣಶೂಲೆ) ವಾಸಿಯಾಗಬೇಕಾದರೆ ಅಚ್ಚಎಳ್ಳೆಣ್ಣೆಗೆ ಆಡಿನ ಮೂತ್ರವನ್ನು ಬೆರಸಿ ಕಿವಿಗಳ ರಂಧ್ರಕ್ಕೆ ಸೇಚನೆ ಮಾಡಬೇಕು.

೪೯. ಮೈಮೇಲಾಗುವ ಎಲ್ಲಾ ವಿಧವಾದ ಗಾಯಗಳಿಗೂ ಕಲ್ಲು ಹೂವು, ಶ್ರೀಗಂಧ, ಮಾಲ್ಯ, ಮಾಲತಿ, ಕಾಲಿಕಾದಿಗಳನ್ನು ಬೆರಸಿ ಅರೆದು ಅದರ ಬತ್ತಿಯನ್ನು ಗಾಯಕ್ಕೆ ಲೇಪಿಸಿದರೆ ಗಾಯಗಳು ಮಾಯುವುವು.

೫೦. ತ್ರಿಕಟು ತ್ರಿಫಲಗಳನ್ನು (ಇದರ ಅರ್ಥವನ್ನು ಹಿಂದೆ ಅನೇಕ ಸಾರಿ ಬರೆದಿದೆ.) ಹುಡಿಮಾಡಿ ಸುರೂಕವನ್ನು ಬೆರಸಿ ಅಂಜನಮಾಡಿ ಕಣ್ಣಿಗೆ ಹಚ್ಚಿದರೆ ಸಕಲ ವಿಧವಾದ ನೇತ್ರರೋಗಗಳೂ ಪರಿಹಾರವಾಗುವುವು.

೫೧. ಲೋಧ್ರವನ್ನು ಬಸಿದ ಗಂಜಿ ಸೈಂಧಲವಣದೊಡನೆ ಬೆರಸಿ ಅರೆದು ತುಪ್ಪದೊಡನೆ ಕಲಸಿ ಸೇವಿಸಿದರೆ ಸರ್ವರೋಗಕ್ಕೂ ಔಷಧವಾಗುವುದು.

೫೨. ಕಾವಿಯಕಲ್ಲು, ಗಂಧ, ಮಲ್ಲಿಹೂವು, ಮಾಲತೀ ಪುಷ್ಪದ ರಸಗಳನ್ನು ಅರೆದು ಕಣ್ಣಿನಮೇಲೆ ಲೇಪಿಸಿದರೆ ಕಣ್ಣಿನ ಊದಲು ತೆಗೆಯುವುದು. ಕಣ್ಣುನೋವು ವಾಸಿಯಾಗುವುದು. ಮತ್ತು ತ್ರಿಫಲಗಳನ್ನು ಅರೆದು ಲೇಪಿಸಿದರೂ ಒಳ್ಳೆಯದು.

**ರಾತ್ರೌ ತು ಮಧುಸರ್ಪಿರ್ಭ್ಯಾಂ ದೀರ್ಘಮಾಯುರ್ಜಿಜೀವಿಷುಃ ।**
**ಶತಾವರಿ ರಸೆ ಸಿದ್ಧೌ ವೃಷ್ಯೌ ಕ್ಷೀರಘೃತೌ ಸ್ಮೃತೌ ।** ॥ ೫೩ ॥

**ಕಲವಿಂಗಾನಿ ಮಾಷಾಶ್ಚ ವೃಷೌ ಕ್ಷೀರಂ ಘೃತಂ ತಥಾ ।**
**ಆಯುಷ್ಯಾ ತ್ರಿಫಲಾ ಚೈವ ಪೂರ್ವವನ್ಮಧುಕಾನ್ವಿತಾ** ॥ ೫೪ ॥

---

೫೩. ದೀರ್ಘಾಯುಷ್ಮಂತರಾಗಿಯೂ ಆರೋಗ್ಯಶಾಲಿಗಳಾಗಿಯೂ ದೃಢಕಾಯರಾಗಿಯೂ ಇರಬೇಕಾದರೆ ಪ್ರತಿದಿನವೂ ರಾತ್ರಿಹೊತ್ತು ತುಪ್ಪ ಮತ್ತು ಜೇನುತುಪ್ಪಗಳೊಡನೆ ಶತಾವರೀರಸ, ಆಡು ಸೋಗೆಯ ರಸಗಳನ್ನು ಕೂಡಿಸಿ ಕಾದ ಹಾಲು ತುಪ್ಪಗಳಿಗೆ ಹಾಕಿ ಕಲಕಿ ಕುಡಿಯುತ್ತಾ ಬರಬೇಕು.

೫೪. ಕಲವಿಂಕ, ಮಾಷ, ವೃಷ, ಕ್ಷೀರ, ಘೃತ ತ್ರಿಫಲಗಳನ್ನು ಅತಿಮಧುರದೊಡನೆ ಬೆರಸಿ ಸೇವಿಸಿದರೆ ಆಯುಷ್ಯಾಭಿವೃದ್ಧಿಯಾಗುವುದು. (ಈ ಪದಾರ್ಥಗಳ ಸಂಯೋಗ ಶುದ್ಧಿ, ಸೇವನ, ಅನುಪಾನಾದಿಗಳನ್ನು ನುರಿತ ಆರ್ಷೇಯ ವೈದ್ಯರ ಅನುಭವವನ್ನೂ ಸಲಹೆಗಳನ್ನೂ ಪಡೆದು ಸಿದ್ಧಗೊಳಿಸಬೇಕೇ ಹೊರತು ಯಾವುದನ್ನೂ ಅನನುಭವಿಗಳು ಸ್ವತಂತ್ರಿಸಿ ಮಾಡಬಾರದು.

ಟಿಪ್ಪಣಿ : ಅನೇಕ ವೈದ್ಯಗ್ರಂಥಗಳಲ್ಲಿ ಎಲ್ಲ ರೋಗಗಳಿಗೂ ವಿಸ್ತಾರವಾದ ವಿವರಣೆಗಳಿಗೂ ಔಷಧಗಳೂ ಅನುಪಾನಗಳೂ ನಿರೂಪಿತವಾಗಿವೆ. ಈ ಗ್ರಂಥದಲ್ಲಿ ಕೆಲವು ಸಂಗ್ರಹ ಪ್ರಯೋಗಗಳನ್ನು ಹೇಳಿದಾರೆ. ಈ ಅನುವಾದವು ಅನುಭವದಿಂದ ಬರೆದುದಲ್ಲವಾದುದರಿಂದಲೂ ಕೇವಲ ಸಂಸ್ಕೃತಾನುವಾದ ರೂಪವಾದುದರಿಂದಲೂ ಇದನ್ನೇ ಪ್ರಮಾಣವೆಂದು ನಂಬಿ ಪರೀಕ್ಷೆಗೂ ಪ್ರಯೋಗಕ್ಕೂ ಕೈಹಾಕಬಾರದೆಂದು ಈ ಮೂಲಕ ಸೂಚಿಸಲಾಗಿದೆ. ಶಾಸ್ತ್ರವಿಷಯವನ್ನು ತಿಳಿದುಕೊಳ್ಳುವುದೇ ಈ ಅನುವಾದದ ಪ್ರಯೋಜನವೆಂದು ಸರ್ವರೂ ಭಾವಿಸಬೇಕಲ್ಲದೆ ಇದರಲ್ಲಿರುವ ದೋಷವಿಮರ್ಶೆಗೆ ಹೋಗಬಾರದೆಂದೂ ಗುಣಾಂಶವಿದ್ದರೆ ಮಾತ್ರ ಗ್ರಹಿಸಬೇಕೆಂದೂ ಮತ್ತೊಮ್ಮೆ ಸೂಚನೆ. ಮತ್ತು ಈ ಅನುವಾದವು ನಿಷ್ಕೃಷ್ಟಾರ್ಥವೆಂದು ಭಾವಿಸದೆ ದೋಷಾಂಶವೇನಾದರೂ ಇದ್ದರೆ ಅದನ್ನು ಸೂಚಿಸಬೇಕಾಗಿ ಕೋರಿಕೆ.

**ಮಧುಕಾಯೋರಜೋಪೇತಾ ವಲೀಪಲಿತನಾಶಿನೀ ।**
**ವಚಾಸಿದ್ಧಂ ಘೃತಂ ರಾಮ ತದಾ ಭೂತವಿನಾಶನಂ । ॥ ೫೫ ॥**

**ಕಂಠೇ ಬುದ್ಧಿಪ್ರದಂ ಚೈವ ತಥಾ ಸರ್ವಾರ್ಥಸಾಧಕಂ ।**
**ವಲ್ಗಕಲ್ಕಕಷಾಯೇಣ ಸಿದ್ಧಮಭ್ಯಂಜನಂ ಹಿತಂ ॥ ೫೬ ॥**

---

೫೫. ಅತಿಮಧುರವನ್ನು ಕಬ್ಬಿಣದ ಪುಡಿಯೊಡನೆ ಗಂಧದ ಕಲ್ಲಿನ ಮೇಲೆ ತೇದು ಅದನ್ನು ತಿನ್ನುತ್ತ ಬಂದರೆ ಚರ್ಮವು ಸುಕ್ಕಾಗುತ್ತಿದ್ದರೆ, ಆ ಸುಕ್ಕು ಹೋಗಿ ಮಾಂಸಖಂಡಗಳು ಘಟ್ಟಿಯಾಗುವುವು. ತಲೆ ನರೆಯುತ್ತಿದ್ದರೆ ಬಿಳೀ ಕೂದಲು ಹೋಗಿ ಕರೀ ಕೂದಲಾಗುವುದು. ಗಂಧದ ಕಲ್ಲಿನ ಮೇಲೆ ತುಪ್ಪವನ್ನು ಹಾಕಿ ಅದರ ಮೇಲೆ ಬಜೆಯನ್ನು ತೇದು ಬೆರಸಿ ಸೇವಿಸಿದರೆ ಭೂತಭಯವು ನಾಶವಾಗುವುದು.

೫೬. ಮೇಲ್ಕಂಡ ಔಷಧವನ್ನೇ ಕಂಠಕ್ಕೆ ಲೇಪಿಸಿದರೆ ಬುದ್ಧಿಶಕ್ತಿಯು ಚುರುಕಾಗುವುದು. ಹಾಗೂ ಈ ಔಷಧವು ಸರ್ವಾರ್ಥಸಾಧಕವೆನಿಸುವುದು. ಮತ್ತು ಇದನ್ನು ತೆಯ್ದು ಎಣ್ಣೆಗೆ ಬೆರಸಿ ಅದನ್ನೊತ್ತಿಕೊಂಡು ಅಭ್ಯಂಗನಮಾಡಿದರೆ ಹಿತವಾಗಿರುವುದಲ್ಲದೆ ಇದು ಸರ್ವಾರ್ಥಸಾಧಕವೆಂದೂ ಸಹ ಹೇಳಿದಾರೆ. ಈ ಬಜೆಗೆ ಮಕ್ಕಳ ತಾಯಿಯೆಂದು ಹಿಂದೆಯೇ ಬರೆದಿದೆ. ತಾಯಿಯು ಮಕ್ಕಳನ್ನು ಹೇಗೆ ಪೋಷಿಸುವಳೋ ಅದೇ ಮೇರೆ ಈ ಬಜೆಯು ಸಕಲರನ್ನೂ ತಾಯಿಯಂತೆ ಕಾಪಾಡುವ ದಿವ್ಯೌಷಧವೆಂದು ಈ ಔಷಧಗಳಿಂದ ಗೊತ್ತಾಗುತ್ತದೆ. ಕಲ್ಕವೆಂದರೆ ಸಂಸ್ಕೃತದಲ್ಲಿ ನಾನಾರ್ಥಗಳಿವೆ. ಕಲ್ಕೋ ವಿಭಾತಕೇ, ತೈಲಾದಿ, ವಿಶೇಷೇ ಚ ಎಂದು ಹೇಳಿರುವುದರಿಂದ, ಇದನ್ನು ತೈಲವಿಶೇಷವೆಂದು ಇಲ್ಲಿ ಅರ್ಥಮಾಡುವುದು, ಸಮಂಜಸವಾಗಿದೆ. (ಇಂತಹ ಅನೇಕ ಕೈ ಔಷಧಿಗಳು ನಮ್ಮೆಲ್ಲನೇಕ ಹೆಂಗಸರಿಗೆ ಈಗಲೂ ಗೊತ್ತಿರುವುದೇ ಆಗಿದೆ. ಬಸರಿ ಬಾಣಂತಿಯರಾದಾಗ ಮಕ್ಕಳಿಗೆ ಹುಷಾರು ತಪ್ಪಿದಾಗ ಅವರವರ ತಾಯಿಯರೇ ಔಷಧ ಮಾಡುವುದನ್ನು ಎಲ್ಲರೂ ಬಲ್ಲರು. ಉದಾಹರಣೆ:—ಹೆತ್ತು ಹತ್ತು ದಿನವಾದಮೇಲೆ ಬಾಣಂತಿಯು ನೀರು ಹಾಕಿಕೊಂಡು ಒಳಕ್ಕೆ ಬಂದಮೇಲೆ ಒಂದು ತಿಂಗಳವರಿಗೂ ವಾಯುವಿಳಂಗವನ್ನು ಅಚ್ಚೆಳ್ಳೆಣ್ಣೆಗೆ ಬೆರಸಿ ಅದನ್ನು ಬಾಣಂತಿಯ ತಲೆಗೆ ಒತ್ತಿ ನೀರು ಹಾಕುವ ರೂಢಿಯು ಈಗಲೂ ಇದೆ.) ಆದುದರಿಂದಲೇ ಸಿದ್ಧಮಭ್ಯಂಜನಂಹಿತಂ ವಲೀಪಲಿತನಾಶಿನೀ. ಆಯುಷ್ಯಾತ್ರಿಫಲಾ ಎಂಬ ಪದಗಳು ಇಲ್ಲಿ ಪದೇ ಪದೇ ಹೇಳಲ್ಪಟ್ಟಿವೆ.

**ರಾಸ್ನಾ ಸಹಚರೈರ್ವಾಪಿ ತೈಲಂ ವಾತವಿಕಾರಿಣಾಂ ।**
**ಅನಭಿಷ್ಯಂದಿ ಯಚ್ಚಾನ್ಯತ್ತದ್ವ್ರಣೇಷು ಪ್ರಶಸ್ಯತೇ ॥ ೫೭ ॥**

**ಪಕ್ವಸ್ಯ ಚ ತಥಾ ಭೇದಂ ನಿಂಬಶೀಲಂ ಚ ರೋಪಣೇ ।**
**ತಥಾ ತಸ್ಯೋಪಚಾರಶ್ಚ ಬಲಕರ್ಮಾರ್ಥಿಶೇಷತಃ ॥ ೫೮ ॥**

**ಸೂತಿಕಾ ಚ ತಥಾ ರಕ್ಷಾ ವ್ರಣಿನಾಂ ತು ಸದಾ ಹಿತಾ ।**
**ಜಂಗಮೇವಿಷದಂಶೇತು ದಾತವ್ಯಂ ಸ್ಥಾವರಂ ವಿಷಂ ॥ ೫೯ ॥**

**ಸ್ಥಾವರೇ ಸರ್ಪದಷ್ಟಸ್ಯ ಹಿತಂ ಮಾಂಸಸ್ಯ ಭಕ್ಷಣಂ ।**
**ಭಕ್ಷಣಂ ನಿಂಬಪತ್ರಾಣಾಂ ಸರ್ಪದಷ್ಟಸ್ಯ ಭೋಜನಂ ॥ ೬೦ ॥**

---

೫೭. ವಾತವಿಕಾರ (ವಾಯುರೋಗ) ಗಳಿದ್ದಾಗ ಅಚ್ಚೆಳ್ಳೆಣ್ಣೆಗೆ ರಾಸ್ನೆಯನ್ನು ಬೆರಸಿ ಅದನ್ನು ವಾಯುವಿರುವ ಜಾಗದಲ್ಲಿ ತಿಕ್ಕಿದರೆ ನೋವು ಹೋಗುತ್ತದೆ. ಇತರ ವಿಧವಾದ ವ್ರಣಗಳಿಗೂ ಇದನ್ನು ಲೇಪಿಸಬಹುದು.

೫೮. ಗ್ರಹಗಳನ್ನೋಡಿಸಲಿಕ್ಕೂ, ಬಲಿಕರ್ಮಗಳಲ್ಲಿಯೂ ಬೇವಿನಸಪ್ಪು ಶ್ರೇಷ್ಠವಾದುದು. ಬೇವಿನ ಸಪ್ಪನ್ನು ಹಸೀದಾಗಿಯಾಗಲೀ ಬೇಯಿಸಿಯಾಗಲೀ ಉಪಯೋಗಿಸುತ್ತಾರೆ. ಬೇವಿನ ಸಪ್ಪಿನ ಮಂತ್ರದಿಂದ ಅದನ್ನು ಮೈಮೇಲೆ ಸವರೋಣ ಅಥವಾ ಹೊಡೆಯೋಣದರಿಂದ ಗ್ರಹಗಳೂ, ಭೂತಗಳೂ ಓಡಿಹೋಗುತ್ತವೆ.

೫೯. ಬಾಣಂತಿಗೂ ಸಹ ಬೇವಿನಸಪ್ಪು ರಕ್ಷಾಪ್ರದವಾದುದು. ಗಾಯವಿದ್ದರೆ ಬೇವಿನಸಪ್ಪನ್ನು ಅರೆದು ಲೇಪಿಸಿದರೆ ಒಳ್ಳೆಯದು. ಚೇಳು, ಹಾವು ಮುಂತಾದ ಜಂಗಮ ವಿಷಪ್ರಾಣಿಗಳ ವಿಷವನ್ನೂ ಸಹ ಈ ಬೇವಿನಸಪ್ಪಿನ ಪ್ರಯೋಗದಿಂದ ಗುಣ ಪಡಿಸಬಹುದು. ಸ್ಥಾನದ ವಿಷವೂ ಇದರಿಂದ ಪರಿಹಾರವಾಗುವುದು.

೬೦. ಹಾವು ಕಚ್ಚಿದವನಿಗೆ ಮಾಂಸವನ್ನು ತಿನ್ನಿಸಿದರೆ ವಿಷವು ಇಳಿದು ಹೋಗುವುದು. ಅಥವಾ ಬೇವಿನಸಪ್ಪನ್ನು ತಿಂದರೂ ಸಹ ಹಾವು ಕಡಿದ ವಿಷವು ಇಳಿದುಹೋಗುವುದು.

ವಂಧ್ಯಾಕಾರ್ಕೋಟಜಂ ಮೂಲಂ ಛಾಗಮೂತ್ರಾಭಿಭಾವಿತಂ ।
ನಸ್ಯಂ ಕಾಂಚಿಕಸಂಪಿಷ್ಟಂ ವಿಷವೇಗವಿನಾಶನಂ ॥ ೬೧ ॥

ಬಂಧನಾದ್ದೂಷಣಂ ಛೇದದಾಹಸ್ರಾವಾಃ ಪ್ರಕೀರ್ತಿತಾಃ ।
ಪೂರ್ವದಷ್ಟಸ್ಯ ಪಾನೇ ಚ ಹೃದಯಾವರಣಂ ಘೃತಂ ॥ ೬೨ ॥

ತಾಲನಿಂಬದಲಂ ಕೇಶಾ ಜೀರ್ಣಚೈಲಂ ಯವಾಘೃತಂ ।
ಧೂಪೋ ವೃಶ್ಚಿಕವಿದ್ಧಸ್ಯ ಶಿಖಿಪತ್ರಂ ಘೃತೇನ ವಾ ॥ ೬೩ ॥

ಅರ್ಕಕ್ಷೀರೇಣ ಸಂಪಿಷ್ಟಂ ಲೇಪಬೀಜಂ ಪಲಾಶಜಂ ।
ವೃಶ್ಚಿಕಾರ್ತಸ್ಯ ಕೃಷ್ಣಾವಾ ಶಿರೀಷಫಲಸಂಯುತಾ ॥ ೬೪ ॥

---

೬೧. ವಿಷದ ರೋಗವು ಇಳಿಯಬೇಕಾದರೆ ಬಜೆ, ಕರ್ಕೋಟಜ, ಮೋಡಿಗಳನ್ನು ಆಡಿನ ಉಚ್ಚೆಯಲ್ಲಿ ಅರೆದು ಬಾಗಿದ ಗಂಜಿಗೆ ಬೆರಸಿ ಅದನ್ನು ಮೂಸಿ ನೋಡುತ್ತಾ (ವಾಸನೆ ತೆಗೆದುಕೊಳ್ಳುತ್ತಾ) ಇದ್ದರೆ ವಿಷವೇಗ ವಿಳಿಯುವುದು.

೬೨. ವಿಷವು ಏರುವುದಕ್ಕಿಂತ ಮುಂಚೆ ಹಾವು ಕಡಿದ ಜಾಗವನ್ನು ಚೆನ್ನಾಗಿ ದಾರದಿಂದ ಕಟ್ಟಿಬಿಡಬೇಕು. ಆ ಕಡಿದ ಜಾಗದಿಂದ ವಿಷವು ಏರದಂತೆ ಮತ್ತು ಕೆಳಕ್ಕಿಳಿಯದಂತೆ ದಾರವನ್ನು ಕಟ್ಟಿ, ಆ ಕಚ್ಚಿದ ಜಾಗವನ್ನು ಕತ್ತರಿಸಿಬಿಡಬೇಕು. ಅಲ್ಲಿನ ವಿಷಮಿಶ್ರಿತ ರಕ್ತವನ್ನು ಹೊರಗೆ ತೆಗೆದುಬಿಡಬೇಕು. ಅಥವಾ ಆ ಜಾಗವನ್ನು ಸುಟ್ಟುಬಿಡಬೇಕು. ಈ ಕೆಲಸ ಮಾಡುವುದಕ್ಕಿಂತ ಮುಂಚೆ ಹಾವು ಕಚ್ಚಿ ವಿಷಪ್ರಸಾರವಾಗುತ್ತಿದ್ದರೆ ಹೊಟ್ಟೆಗೆ ಔಷಧವನ್ನು ಕುಡಿಸಬೇಕು. ಅಥವಾ ಮುಂದೆ ಬರೆದ ಕ್ರಮದಿಂದ ತಯಾರಾದ ಘೃತವನ್ನು ಕೊಡಬೇಕು.

೬೩. ಈ ಘೃತವನ್ನು ತಾಳೇಹಣ್ಣು, ಬೇವಿನ ಚಿಗುರು, ಕೇಸರಿ, ಹಳೇಬಟ್ಟೆ ಕರಿಕು ಇವುಗಳಿಂದ ತಯಾರುಮಾಡಿ ಉಪಯೋಗಿಸಬೇಕು. ಚೇಳು ಕಚ್ಚಿದವರಿಗೆ ನವಿಲುಗರಿಯನ್ನು ಸುಟ್ಟು ಅದನ್ನು ತುಪ್ಪಕ್ಕೆ ಬೆರಸಿ, ಅದರ ಧೂಪವನ್ನು ಹಾಕಿದರೆ ಗುಣವಾಗುವುದು.

೬೪. ಚೇಳು ಕಡಿದವನಿಗೆ ಲೇಪಬೀಜ, ಮುತ್ತುಗದ ಬೇರು, ಹಿಪ್ಪಲಿ, ಕರಿ ಜೀರಿಗೆ, ಶಿರೀಷ ಫಲಗಳನ್ನು ಎಕ್ಕದ ಹಾಲಿನಿಂದ ಅರೆದು ಗಾಯದಮೇಲೆ ಲೇಪನ ಮಾಡಿದರೆ ಚೇಳು ಕಡಿದ ನೋವು ಇಳಿದುಹೋಗುವುದು.

ತಿಲಕಾಸ್ಫೋಟಯೋರ್ದೂರ್ನಂ ಗಿರಿಕರ್ಣ್ಯಾಸ್ತಿಲಸ್ಯ ಚ ।
ಶರ್ಕರಾಮಧುಸರ್ಪೀಂಷಿ ಪಾನಮಾಖುವಿಷಾಪಹಂ ॥ ೬೫ ॥

ಅರ್ಕಕ್ಷೀರಂ ತಿಲಾಸ್ತೈಲಂ ಪಲಲಂ ಚಾ ಗುರುಂಸಮಂ ।
ಪಾನಾಜ್ಜಯತಿ ದುರ್ವಾರಮವಿಷಂ ಶೀಘ್ರಮೇವ ಚ ॥ ೬೬ ॥

ಪೀತ್ವಾ ಮೂಲಂ ತ್ರಿವೃತ್ತುಲ್ಯಂ ತಂಡುಲೀಯಸ್ಯ ಸರ್ಪಿಷಾ ।
ಸರ್ಪಕೀಟವಿಷಾಣ್ಯಾಶು ಜಯತ್ಯತಿಬಲಾನ್ಯಪಿ ॥ ೬೭ ॥

ಚಂದನಂ ಪದ್ಮಕಂ ಕುಷ್ಠಂ ನತಾಂಬೂಶೀರ ಪಾಟಲಾಃ ।
ನಿರ್ಗುಂಡೀಶಾಖಿಶ್ಯೈಲೂಷ ಲೂತಾವಿಷಹರೋಽಗದಃ ॥ ೬೮ ॥

ಶಿರೋವಿರೇಚನಂ ಶಸ್ತಂ ಗುಡನಾಗರಕಂ ದ್ವಿಜ ।
ನಸ್ಯಕರ್ಮಣಿ ವಸ್ತ್ರೌ ಚ ತಥಾ ಭೃಂಗೇ ಚ ಭಾರ್ಗವ ॥ ೬೯ ॥

---

೬೫. ಇಲಿಯು ಕಡಿದ ಸಮಯದಲ್ಲಿ ಅದರ ವಿಷಪರಿಹಾರಕ್ಕಾಗಿ ತಿಲಕದ ಮರದ ಬೇರು, ಗಿರಿಕರ್ಣಿಕೆ ಬೇರುಗಳನ್ನು ಜಜ್ಜಿ ಅದನ್ನೂ, ಎಳ್ಳನ್ನೂ ಬೆರಸಿ ಅರೆದು ಅದರ ರಸವನ್ನು ಹಿಂಡಿ, ಸಕ್ಕರೆ, ಜೇನುತುಪ್ಪ, ತುಪ್ಪಗಳನ್ನು ಬೆರಸಿ ಕುಡಿದರೆ ಇಲಿಯ ವಿಷದೋಷವು ಪರಿಹಾರವಾಗುವುದು.

೬೬. ದುರ್ವಾರ(ತೀವ್ರ) ವಿಷವೇ ಏರಿರಲಿ ಎಕ್ಕದಹಾಲು, ಎಳ್ಳು, ಅಚ್ಚೆಳ್ಳೆಣ್ಣೆ, ಮಾಂಸ, ಅಗರುಗಳನ್ನು ಸಮ ಪ್ರಮಾಣದಿಂದ ಬೆರಸಿ ಪಾನೀಯಪದಾರ್ಥವನ್ನಾಗಿ ಮಾಡಿಕೊಂಡು ಸೇವಿಸಿದರೆ, ಶೀಘ್ರವೇ ವಿಷಪರಿಹಾರವಾಗಲು ಸಂದೇಹವಿಲ್ಲ.

೬೭. ಬಿಳಲು, ತ್ರಿವೃತ್ ಎಂದರೆ ಲಾಲ್‌ತಿಗಡೆ ಅಥವಾ ಬಿಳೀ ತಿಗಡೆ, ಕಿರಕೀರೆಸಪ್ಪು, ವಾಯುವಿಳಂಗ, ಬಾಗಿದ ಗಂಜಿ (ಇದೇ ತಂಡುಲೀಯ) ಇವುಗಳನ್ನು ತುಪ್ಪದೊಡನೆ ಬೆರಸಿ ಸೇವಿಸಿದರೆ ಸರ್ಪಕೀಟಾದಿಗಳ ವಿಷವು ಎಷ್ಟೇ ಬಲವಾಗಿರಲಿ ತತ್ಕ್ಷಣವೇ ನಿವಾರಣೆಯಾಗುತ್ತದೆ.

೬೮. ಚಂದನ, ಪದ್ಮ, ಚಂಗಲಕೋಷ್ಟ, ಲಾಮಂಚ, ಪಾದರಿ, ಲಕ್ಕೀಸಪ್ಪು ಇವುಗಳೆಲ್ಲವೂ ಹುಳುಹುಪ್ಪಟೆಗಳ ಕಡಿತದಿಂದುಂಟಾದ ವಿಷಕ್ಕೆ ಔಷಧಿಗಳು.

೬೯. ಶುಂಠೀ, ಬೆಲ್ಲದ ಹುಡಿಗಳನ್ನು ತಿಂದರೆ ತಲೆನೋವು ವಾಸಿಯಾಗುತ್ತದೆ. ಗರಗದಸಪ್ಪಿನ ರಸವನ್ನು ಮೂಸಿನೋಡುತ್ತಿದ್ದರೂ ತಲೆನೋವು ಗುಣವಾಗುವುದು.

**ತೈಲಮೇವ ಪರಂ ವಿದ್ಯಾತ್ಸ್ನೇಹಪಾನೇ ತಥಾ ಘೃತಂ ।**
**ಸ್ವೇದನೀಯಃ ಪರೋವಹ್ನಿಃ ಸಿತಾಂಭಃಸ್ತಂಭನಂ ಪರಂ ॥ ೭೦ ॥**

**ತ್ರಿವೃದ್ಧಿರೇಚನೆ ಶ್ರೇಷ್ಠಾ ವಮನೇ ಮದನಂ ತಥಾ ।**
**ವಸ್ತಿರ್ವಿರೇಕೋ ವಮನಂ ತೈಲಂ ಸರ್ಪಿಸ್ತಥಾ ಮಧು ॥ ೭೧ ॥**

**ರಕ್ತಪಿತ್ತೇ ಬಲಾ ರಾಸ್ನಾ ಕ್ರಮೇಣ ಪರಮೌಷಧಂ ।**
**ಶರೀರಮಾನಸಾಗ್ರಂ ತು ಸಹಜಾ ವ್ಯಾಧಯೋ ಮತಾಃ ॥ ೭೨ ॥**

---

೭೦. ಮೈ ವಿಶೇಷವಾಗಿ ಬೆವರುತಲಿದ್ದರೆ ಎಣ್ಣೆಯನ್ನು ಕುಡಿಯಬೇಕು. ತೈಲ, ಸ್ನೇಹಪಾನ, ಘೃತ ಇವೆಲ್ಲವುಗಳೂ ಒಂದೇ ವಿಧದ ಗುಣವನ್ನು ಕೊಡತಕ ವಸ್ತುಗಳು. ಸಕ್ಕರೆ ಪಾನಕವು ಆಯಾಸಪರಿಹಾರಕವು.

೭೧. ಲಾಲ್‌ತಿಗಡೆ ಅಥವಾ ಬಿಳೀತಿಗಡೆಯು ಭೇದಿಯಾಗಲು ಔಷಧವಾಗಿದೆ. ಮಂಗರವಳ್ಳಿ ಅಥವಾ ಉಮ್ಮತ್ತದಕಾಯಿಬೀಜ, ಬೇರು ಮುಂತಾದುವುಗಳು ವಮನಕ್ಕೆ ಶ್ರೇಷ್ಠವಾದ ಔಷಧಿಗಳು. ಮದನವೆಂದರೆ ನಾನಾರ್ಥಗಳುಂಟು. ಮದನಾಸ್ಸಿಕ್ಥದತ್ತೂರವಸಂತದ್ರುಮಮನ್ಮಥಾಃ, ಅಂದರೆ ಮನ್ಮಥ-ವಸಂತಋತು, ಮಂಗಾರೆ ಅಥವಾ ಮಂಗರವಳ್ಳಿ - ಉಮ್ಮತ್ತದಗಿಡ - ಜೇನುನೊಣ (ಒಂದೊಂದು ಸಂಸ್ಕೃತ ಪದಕ್ಕೂ ಎಷ್ಟೆಷ್ಟೋ ಅರ್ಥಗಳಿವೆ. ಪ್ರಮಾದದಿಂದ ಏನಾದರೂ ಹೆಚ್ಚು ಕಡಿಮೆಯಾಗಿ ಅರ್ಥ ಬರೆದಿದ್ದರೆ ಅದು ಅನುವಾದಕರ ಅಜ್ಞಾನದೋಷವೆಂದು ದೋಷಜ್ಞರು ಭಾವಿಸಿ ಮನ್ನಿಸಬೇಕು. ಸರ್ವಜ್ಞರಾದವರೆಂದು ಹೇಳುವವರೂ ಜಾರಿಬೀಳುವುದು ಸ್ವಭಾವವೇ ಅಲ್ಲವೆ ?-ವಸ್ತಿ-ವಿರೇಚನ,ವಮನ-ತೈಲ-ತುಪ್ಪ-ಮಧು ಇವೆಲ್ಲವೂ ಬೇರೆ ಬೇರೆ ರೀತಿಯ ಪ್ರಯೋಗಗಳು.

೭೨. ರಕ್ತಪಿತ್ತಕ್ಕೆ ಚಿಟ್ಟರಳು, ರಾಸ್ನೆ ಇವು ಅತ್ಯುತ್ತಮವಾದ ಔಷಧಗಳು. ವ್ಯಾಧಿಗಳು ಶಾರೀರಕ ಮಾನಸಿಕವೆಂದು ಎರಡು ಬಗೆಯಾಗಿವೆ. ಸಹಜವಾದ ವ್ಯಾಧಿಯೂ ಸೇರಿ ಮೂರುಬಗೆಯಾಗುವುದು.

**ಶರೀರಜ್ವರಕುಷ್ಠಾದ್ಯಾಃ ಕ್ರೋಧಾದ್ಯಾ ಮಾನಸಾ ಮತಾಃ ।**
**ಆಗಂತವೋಽಭಿಘಾತೋತ್ಥಾಃ ಸಹಜಾಃ ಕ್ಷುತ್ತೃಷಾದಯಃ ॥ ೭೪ ॥**

**ಶರೀರಾಗಂತುನಾಶಾಯ ಸತತಂ ಸೂರ್ಯವಾಸರೇ ।**
**ಗುಡಾಜ್ಯಲವಣೋಪೇತಂ ಸಹಿರಣ್ಯಂ ದ್ವಿಜಾತಯೇ ॥ ೭೪ ॥**

**ದದ್ಯಾಚ್ಚ ಧೂಪಂ ಧರ್ಮಜ್ಞ ಪ್ರೀಣಯೇಚ್ಚ ದಿವಾಕರಂ ।**
**ಆರೋಗ್ಯಮೇತೇನಾಪ್ನೋತಿ ಕಾಮಾಂಶ್ಚ ಮನಸೇಪ್ಸಿತಾನ್ ॥ ೭೫ ॥**

**ಸತತಂ ದಿವಸೇ ಚಾಂದ್ರೇ ಸ್ನಾನಮಭ್ಯಂಗಪೂರ್ವಕಂ ।**
**ಯಃ ಪ್ರಯಚ್ಛತಿ ವಿಪ್ರಾಯ ಸೋಽಪಿರೋಗೈರ್ವಿಮುಚ್ಯತೇ ॥ ೭೬ ॥**

**ಶನೈಶ್ಚರದಿನೇ ದತ್ವಾ ತೈಲಂ ವಿಪ್ರೇಷು ಶಕ್ತಿತಃ ।**
**ನಿತ್ಯಮೇವ ಮಹಾಭಾಗ ರೋಗನಾಶನಮಾಪ್ನುಯಾತ್ ॥ ೭೭ ॥**

---

೭೩. ಜ್ವರ, ಕುಷ್ಠಾದಿರೋಗಗಳನ್ನು ಶಾರೀರಕ ವ್ಯಾಧಿಯೆನ್ನುವರು. ಕ್ರೋಧಾದಿಗಳು ಮಾನಸಿಕವ್ಯಾಧಿಗಳು. ಇದರಲ್ಲಿ ಆಗಂತುಕ ಅಭಿಘಾತಕವೆಂದೆರಡು ವಿಧವಿದೆ. ಹಸಿವು ಬಾಯಾರಿಕೆಗಳನ್ನು ನಹಜವ್ಯಾಧಿಯೆಂದು ಭಾವಿಸಬೇಕು. (ಆದ್ದರಿಂದಲೇ ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಂ।ಪ್ರತಿದಿನಂ ಭಿಕ್ಷೌಷಧಂ ಭುಜ್ಯತಾಂ ಎಂದು ಹೇಳಿರುವುದು.)

೭೪. ದೇಹಕ್ಕೆ ಆಗಂತುಕವಾಗಿ ಸಂಭವಿಸುವ ರೋಗಗಳ ಶಮನಕ್ಕಾಗಿ ಪ್ರತಿ ಭಾನುವಾರದ ದಿವಸವೂ ಬೆಲ್ಲ, ತುಪ್ಪ, ಉಪ್ಪು ಇವುಗಳನ್ನು ದಕ್ಷಿಣೆ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು.

೭೫. ಸೂರ್ಯನ ಪ್ರೀತಿಗಾಗಿ ಧೂಪಹಾಕಬೇಕು. ಈ ರೀತಿ ಮಾಡೋಣದ ರಿಂದ ಮನಸ್ಸಿನ ಕೋರಿಕೆಗಳು ನೆರವೇರುವುದಲ್ಲದೆ ಆರೋಗ್ಯಭಾಗ್ಯವೂ ಉಂಟಾಗುತ್ತದೆ.

೭೬. ಯಾವ ವಿಧವಾದ ರೋಗಗಳು ಬಂದಾಗ್ಯೂ ಪ್ರತಿಯೊಂದು ಸೋಮ ವಾರದ ದಿವಸವೂ ಅಭ್ಯಂಗನಸ್ನಾನಮಾಡಿಕೊಂಡು ಮೇಲೆ ಹೇಳಿದ ಪದಾರ್ಥಗಳನ್ನೂ, ಅಕ್ಕಿಯನ್ನೂ ಬ್ರಾಹ್ಮಣನಿಗೆ ದಾನಮಾಡಿದರೆ ರೋಗವು ಇಳಿಮುಖಕ್ಕೆ ಬರುತ್ತದೆ.

೭೭. ಮತ್ತು ರೋಗಿಷ್ಠನಾದವನು ಪ್ರತಿ ಶನಿವಾರದ ದಿವಸವೂ ಶನೈಶ್ಚರ ಗ್ರಹಕ್ಕೆ ಪ್ರೀತಿಯಾಗಲೆಂದು ಬ್ರಾಹ್ಮಣರಿಗೆ ದಕ್ಷಿಣೆ ಸಹಿತವಾಗಿ ಎಳ್ಳನ್ನು ದಾನ ಮಾಡಿದರೆ ರೋಗಪರಿಹಾರವಾಗುತ್ತದೆ.

**ಆಶ್ವಿನಂ ಸಕಲಂ ಮಾಸಂ ಪ್ರತ್ಯಹಂ ಗೋರಸೈರ್ದ್ವಿಜಾನ್ ।**
**ಭೋಜಯಿತ್ವಾ ಮಹಾಭಾಗ ರೋಗನಾಶನಮಾಪ್ನುಯಾತ್ ॥ ೭೮ ॥**

**ಸ್ನಾಪಯಿತ್ವಾ ತಥಾ ಲಿಂಗಂ ದೇವದೇವಸ್ಯ ಶೂಲಿನಃ ।**
**ಘೃತೇನ ಪಯಸಾ ಚೈವ ಸರ್ವರೋಗೈರ್ವಿಮುಚ್ಯತೇ ॥ ೭೯ ॥**

**ಗಾಯತ್ರ್ಯಾಽವಾಹಯೇದ್ವಿದ್ವಾನ್ದೂರ್ವಾಂ ತ್ರಿಮಧುನಾಪ್ಲುತಾಂ ।**
**ಪೂತಶ್ಚ ಬ್ರಾಹ್ಮಣಾಶೀರ್ಭಿಃ ಸರ್ವರೋಗೈರ್ವಿಮುಚ್ಯತೆ ॥ ೮೦ ॥**

**ಯಸ್ಮಿನ್ಭೇ ವ್ಯಾಧಿಮಾಪ್ನೋತಿ ಕೃತ್ವಾ ತಸ್ಯ ಬಲಿಕ್ರಿಯಾಂ ।**
**ಭಪೂಜಾವಿಧಿನಾ ರಾಮ ತಸ್ಮಾದ್ರೋಗಾದ್ವಿಮುಚ್ಯತೆ ॥ ೮೧ ॥**

---

೭೮. ಯಾರು ಆಶ್ವಯುಜಮಾಸದಲ್ಲಿ ಪ್ರತಿದಿನವೂ ಬ್ರಾಹ್ಮಣರನ್ನು ಕರೆದು ಷಡ್ರಸೋಪೇತವಾದ ಮೃಷ್ಟಾನ್ನವನ್ನು ಯಥೇಚ್ಛವಾದ ಗೋರಸ (ಹಾಲು-ತುಪ್ಪ-ಮೊಸರು) ಗಳೊಡನೆ ಭೋಜನಮಾಡಿಸುತ್ತ ಬರುವರೋ ಅವರು ಸಕಲ ರೋಗಗಳಿಂದಲೂ ಮುಕ್ತರಾಗುವರು.

೭೯. ಮತ್ತು ಆಶ್ವಯುಜಮಾಸದಲ್ಲಿ ಯಾರು ಪ್ರತಿ ದಿವಸವೂ (ಶರದೃತು) ಶಿವಲಿಂಗಕ್ಕೆ ರುದ್ರಾಭಿಷೇಕವನ್ನೂ, ಘೃತಾಭಿಷೇಕ ಕ್ಷೀರಾಭಿಷೇಕಗಳನ್ನೂ ಮಾಡಿಸುವರೋ ಅವರು ಸಕಲ ರೋಗಗಳಿಂದಲೂ ಮುಕ್ತರಾಗುತ್ತಾರೆ.

೮೦. ಬುದ್ಧಿವಂತನಾದವನು ಏನಾದರೂ ಖಾಯಿಲೆ ಬಂದಾಗ ಜೇನುತುಪ್ಪ-ಸಕ್ಕರೆಗಳಲ್ಲದ್ದಿದ ದೂರ್ವೆಗಳಲ್ಲಿ ಗಾಯತ್ರಿಯನ್ನಾವಾಹಿಸಿ ಬ್ರಾಹ್ಮಣರು ಹೇಳುವ ವೇದಮಂತ್ರಗಳಿಂದ ಆಶೀರ್ವಾದವನ್ನು ಪಡೆಯುವನೋ, ಅಂತಹವನು ಸಕಲ ರೋಗಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೮೧. ಯಾವ ನಕ್ಷತ್ರದ ದಿನ ಖಾಯಿಲೆಯಿಂದ ಮಲಗಿಕೊಳ್ಳುವನೋ ಆ ನಕ್ಷತ್ರದೇವತಾ ಪ್ರೀತಿಯಾಗಿ ಬಲಿಕರ್ಮವನ್ನು ಮಾಡಿ ನಕ್ಷತ್ರಪೂಜಾವಿಧಿಯಿಂದ ಆ ನಕ್ಷತ್ರವನ್ನು ಪೂಜಿಸುತ್ತ ಯಾವನು ಬರುವನೋ ಅಂತಹ ರೋಗಿಯು ಶೀಘ್ರದಲ್ಲೇ ಗುಣವನ್ನು ಹೊಂದುತ್ತಾನೆ.

**ಕರ್ತವ್ಯಮಥವಾ ಸ್ನಾನಂ ತಥಾಽರೋಗ್ಯವಿವರ್ಧನಂ ।**
**ಆರೋಗ್ಯದಾಂ ದ್ವಿತೀಯಾಂ ವಾ ಪ್ರತಿಪದ್ವಾ ಭೃಗೂತ್ತಮ ॥ ೮೨ ॥**

**ಕರ್ತವ್ಯಂ ವೈಷ್ಣವಂ ವಾಪಿ ವ್ರತಮಾರೋಗ್ಯಕಾರಕಂ ।**
**ಮಾನಸಾನಾಂ ನಿಜಾನಾಂ ಚ ತಥಾ ಚೈವಾವಿಪತ್ತಯೆ ॥ ೮೩ ॥**

**ಶರಣಂ ದೇವದೇವೇಶಂ ವ್ರಜೇತ ಮಧುಸೂಧನಂ ।**
**ಸರ್ವಗಂ ತಂ ಜಗನ್ನಾಥ ಮಜೇಯಂ ಪುರುಷೋತ್ತಮಂ ॥ ೮೪ ॥**

**ಸ್ತುವನ್ನಾಮಸಹಸ್ರೇಣ ವ್ಯಾಧೀನ್ಸರ್ವಾನ್ವ್ಯಪೋಹತಿ ।**
**ದೋಷಧಾತುಮಲಾಧಾರಂ ಶರೀರಂ ಪ್ರಾಣಿನಾಂ ದ್ವಿಜ ॥ ೮೫ ॥**

---

೮೨. ಆರೋಗ್ಯಭಾಗ್ಯದಿಂದ ಬದುಕಬೇಕೆಂಬ ಮನುಷ್ಯನು ಆರೋಗ್ಯಕರವಾದ ಪಾಡ್ಯ ಮತ್ತು ಬಿದಿಗೆಯ ದಿವಸಗಳಲ್ಲಿ (ಆರೋಗ್ಯಪ್ರತಿಪತ್-ಆರೋಗ್ಯ ದ್ವಿತೀಯಾ) ಅಭ್ಯಂಗಸ್ನಾನ ಮಾಡಿಕೊಳ್ಳುತಲಿದ್ದರೆ ಆರೋಗ್ಯಭಾಗ್ಯವನ್ನನುಭವಿಸುವನು.

೮೩. ದೇಹವ್ಯಾಧಿಗಳಲ್ಲದೆ ಮನೋರೋಗಗಳೇನಾದರೂ ಇದ್ದ ಸಂದರ್ಭದಲ್ಲಿ ಆರೋಗ್ಯಭಾಗ್ಯ ಪ್ರಾಪ್ತಿಗೋಸ್ಕರ ಯಾವುದಾದರೊಂದು ವೈಷ್ಣವ (ವಿಷ್ಣುದೇವತಾ) ವ್ರತವನ್ನು ಮಾಡಿದರೆ ಕಷ್ಟಪರಿಹಾರವಾಗುವುದು.

೮೪. ಎಂತಹ ಕಷ್ಟವೇ ಬರಲಿ ಎಂತಹ ಭಯಂಕರ ರೋಗಗಳೇ ಬರಲಿ, ಅಂತಹ ಸಂದರ್ಭಗಳಲ್ಲಿ ಸ್ವಲ್ಪವೂ ಹೆದರದೆ ಸರ್ವತ್ರವಿರಾಜಮಾನನಾದ, ಅಜೇಯನಾದ, ಪುರುಷೋತ್ತಮನಾದ, ಜಗನ್ನಾಥನಾದ ಮಧುಸೂದನನ್ನು ಶರಣು ಹೊಂದಬೇಕು.

೮೫. ವಿಷ್ಣುಸಹಸ್ರನಾಮಸ್ತೋತ್ರವನ್ನಾರು ಪಾರಾಯಣಮಾಡುತ್ತಾರೋ ಅಂತಹ ಮಹನೀಯರು ಸಕಲ ವ್ಯಾಧಿಗಳಿಂದಲೂ ಬಿಡುಗಡೆಹೊಂದುತ್ತಾರೆ. ಎಲೈ ಪರಶುರಾಮನೇ, ಕೇಳು. ಈ ಮನುಷ್ಯ ದೇಹವು ಬಹುದೋಷಗಳಿಂದ ಕೂಡಿದ ಧಾತುಗಳಿಗೂ ಮಲ (ಅಮೇಧ್ಯ) ಗಳಿಗೂ ಆಧಾರವಾದುದು. ಸಕಲ ಪ್ರಾಣಿಗಳ ಶರೀರದಲ್ಲೂ (ಒಳಗೆ) ಅಶುದ್ಧಪದಾರ್ಥವೇ ತುಂಬಿದೆ.

ವಾತಪಿತ್ತಕಫಾ ದೋಷಾ ಧಾತವಶ್ಚ ತಥಾ ಶೃಣು ।
ಭುಕ್ತಂ ಪಕ್ವಾಶಯಾದನ್ನಂ ದ್ವಿಧಾ ಯಾತಿ ಭೃಗೂತ್ತಮ ॥ ೮೬ ॥

ಅಂಶೇನೈಕೇನ ಕಿಟ್ಟತ್ವಂ ರಸತಾಂ ಚಾಪರೇಣ ಚ ।
ಕಿಟ್ಟಭಾಗೋ ಮಲಸ್ತತ್ರ ವಿಣ್ಮೂತ್ರಸ್ವೇದದೂಷತಃ ॥ ೮೭ ॥

ನಾಸಾಮಲಂ ದೇಹಮಲಂ ತಥಾ ಕರ್ಣಮಲಂ ಚ ಯತ್ ।
ರಸಭಾಗೇ ರಸಂ ತತ್ರ ಸಮ್ಯಕ್ಶೋಣಿತತಾಂ ವ್ರಜೇತ್ ॥ ೮೮ ॥

ಮಾಂಸಂ ರಕ್ತಂತತೋ ಮೇದೋ ಮೇದಸೋಽಸ್ಥ್ನಾಂ ಚ ಸಂಭವಃ ।
ಅಸ್ಥ್ನೋ ಮಜ್ಜಾ ತತಃ ಶುಕ್ರಂ ಶುಕ್ರಾದ್ರಾಮ ತತೋ ರಸಃ ॥ ೮೯ ॥

---

೮೬. ಮನುಷ್ಯನ ದೇಹದಲ್ಲಿರುವ ವಾತಪಿತ್ತಶ್ಲೇಷ್ಮದೋಷಗಳನ್ನೂ, ಧಾತುಗಳನ್ನೂ ವಿವರಿಸುತ್ತೇನೆ, ಕೇಳು. ಊಟಮಾಡಿದ ಅನ್ನವು ಜೀರ್ಣಾಶಯದಿಂದ ಎರಡು ಭಾಗವಾಗಿ ಪರಿಣಮಿಸು (ವಿಂಗಡಿಸಲ್ಪಡು) ತ್ತದೆ.

೮೭. ಒಂದು ಭಾಗವು ಜೀರ್ಣರಸದೊಡನೆ ಬೆರೆತು ಸಕಲಾವಯವಗಳಿಗೂ ಪುಷ್ಟಿಯನ್ನು ಕೊಟ್ಟು ರಕ್ತಗತವಾಗುತ್ತದೆ. ಮತ್ತೊಂದು ನೀರಸಭಾಗವು ಮಲರೂಪವಾಗಿ ಪರಿಣಮಿಸಿ ಬೆವರಿನ ರೂಪವಾಗಿಯೂ ದೇಹದಿಂದ ಹೊರಗೆ ಹೋಗುತ್ತದೆ.

೮೮. ಈ ಮಲವು ನಾಸಾಮಲ (ಸಿಂಬಳ) ರೂಪವಾಗಿಯೂ, ಕರ್ಣಮಲ (ಗುಗ್ಗೆ) ರೂಪವಾಗಿಯೂ ದೇಹದಿಂದ ಹೊರಕ್ಕೆ ಹೊರಡುತ್ತಲೇ ಇರುತ್ತದೆ. ರಸಭಾಗದ ರಸವು ಮೇಲೆ ಹೇಳಿದಂತೆ ರಕ್ತವಾಗಿ ಪರಿಣಮಿಸಿ ರಕ್ತನಾಳಗಳಿಗೆ ಹೋಗಿ ಸೇರಿಕೊಳ್ಳುತ್ತದೆ.

೮೯. ಇದೇ ಅನ್ನರಸವೇ ಮಾಂಸರೂಪವಾಗಿಯೂ, ರಕ್ತಗತವಾಗಿಯೂ, ಅನಂತರ ಮೇದಸ್ಸಾಗಿಯೂ, ಅದೇ ಮೇದಸ್ಸೆ (ಕೊಬ್ಬೇ) ಮೂಳೆಯಾಗಿಯೂ ಪರಿಣಮಿಸುವುದು. ಅಸ್ಥಿಗಳಿಂದ ಮಜ್ಜೆಯೂ, ಅದರಿಂದ ಧಾತು (ಶುಕ್ಲ) ವೂ, ಆ ಧಾತುವಿನಿಂದ ರಸವೂ ಉತ್ಪತ್ತಿಯಾಗುತ್ತದೆ.

ಸರ್ವೇಷಾಮೇವ ಧಾತೂನಾಂ ಸಾರಮೋಜಃ ಪ್ರಕೀರ್ತಿತಂ ।
ದೇಶಂ ಸಾತ್ಮ್ಯಂ ಚ ಯಾಂ ಶಕ್ತಿಂ ಕಾಲಂ ಪ್ರಕೃತಿಮೇವ ಚ ॥ ೯೦ ॥

ಜ್ಞಾತ್ವಾ ಚಿಕಿತ್ಸಿತಂ ಕುರ್ಯಾದ್ಭೇಷಜಸ್ಯ ತಥಾ ಬಲಂ ।
ತಿಥಿಂ ರಿಕ್ತಾಂ ದಿನೇಶಂ ಚ ತಥೈವ ಚ ಕುಜಾರ್ಕಜೌ ॥ ೯೧ ॥

ದಾರುಣೋಗ್ರಾಣಿ ಚರ್ಕ್ಷಾಣಿ ವರ್ಜಯೇದ್ಭೇಷಜೇ ಸದಾ ।
ಹರಿಗೋದ್ವಿಜಚಂದ್ರಾರ್ಕ ಸುರಾಗ್ನೀನ್ಸಂಪ್ರತಿಪೂಜ್ಯ ಚ ॥ ೯೨ ॥

ಶ್ರುತ್ವಾ ಮಂತ್ರಮಿಮಂ ವಿದ್ವಾನ್ಭೇಷಜಾರಂಭಮಾಚರೇತ್ ।
ಬ್ರಹ್ಮತ್ರ್ಯಕ್ಷಾಶ್ವಿರುದ್ರೇಂದ್ರ ಭೂಚಂದ್ರಾರ್ಕಾನಲಾನಿಲಾಃ ॥ ೯೩ ॥

---

೯೦. ಸಕಲ ಧಾತುಗಳ ಸಾರಕ್ಕೆ ಓಜಸ್ಸೆಂದು ಹೆಸರು. ಈ ಓಜಸ್ಸನ್ನೇ ಆತ್ಮಶಕ್ತಿಯೆಂದೂ, ಕಾಲವೆಂದೂ, ಪ್ರಕೃತಿಯೆಂದೂ ಹೇಳುವರು.

೯೧. ವೈದ್ಯನಾದವನು ಮೇಲೆ ವಿವರಿಸಿದ ದೇಹಸ್ವರೂಪವನ್ನೂ, ದೇಶಕಾಲಗಳನ್ನೂ, ದೇಹಸ್ಥಿತಿಯನ್ನೂ ನಾಡೀಜ್ಞಾನದಿಂದ ತಿಳಿದವನಾಗಿ ಚಿಕಿತ್ಸೆಮಾಡಬೇಕು. ಚಿಕಿತ್ಸಕನು ಚಿಕಿತ್ಸೆಮಾಡುವುದಕ್ಕಾರಂಭಿಸುವಾಗ ಒಳ್ಳೇ ದಿನವನ್ನು ನೋಡಿಯೇ ಚಿಕಿತ್ಸೆಗೆ ಕೈಹಾಕಬೇಕು. (ಅದಕ್ಕಾಗಿಯೇ ಭಾನುವಾರ-ಗುರುವಾರಗಳಲ್ಲಿ ಔಷಧಿಯನ್ನು ತೆಗೆದುಕೊಳ್ಳಲಾರಂಭಿಸಬೇಕೆಂಬ ನಡವಳಿಕೆಯು ಇಂದಿಗೂ ನಡೆದು ಬರುತ್ತಿದೆ.) ರಿಕ್ತತಿಥಿಯಲ್ಲಿ ಚಿಕಿತ್ಸೆಮಾಡಬಾರದು. ಶನಿವಾರ-ಮಂಗಳವಾರ ಔಷಧಕ್ಕೆ ಮೊದಲು ಮಾಡಬಾರದು.

೯೨. ಕ್ರೂರನಕ್ಷತ್ರಗಳು ಕೂಡದು. ಚಿಕಿತ್ಸಕನು (ವೈದ್ಯನು) ಚಿಕಿತ್ಸೆಗೆ ಆರಂಭಿಸುವುದಕ್ಕಿಂತ ಮುಂಚೆ ಮಹಾವಿಷ್ಣುವನ್ನೂ, ಗೋಬ್ರಾಹ್ಮಣರನ್ನೂ, ಸೂರ್ಯಚಂದ್ರಾಗ್ನಿಯೇ ಮೊದಲಾದ ದೇವತೆಗಳನ್ನೂ ಪೂಜೆಮಾಡಿ ಆರಂಭಿಸಬೇಕು.

೯೩-೯೪. ಭೇಷಜಾರಂಭಕ್ಕೆ ಮೊದಲು ಈಗ ಹೇಳುವ ಮಂತ್ರವನ್ನುಚ್ಚರಿಸಿ ಚಿಕಿತ್ಸೆಗಾರಂಭಿಸಬೇಕು. ಈ ೯೩-೯೪ ಶ್ಲೋಕಗಳೇ ಅವು. ಅವುಗಳ ಅರ್ಥವನ್ನಿಲ್ಲಿ ತಿಳಿಸುತ್ತೇನೆ. ಬ್ರಹ್ಮನಿಗೂ, ಈಶ್ವರನಿಗೂ, ಅಶ್ವಿನೀದೇವತೆಗಳಿಗೂ, ರುದ್ರನಿಗೂ, ಭೂಮಿಗೂ, ಚಂದ್ರಸೂರ್ಯರಿಗೂ, ಅಗ್ನಿವಾಯುಗಳಿಗೂ, ಋಷಿಗಳಿಗೂ, ಓಷಧಿಸಮೂಹಗಳಿಗೂ, ಸಕಲಭೂತನಿವಹಕ್ಕೂ ನಾನು ನಮಸ್ಕಾರ ಮಾಡುತ್ತೇನೆ.

ಋಷಯ ಓಷಧಿಗ್ರಾಮಾ ಭೂತಸರ್ಗಾಶ್ಚ ಪಾಂತು ತೇ ।
ರಸಾಯನಮಿವರ್ಷೀಣಾಂ ದೇವಾನಾಮಮೃತಂ ಯಥಾ ॥ ೯೪ ॥

ಸ್ವಧೇವೋತ್ತಮನಾಗಾನಾಂ ಭೈಷಜ್ಯಮಿದಮಶ್ನುತೇ ।
ವಾತಶ್ಲೇಷ್ಮಾತ್ಮಕೋ ದೇಶೋ ಬಹುವೃಕ್ಷೋ ಬಹೂದಕಃ ॥ ೯೫ ॥

ಅನೂಪ ಇತಿ ವಿಖ್ಯಾತೋ ಜಾಂಗಲಸ್ತದ್ವಿವರ್ಜಿತಃ ।
ಕಿಂಚಿದ್ವೃಕ್ಷಾಧಿಕೋ ದೇಶಸ್ತಥಾ ಸಾಧಾರಣಃಸ್ಮೃತಃ ॥ ೯೬ ॥

ಜಾಂಗಲಃ ಪಿತ್ತಬಹುಲೋ ಮಧ್ಯಃ ಸಾಧಾರಣೋ ಮತಃ ।
ರೂಕ್ಷಶೀತಶ್ಚಲೋ ವಾತಃ ಪಿತ್ತಮುಷ್ಣಕಟುದ್ರವಂ ॥ ೯೭ ॥

ಸ್ಥಿರಾಮ್ಲಸ್ನಿಗ್ಧಮಧುರಂ ಬಲಾಸಂ ಚ ಪ್ರಚಕ್ಷತೇ ।
ಬುದ್ಧಿಃ ಸಮಾನೈಃ ಸರ್ವೇಷಾಂ ವಿಪರೀತೈರ್ವಿಪರ್ಯಯಃ ॥ ೯೮ ॥

---

ಇವರೆಲ್ಲರೂ ನನ್ನನ್ನು ಕಾಪಾಡಲಿ. ನಾನು ಕೊಡುವ ಈ ಔಷಧವು ಋಷಿಗಳ ರಸಾಯನದಂತೆಯೂ, ದೇವತೆಗಳ ಅಮೃತದಂತೆಯೂ, ಉತ್ತಮ ನಾಗರುಗಳಿಗೆ ಸ್ವಧಾರಸದಂತೆಯೂ ಪರಿಣಮಿಸಲಿ. ಈ ಔಷಧವನ್ನು ತಿಂದ ರೋಗಿಯು ಆರೋಗ್ಯ ಹೊಂದಲಿ.

೯೫-೯೬. ವಾತಶ್ಲೇಷಾತ್ಮಕವಾದ ಮತ್ತು ಬಹುವೃಕ್ಷ(ಧಾತು) ಗಳುಳ್ಳ ಬಹು ಜಲಗುಳುಳ್ಳ ದೇಶ (ದೇಹ)ವು ಅನೂಪವೆಂದು ಪ್ರಖ್ಯಾತವಾಗಿರುವುದು. ಇವುಗಳಿಲ್ಲದ ಪ್ರದೇಶವು ಜಾಂಗಲವೆನಿಸಿಕೊಳ್ಳುವುದು. ಸ್ವಲ್ಪ ಮಾತ್ರವೇ ವೃಕ್ಷಗಳಿಂದ ಅಧಿಕವಾದ ಪ್ರದೇಶವು ಸಾಧಾರಣವೆಂದು ಹೇಳಸಿಕೊಳ್ಳಲ್ಪಡುವುದು. ಜಾಂಗಲದೇಶವು (ದೇಹ) ಪಿತ್ತಬಾಹುಳ್ಯದಿಂದ ಕೂಡಿರುವುದು.

೯೭-೯೮. ಸಾಧಾರಣ ದೇಶವು ಮಧ್ಯಮವೆನಿಸಿಕೊಳ್ಳುವುದು. ಬಹಳ ಕಠಿಣ ವಾದ ಛಳಿ, ರೊಯ್ಯನೆ ಗಾಳಿಬೀಸುವುದು, ಪಿತ್ತ, ಉಷ್ಣ, ಕಟು, ದ್ರವ, ಸ್ಥಿರಾಮ್ಲಸ್ನಿಗ್ಧ ಮಧುರಗಳೂ ಸಹ ಬಲಾಸವೆನಿಸಿಕೊಳ್ಳುತ್ತದೆ. ಇವುಗಳೆಲ್ಲವೂ ಸಮಸಮನಾಗಿ ವೃದ್ಧಿ ಹೊಂದಿ ದೇಹಗತವಾಗಿದ್ದರೆ ದೇಹಸ್ಥಿತಿಯು ಸಮನಾಗಿರುತ್ತದೆ. ಇವುಗಳೆಲ್ಲವೂ ಅಥವಾ ಯಾವುದೊಂದು ಬಲವಾದರೂ ವಿಪರೀತವೆನಿಸಿಕೊಳ್ಳುವುದು. (ವಾಯು ಪ್ರಕೋಪ, ಪಿತ್ತಪ್ರಕೋಪ, ಶ್ಲೇಷ್ಮಪ್ರಕೋಪ, ಶೀತಪ್ರಕೋಪ, ಇತ್ಯಾದಿ, ಇತ್ಯಾದಿ.)

**ಸಮಾಃ ಸ್ವಾದ್ವಮ್ಲಲವಣಾಃ ಶ್ಲೇಷ್ಮಲಾ ವಾಯುನಾಶನಾಃ ।**
**ಕಟುತಿಕ್ತಕಷಾಯಾಶ್ಚ ವಾತಲಾಃ ಶ್ಲೇಷ್ಮನಾಶನಾಃ ॥ ೯೯ ॥**

**ಕಟ್ವಮ್ಲಲವಣಾ ಜ್ಞೇಯಾಸ್ತಥಾ ಪಿತ್ತವಿವರ್ಧನಾಃ ।**
**ತಿಕ್ತಾಃ ಸ್ವಾದುಕಷಾಯಾಶ್ಚ ತಥಾ ಪಿತ್ತವಿನಾಶನಾಃ ॥ ೧೦೦ ॥**

**ಸ್ವಭಾವತಸ್ತಥಾಕರ್ಮ ತೇ ಚ ಕುರ್ವಂತಿ ಭಾರ್ಗವ ।**
**ಶಿಶಿರೇ ಚ ವಸಂತೇ ಚ ನಿದಾಘೇ ಚ ತಥಾ ಕ್ರಮಾತ್ ॥ ೧೦೧ ॥**

**ಚಯಪ್ರಕೋಪಪ್ರಶಮಾಸ್ತಥಾ ಪಿತ್ತಸ್ಯ ಕೀರ್ತಿತಾಃ ।**
**ನಿದಾಘೇ ವಾರಿದಾ ರಾತ್ರೇ ತಥಾ ಶರದಿ ಭಾರ್ಗವ । ॥ ೧೦೨ ॥**

**ಚಯಪ್ರಕೋಪಪ್ರಶಮಾಃ ಶ್ಲೇಷ್ಮಣಶ್ಚ ಪ್ರಕೀರ್ತಿತಾಃ ॥ ೧೦೩ ॥**

---

೯೯. ಸಿಹಿ-ಹುಳಿ-ಉಪ್ಪುಗಳನ್ನು ಸಮುಸಮವಾಗಿ ಬೆರಸಿ ಸೇವಿಸಿದರೆ ಶ್ಲೇಷ್ಮ ವೃದ್ಧಿಯಾಗುತ್ತದೆ, ವಾಯು ನಾಶವಾಗುತ್ತದೆ. ಕಹಿಒಗರುಗಳ ಕಷಾಯಸೇವನೆಯಿಂದ ವಾತದೋಷ, ಶ್ಲೇಷ್ಮದೋಷ (ರೋಗ) ಗಳು ಗುಣವಾಗುತ್ತವೆ.

೧೦೦. ಖಾರ-ಹುಳಿ-ಉಪ್ಪುಗಳನ್ನು ಹೆಚ್ಚಾಗಿ ಸೇವಿಸೋಣದರಿಂದ ಪಿತ್ತವು ಹೆಚ್ಚಾಗುತ್ತದೆ. ಒಗರು ಮತ್ತು ಸಿಹಿ ಕಷಾಯಗಳ ಸೇವನೆಯಿಂದ ಆ ಪಿತ್ತವು ನಾಶವಾಗುತ್ತದೆ.

೧೦೧. ಜನರು ಅವರವರ ದೇಹಪ್ರಕೃತಿ (ಸ್ಥಿತಿ) ಯನ್ನನುಸರಿಸಿ ಅವರವರ ಸ್ವಭಾವವನ್ನನುಸರಿಸಿ ಆಹಾರವನ್ನು (ದೇಹಕ್ಕೆ ಹಿತವಾದುದನ್ನು) ತೆಗೆದುಕೊಳ್ಳುತ್ತಾರೆ. ಶಿಶಿರಋತು-ವಸಂತಋತು-ವರ್ಷಋತುಗಳಲ್ಲಿ ಆಯಾಕಾಲಾನುಸಾರವಾಗಿ ವಾತ, ಪಿತ್ತ, ಶ್ಲೇಷ್ಮಗಳು ಹೆಚ್ಚುಕಡಿಮೆಯಾಗುತ್ತಿರುವುದುಂಟು.

೧೦೨. ಈ ರೀತಿ ಕಾಲದೇಶಗಳೂ, ದೇಹಸ್ಥಿತಿಗಳೂ ಆಗಿಂದಾಗ್ಗೆ ಹೆಚ್ಚು ಕಡಿಮೆಯಾಗುವುದರಿಂದ ಪಿತ್ತದ ಚಯಪ್ರಕೋಪಶಮನಗಳ ಕಾರಣವನ್ನೂ, ಅದರ ಪರಿಹಾರವನ್ನೂ ಹೇಳಲಾಗಿದೆ.

೧೦೩. ಮತ್ತು ಬೇಸಗೆಯ ಕಾಲದಲ್ಲೂ, ವರ್ಷಾಕಾಲದಲ್ಲೂ, ಶರತ್ಕಾಲದಲ್ಲೂ ವಾತವು ಚಯಪ್ರಕೋಪಶಮನಗಳನ್ನು ಹೊಂದುವ ರೀತಿಯೂ ಸಹ ಮೇಲೆ ಹೇಳಲ್ಪಟ್ಟಿತು. ಇದೇ ಮೇರೆ ಆಯಾಯ ಕಾಲಗಳಲ್ಲಿ ಶ್ಲೇಷ್ಮವು ಚಯಪ್ರಕೋಪ ಶಮನಗಳನ್ನು ಹೊಂದುವ ರೀತಿಯೂ ಸಹ ವಿವರಿಸಲ್ಪಟ್ಟಿತು.

**ಸಂವತ್ಸರೋ ದ್ವಾದಶಾಂಗೋ ಮಾಸಭೇದೇನ ಕೀರ್ತಿತಃ ।**
**ದ್ವಿಧಾ ತು ಮತಭೇದೇನ ಭೂಯ ಏವ ಪ್ರಕೀರ್ತಿತಃ ॥ ೧೦೪ ॥**

**ಆದಾನಶ್ಚ ವಿಸರ್ಗಶ್ಚ ತತ್ರಾಪಿ ಪರಿಕೀರ್ತಿತೌ ।**
**ವರ್ಷಾದಯೋ ವಿಸರ್ಗಾಶ್ಚ ಹೇಮಂತಾದ್ಯಾಃ ಸ್ಮೃತಾಸ್ತ್ರಯಃ ॥ ೧೦೫ ॥**

**ಮೇಘಕಾಲೇ ಚ ಶರದಿ ಹೇಮಂತೇ ಚ ಯಥಾಕ್ರಮಾತ್ ।**
**ಚಯಪ್ರಕೋಪಪ್ರಶಮಸ್ತಥಾ ಪಿತ್ತಸ್ಯ ಕೀರ್ತಿತಃ ॥ ೧೦೬ ॥**

**ಶಿಶಿರಾದ್ಯಾಸ್ತಥಾದಾನಂ ಗ್ರೀಷ್ಮಾಂತಾ ಋತವಸ್ತ್ರಯಃ ।**
**ಸೌಮ್ಯೋ ವಿಸರ್ಗಸ್ತ್ವಾದಾನಂ ಚಾಗ್ನೇಯ್ಯಂ ಪರಿಕೀರ್ತಿತಂ ॥ ೧೦೭ ॥**

**ವರ್ಷಾದೀನ್ಸ್ತ್ರೀನೃತೂನ್ನಾಮ ಚತುಃ ಪರ್ಯಾಯಗೋರಸಾನ್ ।**
**ವಿವರ್ಧಯೇತ್ತಥಾ ತಿಕ್ತಕಷಾಯಕಟುಕಾನ್ಕ್ರಮಾತ್ ॥ ೧೦೮ ॥**

---

೧೦೪. ಸಂವತ್ಸರವು ಹನ್ನೆರಡು ಮಾಸಗಳ ರೂಪವಾಗಿ ವಿಭಾಗಿಸಲ್ಪಟ್ಟಿದೆ. (ದ್ವಾದಶಾಂಗ). ಮತ್ತು ಈ ಸಂವತ್ಸರಗಳು ಎರಡು ಅಯನಗಳಾಗಿ (ದಕ್ಷಿಣೋತ್ತರಾಯನಗಳು) ವಿಭಾಗಿಸಲ್ಪಟ್ಟಿದೆ.

೧೦೫. ಈ ಎರಡು ಅಯನಗಳನ್ನೂ ಆದಾನವೆಂದೂ ವಿಸರ್ಗವೆಂದೂ ಕರೆಯಬಹುದು. ವರ್ಷಋತುವಿನಿಂದಾರಂಭಿಸಿ ಮೂರು ಋತುಗಳು ವಿಸರ್ಗವೆಂದೂ ಹೇಮಂತಾದಿ ಮೂರು ಋತುಗಳು ಆದಾನವೆಂದೂ ಹೇಳಲ್ಪಟ್ಟಿವೆ.

೧೦೬. ವರ್ಷಋತು-ಶರದೃತು-ಹೇಮಂತಋತುಗಳಲ್ಲಿ ಹೆಚ್ಚಾಗಿದ್ದ ಪಿತ್ತವು ಕ್ರಮೇಣ ಇಳಿಮುಖಕ್ಕೆ ಬರುವುದು (ಇದು ವಿಸರ್ಗ.)

೧೦೭. ಶಿಶಿರಋತು ವಸಂತ ಗ್ರೀಷ್ಮಋತುಗಳಲ್ಲಿ ಇದು ಕ್ರಮವಾಗಿ ಹೆಚ್ಚಾಗುತ್ತಾ ಬರುವುದು. ಹೀಗೆ ಸೌಮ್ಯವಾಗಿದ್ದ ಪಿತ್ತವು ಹೆಚ್ಚುವ ಕ್ರಮವೇ ಆದಾನವೆಂದೂ ಭಾವಿಸಲ್ಪಟ್ಟಿದೆ.

೧೦೮. ಆದ್ದರಿಂದ ವರ್ಷಋತುವಿನಿಂದಾರಂಭಿಸಿ ಮೂರು ಋತುಗಳವರೆಗೆ ಚತುಃಪರ್ಯಾಯವಾಗಿ ಗೋರಸಗಳನ್ನು ಹೆಚ್ಚಿಗೆ ಉಪಯೋಗಿಸುತ್ತಾ ತಿಕ್ತಕಟುಕಷಾಯಗಳನ್ನು ಕ್ರಮವಾಗಿ ಉಪಯೋಗಿಸುತ್ತಾ ಬರಬೇಕು.

ಯಥಾ ರಜನ್ಯೋ ವರ್ಧಂತೇ ಬಲಮೇವಂ ವಿವರ್ಧತೇ ।
ಕ್ರಮಶೋಽಥ ಮನುಷ್ಯಾಣಾಂ ಹೀಯಮಾನಾಸು ಹೀಯತೇ ॥ ೧೦೯ ॥

ರಾತ್ರಿಭುಕ್ತಂ ದಿನಾಂತೇ ತು ದಿವಸಸ್ಯ ತಥೈವ ಚ
ಆದಿಮಧ್ಯಾವಸಾನೇಷು ಕಫಪಿತ್ತಸಮಿರಣಾಃ ॥ ೧೧೦ ॥

ಪ್ರಕೋಪಂ ಯಾಂತಿ ಕೋಪಾದೌ ಕಾಲೇ ಯೇಷಾಂ ಚಯಃ ಸ್ಮೃತಃ ।
ಪ್ರಕೋಪಾಂತರಜೇ ಕಾಲೇ ಶಮಸ್ತೇಷಾಂ ಪ್ರಕೀರ್ತಿತಃ ॥ ೧೧೧ ॥

ಅತಿಭೋಜನತೋ ರಾಮ ತಥಾ ಚಾ ಭೋಜನೇನ ಚ ।
ಸರ್ವೇಽಪಿ ರೋಗಾ ಜಾಯಂತೇ ವೇಗೋದೀರಣಧಾರಣೈಃ ॥ ೧೧೨ ॥

---

೧೦೯. ಆ ಪಿತ್ತಾದಿರೋಗಗಳು ರಾತ್ರಿ ಹೆಚ್ಚುತ್ತಾ ಬಂದಂತೆ ರೋಗಬಲವೂ ಹೆಚ್ಚುತ್ತಾ ಬರುವುದು. ಮನುಷ್ಯರು ಇದರಿಂದ ಹೀನಸ್ಥಿತಿಗೆ ಬಂದಂತೆಲ್ಲ ರೋಗವೂ ಹೀನಸ್ಥಿತಿಗೆ ಬರುವುದು.

೧೧೦. ರಾತ್ರಿ ಮಾಡಿದ ಊಟವು ಮಾರನೇ ದಿನ ಸಾಯಂಕಾಲದ ಹೊತ್ತಿಗೆ ಕಫ, ಪಿತ್ತ, ವಾಯುರೂಪಗಳಾಗಿ ಪರಿಣಮಿಸುವುವು. ಹಗಲು ಮಾಡಿದ ಊಟವು ಮಾರನೆಯ ದಿನ ಹಗಲು ಸಮಯಕ್ಕೆ ಪರಿವರ್ತನವಾಗುವುದು.

೧೧೧. ಕೋಪಾದಿ ಕಾಲಗಳಲ್ಲಿ ಈ ತ್ರಿಧಾತುಗಳೂ ಪ್ರಕೋಪವಾಗುವುವು. ಕೋಪಪ್ರಕೋಪಕಾಲಗಳ ಮಧ್ಯದಲ್ಲಿ ಧಾತುಗಳು ಶಾಂತವಾಗಿರುವುವು.

೧೧೨. ಹೆಚ್ಚಾಗಿ ಊಟಮಾಡಿದ ಕಾಲಗಳಲ್ಲೂ ಬರೀ ಹೊಟ್ಟೆಯಲ್ಲಿ ಉಪವಾಸವಿದ್ದ ಕಾಲಗಳಲ್ಲೂ ವೇಗ, ಉದೀರಣ, ಧಾರಣಾದಿಗಳಿಂದ ಸಕಲ ರೋಗಗಳೂ ಉತ್ಪತ್ತಿಯಾಗುತ್ತವೆ.

ಟಿಪ್ಪಣಿ: ಭಗವದ್ಗೀತೆಯಲ್ಲಿ ಈ ವಿಚಾರವನ್ನು ಕುರಿತು,

ನಾತ್ಯಶ್ನತಸ್ತು-ಯೋಗೋಸ್ತಿ ನಚೈಕಾಂತಮನಶ್ನತಃ ।
ನಚಾತಿಸ್ವಪ್ನಶೀಲಸ್ಯ ಯೋಗೋಭವತಿ ದುಃಖಹಾ ॥

ಎಂದು ಹೇಳಿರುವರು. ಅಂದರೆ ಅತಿಯಾಗಿ ಭೋಜನ ಮಾಡದೆ, ಉಪವಾಸವೂ ಮಾಡದೆ, ಅತಿನಿದ್ದೆಯನ್ನು ಮಾಡದೆ ಯಾವನಿರುವನೋ, ಅಂತಹವನು ದುಃಖವನ್ನು ದೂರಮಾಡಬಲ್ಲನು. ಅಂತಹವನಿಗೆ ರೋಗಾದಿ ಬಾಧೆಗಳು ತಟ್ಟಲಾರವೆಂದರ್ಥ.

**ಅನ್ನೇನ ಕುಕ್ಷೇರ್ದ್ವಾವಂಶೌ ಪಾನೇನೈಕಂ ಪ್ರಪೂರಯೇತ್ ।**
**ಆಶ್ರಯಂ ಪವನಾದೀನಾಂ ತಥೈಕಮವಶೇಷಯೇತ್ ॥ ೧೧೩ ॥**

**ವ್ಯಾಧೇರ್ನಿದಾನಸ್ಯ ತಥಾ ವಿಪರೀತಮಥೌಷಧಂ ।**
**ಕರ್ತವ್ಯಮೇತದೇವಾತ್ರ ಮಯಾ ಸಾರ್ಧಂ ಪ್ರಕೀರ್ತಿತಂ । ॥ ೧೧೪ ॥**

**ನಾಭೇರೂರ್ಧ್ವಮಧಶ್ಚೈವ ಗುದಶ್ರೋಣ್ಯೋಸ್ತಥೈವ ಚ**
**ಬಲಾಸಪಿತ್ತವಾತಾನಾಂ ದೇಹೇ ಸ್ಥಾನಂ ಪ್ರಕೀರ್ತಿತಂ ॥ ೧೧೫ ॥**

**ತಥಾಪಿ ಸರ್ವಗಾ ಏತೇ ದೇಹೇವಾಯುರ್ವಿಶೇಷತಃ ।**
**ದೇಹಸ್ಯ ಮಧ್ಯೇ ಹೃದಯಂ ಸ್ಥಾನಂ ತು ಮನಸಃ ಸ್ಮೃತಂ ॥ ೧೧೬ ॥**

---

೧೧೩. ಹೊಟ್ಟೆಯಲ್ಲಿ ಎರಡು ಭಾಗವನ್ನು ಅನ್ನದಿಂದಲೂ, ಒಂದು ಭಾಗವನ್ನು ನೀರಿನಿಂದಲೂ ತುಂಬಬೇಕಲ್ಲದೆ, ಇನ್ನೊಂದು ಭಾಗವನ್ನು ವಾಯುಸಂಚಾರಕ್ಕೆ ಅವಕಾಶವಿರುವಂತೆ ಮಾಡಬೇಕು.

೧೧೪. ಈ ರೀತಿ ಮಾಡದೆ ಹೊಟ್ಟೆಗೆ ಯದ್ವಾತದ್ವವಾಗಿ ಏನೇನನ್ನೋ ತುಂಬಿ ಕೆಡಿಸಿಕೊಂಡು ಬಿಟ್ಟರೆ ರೋಗಗಳು ಆ ಭಾಗದಲ್ಲಿ ಕಾಲುಹಾಕಿಕೊಳ್ಳುತ್ತವೆ. ಆಗ್ಗೆ ಇದಕ್ಕೆ ಪರಿಹಾರ (ವಿಪರೀತ) ರೂಪವಾದ ಔಷಧಗಳನ್ನು ಮಾಡಬೇಕಾಗಿ ಬರುತ್ತದೆ. ಇದುವರೆಗೆ ನಾನು ಇದಕ್ಕಾಗಿಯೇ ಔಷಧ ಮಾಡಬೇಕೆಂಬ ವಿಚಾರವನ್ನು ನಿನಗೆ ಹೇಳಬೇಕಾಗಿ ಬಂತು.

೧೧೫. ಈ ನಮ್ಮ ದೇಹದೊಳಗಡೆ ಹೊಕ್ಕಳ ಮೇಲೂ ಕೆಳಗೂ, ಗುದ ಮತ್ತು ಶ್ರೋಣೀ ಪ್ರದೇಶಗಳಲ್ಲೂ ವಾತ, ಕಫಗಳು ವಾಸಮಾಡಿಕೊಂಡಿರುವುದೆಂದು ಎಲ್ಲರೂ ಮುಖ್ಯವಾಗಿ ಅರಿತಿರಬೇಕು.

೧೧೬. ಈ ತ್ರಿಧಾತುಗಳಿಗೆ ಮಾತ್ರ ಇಷ್ಟೇ ಸ್ಥಳವಾದಾಗ್ಯೂ ವಾಯುವು, ಮಾತ್ರ ವಿಶೇಷವಾಗಿ ದೇಹದ ಸಕಲ ಭಾಗಗಳಲ್ಲಿಯೂ ಇರುತ್ತದೆ. ಈ ದೇಹದ ಮಧ್ಯದಲ್ಲಿರುವ ಹೃದಯವೇ (ಎದೆ) ಮನಸ್ಸಿರುವ ಸ್ಥಳವೆಂದರಿತಿರಬೇಕು.

ಟಿಪ್ಪಣಿ : ವಾಯು ಸಂಚಾರ (ಉಸಿರು) ನಿಂತುಹೋದೊಡನೆಯೇ ಈ ಶರೀರದ ಚಲನವಲನಗಳು ನಿಂತು ಆ ವಾಯುವಿನೊಡನೆ ಪ್ರಾಣಾದಿ ಸಕಲ ವಾಯುಗಳೂ

ದೇಹವನ್ನು ಬಿಟ್ಟು ಹೊರಟುಹೋಗುವುವು. ಆಗ ಈ ಪ್ರಾಣವಿಲ್ಲದ ದೇಹವನ್ನು ಹೆಣ (ಶವ) ವೆಂದು ಹೇಳುವರು. ಆಗ ಮೇಲೆ ಹೇಳಿದಂತೆ ಹೃದಯ ಸ್ಥಾನದಲ್ಲಿ ವಾಸಮಾಡಿಕೊಂಡಿದ್ದ (ಅನಾಹತಚಕ್ರ) ಮನಸ್ಸು (ಜೀವವು) ದೇಹದಿಂದ ಹೊರಕ್ಕೆ ಸೂಕ್ಷ್ಮಗತಿ (ಅದೃಶ್ಯಗತಿ) ಯಿಂದ ಹೊರಟುಹೋಗುವುದು. ಬದುಕಿರುವವರೆಗೂ ವಾಯುವು ದೇಹಾದ್ಯಂತವನ್ನೂ ವ್ಯಾಪಿಸಿಕೊಂಡಿರುವುದೆಂದು ಈ ಶ್ಲೋಕದಲ್ಲಿ ಹೇಳಿದೆಯಷ್ಟೆ ? ಈ ವಾಯುಗಳಸ್ವರೂಪವನ್ನೂ ಅವು ದೇಹದಲ್ಲಿದ್ದು ಸರ್ವದಾ ಮಾಡುತ್ತಿರುವ ಕರ್ಮಗಳನ್ನೂ ಸಹ ಎಲ್ಲರೂ ತಿಳಿದಿರಬೇಕಾದುದು ಅತ್ಯವಶ್ಯಕವಾದುದರಿಂದ ಅದನ್ನಿಲ್ಲಿ ವಿವರಿಸುವೆನು. ವಾಯುಗಳು ಐದು ವಿಧ. ಇದಕ್ಕೆ ಪವನಪಂಚಕವೆಂದು ಹೆಸರು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಗಳೆಂದು ಅವುಗಳಿಗೆ ಹೆಸರುಗಳಿವೆ. ನಾವು ಪ್ರಾಣಾಹುತಿ ಹಾಕಿಕೊಳ್ಳುವಾಗ ಓಂ ಪ್ರಾಣಾಯಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯಸ್ವಾಹಾ, ಬ್ರಹ್ಮಣೇ ಸ್ವಾಹಾ ಎಂದು ೫ ವಾಯುಗಳಿಗೂ ಆಹುತಿ ಗಳನ್ನು ಮೊದಲು ಕೊಟ್ಟು, ಬಳಿಕ ಊಟಕ್ಕೆ ಕುಳಿತುಕೊಳ್ಳುತ್ತೇವೆ. ಚಿತ್ರಾಹುತಿಗಳ ನ್ನಿಟ್ಟಬಳಿಕ (ಚಿತ್ರ, ಚಿತ್ರಗುಪ್ತ, ಯಮ, ಧರ್ಮರಾಜ, ಸರ್ವಭೂತ) ಅವುಗಳನ್ನು ಕೂಡಿಸುವಾಗ ಅದರ ಮೇಲೆ ನೀರನ್ನು ಹಾಕಿ, ಈ ಶ್ಲೋಕವನ್ನು ಹೇಳುತ್ತೇವೆ.

ಶ್ಲೋಕ :—ಯತ್ರಕ್ವಚನ ಭೂತಾನಾಂ ಕ್ಷುತ್ತೃಷ್ಣೋಪಹತಾತ್ಮನಾಂ ।
ಭೂತಾನಾಂ ತೃಪ್ತಯೇ ತೋಯ ಮಿದಮಸ್ತುಯಥಾಸುಖಂ ॥

ಎಂಬ ಶ್ಲೋಕವನ್ನು (ಮಂತ್ರ) ಹೇಳಿ ಕೂಡಿಸುತ್ತೇವೆ. ಹೊಟ್ಟೆ ಹಸಿವು ಬಾಯಾರಿಕೆ ಗಳಿಂದ ಕಂಗಾಲಾಗಿ ಸಂಕಟಪಡುತ್ತಿರುವ ಭೂತಗಳಿಗೆ ಈ ನೀರು ಸಿಕ್ಕಿ ಅವುಗಳಿಗೆ ತೃಪ್ತಿಯಾಗಲೆಂದರ್ಥ. ಪರಿಷೇಚನೆಮಾಡಿ ಆಪೋಶನ ತೆಗೆದುಕೊಂಡು ಊಟಕ್ಕೆ ಕೂಡುವವರಿಗೂ ಹೇಳುವ ಮಂತ್ರಗಳಲ್ಲಿ ಅನೇಕ ತತ್ವಾರ್ಥಗಳಿವೆ. ಇವುಗಳ ಅರ್ಥವನ್ನು ವಿವೇಚಿಸುವುದಾದರೆ ಆಚಾರ, ಧರ್ಮಶಾಸ್ತ್ರ, ಆರೋಗ್ಯ, ವೈದ್ಯಶಾಸ್ತ್ರ (ಭೌತಿಕಶಾಸ್ತ್ರ-ಸೈನ್ಸ್), ಪ್ರಕೃತಿಶಾಸ್ತ್ರಗಳಿಗೆ ತೀರಾ ನಿಕಟಸಂಬಂಧವಿರುವ ವಿಷಯವು ನಮ್ಮ ಮನಸ್ಸಿಗೆ ಹೊಳೆಯುವುದಲ್ಲವೇ ?)

ಪ್ರಾಣದಿಂದಲೇ (ವಾಯು) ದೇಹವಿರುವುದರಿಂದ ಈ ವಾಯುವಿಗೆ ಸಮೀರ-ಮಾರುತ - ಮರುತ್ - ಜಗತ್ಪ್ರಾಣ - ಸಮೀರಣ-ನಭಸ್ವಾನ್ ವಾತ -ಪವನ-ಪವಮಾನ-ಪ್ರಭಂಜನನೇ ಮುಂತಾದ ಅನೇಕ ಅನ್ವರ್ಥನಾಮಗಳಿವೆ. ಪ್ರಾಣವಾಯುವು ಹೃದಯ ದಲ್ಲಿಯೂ, ಗುದಸ್ಥಾನದಲ್ಲಿ ಅಪಾನವಾಯುವೂ, ನಾಭಿಸ್ಥಾನದಲ್ಲಿ ಸಮಾನ ವಾಯುವೂ, ಕಂಠದೇಶದಲ್ಲಿ ಉದಾನವಾಯುವೂ, ವ್ಯಾನವಾಯುವು ಸಕಲ ಶರೀರ

**ಕೃಶೋಲ್ಪಕೇಶಶ್ಚಪಲೋ ಬಹುವಾಗ್ವಿಷಮಾನಲಃ ।**
**ವ್ಯೋಮಗಶ್ಚ ತಥಾ ಸ್ವಪ್ನೇ ವಾತಪ್ರಕೃತಿರುಚ್ಯತೇ ॥ ೧೧೭ ॥**

---

ದಲ್ಲಿಯೂ ವಾಸವಾಗಿದ್ದುಕೊಂಡು, ಈ ರೀತಿ ಪವನಪಂಚಕ ಸಹಾಯದಿಂದಲೇ ಬದುಕಿಕೊಂಡಿವೆಯೆಂದೂ, ಇಂತಹ ವಾಯುಭೂತವು ಭಗವಂತನ ಅಧೀನದಲ್ಲಿದೆ ಯೆಂದೂ ತಿಳಿದಿರಬೇಕು. ಇದಕ್ಕೆ ಪ್ರಮಾಣ (ಆಧಾರ) ಶ್ಲೋಕವು :—

ತ್ವಮಿಹದೇಹಭೃತಾಂಶಿಖಿರೂಪಃ
ಪಚಸಿಭುಕ್ತಮಶೇಷಮಜಸ್ರಂ ।
ಪವನಪಂಚಕರೂಪಸಹಾಯೋ
ಜಗದಖಂಡಮನೇನಬಿಭರ್ಷಿ ॥

(ಅಧ್ಯಾತ್ಮರಾಮಾಯಣ-ಯುದ್ಧಕಾಂಡ.)

ಅರ್ಥ:—ಸ್ವಾಮಿ! ಪರಮಾತ್ಮಾ! ನೀನು ಜಠರಾಗ್ನಿರೂಪದಿಂದ ಎಲ್ಲ ಪ್ರಾಣಿಗಳ ಹೃದಯದಲ್ಲೂ ಇದ್ದು ಪಂಚವಾಯುಗಳ ಸಹಾಯದಿಂದ ಪ್ರಾಣಿಗಳು ಉಂಡ ಅನ್ನವನ್ನು ಪಚನ (ಅರಗಿಸು) ಮಾಡಿಸುತ್ತಿದೀಯೆ. ಇದರಿಂದ ಲೋಕವೆಲ್ಲವೂ (ಪಂಚಭೂತಗಳೂ) ನಿನ್ನ ಅಧೀನವಾಗಿವೆಯಯ್ಯಾ! ಮಹಾನುಭಾವ! ಇನ್ನು ಉಪವಾಯುಗಳ ವಿಚಾರವನ್ನು ಬರೆಯೋಣ:—ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯವೆಂಬುವುಗಳೇ ಐದು ಉಪವಾಯುಗಳು. ಮಾತನಾಡುವುದಕ್ಕೆ ಸಹಾಯ ಮಾಡುವುದೇ ನಾಗವಾಯುವು. ಕಣ್ಣುರೆಪ್ಪೆ ಹೊಡಿಯುವುದೇ ಕೂರ್ಮವಾಯುವು. ಹೊಟ್ಟೆಹಸಿವನ್ನುಂಟುಮಾಡುವುದೇ ಕೃಕರವಾಯು. ಆಕಳಿಸುವುದೇ ಮುಂತಾದ ಕಾರ್ಯದಲ್ಲಿ ಸಹಾಯಮಾಡುವ ವಾಯುವೇ ದೇವದತ್ತವೆನಿಸುವುದು. ಧನಂಜಯ ವೆಂಬುವುದೇ ದೇಹಾದ್ಯಂತವನ್ನೂ ವ್ಯಾಪಿಸಿಕೊಂಡಿದ್ದು ಮನುಷ್ಯನು ಸತ್ತ ಮೇಲೂ ಆ ದೇಹದಲ್ಲಿದ್ದೇ ಇರುತ್ತದೆ. ಆದರೆ ಇತರ ವಾಯುಗಳ ಸಹಾಯವಿಲ್ಲದೆ ಇದಕ್ಕೆ ಕೆಲಸಮಾಡುವ ಶಕ್ತಿಯಿರುವುದಿಲ್ಲವಾದ್ದರಿಂದ ಇದು ದಹನಪರ್ಯಂತರ ಇದ್ದು ದೇಹವು ಭಸ್ಮವಾದ ಮೇಲೆ ವಾಯುಮಂಡಲದಲ್ಲಿ ಸೇರಿಹೋಗುವುದು. ಈ ರೀತಿ ಈ ಐದು ವಾಯುಗಳೂ ದೇಹದಲ್ಲಿ ಸೇರಿರುವುದರಿಂದಲೇ ವೇಗದಿಂದ ಮನುಷ್ಯನು ಗಮನ ನಿರ್ಗಮನ ಮಾಡಲು ಶಕ್ತಿಯನ್ನು ಹೊಂದಿರುವನೆಂದು ತಿಳಿಯಬೇಕು.

೧೧೭. ಮಂದಾಗ್ನಿಯುಳ್ಳವನು (ಜೀರ್ಣಶಕ್ತಿಯಿಲ್ಲದವನು) ಕೃಶನಾಗಿಯೂ, ಸ್ವಲ್ಪ ಕೂದಲುಳ್ಳವನೂ, ಚಪಲನೂ, ಬಹಳ ಮಾತನ್ನಾಡುವವನೂ ಆಗಿರುತ್ತಾನೆ. ಇವನಿಗೆ ವಾಯುಪ್ರಕೋಪವಾಗಿರುವುದರಿಂದ ಕನಸಿನಲ್ಲಿ ಆಕಾಶದಲ್ಲಿ ಗಮನ ಮಾಡುವಂತೆ ಕಾಣುತ್ತಿರುತ್ತದೆ. (ಇದು ವಾತಪ್ರಕೃತಿಯುಳ್ಳವನ ಮಾತು.)

**ಅಕಾಲಪಲಿತಃ ಕ್ರೋಧೀ ಪ್ರಸ್ವೇದೀ ಮಧುರಪ್ರಿಯಃ ।**
**ಸ್ವಪ್ನೇ ಚ ದೀಪ್ತಿಮತ್ಪ್ರೇಕ್ಷೀ ಪಿತ್ತಪ್ರಕೃತಿರುಚ್ಯತೇ ॥ ೧೧೮ ॥**

**ದೃಢಾಂಗಃ ಸ್ಥಿರಚಿತ್ತಶ್ಚ ಸುಪ್ರಜಃ ಸ್ಥಿರಮೂರ್ಧಜಃ ।**
**ಶುಕ್ಲಾಂಬುದರ್ಶೀ ಸ್ವಪ್ನೇ ಚ ಕಫಪ್ರಕೃತಿಕೋ ನರಃ ॥ ೧೧೯ ॥**

**ತಾಮಸಾ ರಾಜಸಾಶ್ಚೈವ ಸಾತ್ವಿಕಾಶ್ಚ ತಥಾ ಸ್ಮೃತಾಃ ।**
**ಮಾನುಷಾ ಭೃಗುಶಾರ್ದೂಲ ವಾತಪಿತ್ತಕಫಾಧಿಕಾಃ ॥ ೧೨೦ ॥**

**ರೂಕ್ಷಶೀತವ್ಯವಾಯಾಧ್ವ ಗುರು ಕರ್ಮ ಪ್ರವರ್ತನೇ ।**
**ಕದನ್ನಭೋಜನಾದ್ವಾಯುರ್ದೇಹೇ ಶೋಕಾಚ್ಚ ಕುಪ್ಯತಿ ॥ ೧೨೧ ॥**

---

೧೧೮. ಪಿತ್ತಪ್ರಕೃತಿವುಳ್ಳವನ ಕೂದಲು ಬೇಗ ನರೆತು ಹೋಗುತ್ತದೆ. ಕೋಪವು ಅವನಿಗೆ ಹೆಚ್ಚಾಗಿರುತ್ತದೆ. ಮೈ ಬೆವರುತ್ತಿರುತ್ತದೆ. ಸೀ ಪದಾರ್ಥಗಳು ಅವನಿಗೆ ಬಲುಇಷ್ಟ. ಸ್ವಪ್ನದಲ್ಲಿ ಇವನು ಬೆಂಕಿಯನ್ನು ನೋಡುತ್ತಿರುತ್ತಾನೆ. ಇಂತಹವನನ್ನು ನಾವು ಪಿತ್ತಪ್ರಕೃತಿಯುಳ್ಳವನೆಂದು ತಿಳಿಯುತ್ತೇವೆ. (ಇವನು ಪಿತ್ತ ಪ್ರಕೃತಿಯವನು.)

೧೧೯. ಶ್ಲೇಷ್ಮಪ್ರಕೃತಿಯುಳ್ಳವನ ಸ್ವಭಾವವನ್ನಿನ್ನೂ ವಿವರಿಸುತ್ತೇನೆ. ಇವನು ದೃಢಾಂಗನಾಗಿಯೂ, ಸ್ಥಿರಚಿತ್ತವುಳ್ಳವನಾಗಿಯೂ, ಒಳ್ಳೇ ಸಂತತಿಯುಳ್ಳವನಾಗಿಯೂ, ಸ್ಥಿರವಾದ (ಬೇಗ ಉದುರದೆ ಇರುವ) ತಲೆಕೂದಲುಳ್ಳವನಾಗಿಯೂ, ಸ್ವಪ್ನದಲ್ಲಿ ಶುಕ್ಲಾಂಬರದರ್ಶಿಯಾಗಿಯೂ ಇರುವನು.

೧೨೦. ವಾತ, ಪಿತ್ತ, ಶ್ಲೇಷ್ಮಗಳು ಹೆಚ್ಚಾದ ಪ್ರಮಾಣದಲ್ಲಿರುವವರನ್ನು ತಾಮಸ-ರಾಜಸ-ಸಾತ್ವಿಕರೆಂದು ಹೇಳಬಹುದು.

೧೨೧. ಕಠಿನಕೆಲಸಮಾಡುವುದರಿಂದಲೂ, ಶೀತದಲ್ಲೋಡಾಡುವುದರಿಂದಲೂ, ಅತ್ಯಂತ ಮೈಥುನಮಾಡುವುದರಿಂದಲೂ, ಹೆಚ್ಚಾಗಿ ದಾರಿನಡೆಯುವುದರಿಂದಲೂ, ಕದನ್ನಭೋಜನಮಾಡುವುದರಿಂದಲೂ, ಅತ್ಯಂತ ದುಃಖದಿಂದಲೂ ದೇಹವಾಯುವು, ಪ್ರಕೋಪವಾಗುತ್ತದೆ.

**ವಿದಾಹಿನಾಂ ತಥೋಷ್ಣಾನಾಮುಚ್ಚೈರಧ್ವನಿಷೇವಿಣಾಂ ।**
**ಪಿತ್ತಂ ಪ್ರಕೋಪಮಾಯಾತಿ ಭಯೇನ ಚ ತಥಾ ದ್ವಿಜ ॥ ೧೨೨ ॥**

**ಅತ್ಯಂಬುಪಾನವಿಷಮಭೋಜಿನಾಂ ಭುವಿ ಶಾಯಿನಾಂ ।**
**ಶ್ಲೇಷ್ಮಾ ಪ್ರಕೋಪಮಾಯಾತಿ ತಥಾ ಯೇ ಚಾಲ್ಪಭೋಜನಾಃ ॥ ೧೨೩ ॥**

**ವಾತಪಿತ್ತಕಫೋತ್ಥಾನಿ ಸರ್ವರೋಗಾಣಿ ದೇಹಿನಾಮ್ ।**
**ಲಕ್ಷಯೇಲ್ಲಕ್ಷಣಂ ವಿದ್ವಾಞ್ಶಮಯೇತ್ತದನನ್ತರಮ್ ॥ ೧೨೪ ॥**

**ಅಸ್ಥಿಭಙ್ಗಃ ಕಷಾಯಿತ್ವಮಾಸ್ಯೇ ಶುಷ್ಕಾಸ್ಯತಾ ತಥಾ ।**
**ಜೃಮ್ಭಣಂ ಲೋಮಹರ್ಷಶ್ಚ ವಾತಿಕವ್ಯಾಧಿ ಲಕ್ಷಣಮ್ ॥ ೧೨೫ ॥**

---

೧೨೨. ಸುಡುಸುಡುವ ಪದಾರ್ಥಗಳನ್ನುಪಯೋಗಿಸುವದರಿಂದಲೂ ಉಷ್ಣಾಧಿಕ್ಯದಿಂದಲೂ ವಿಪರೀತವಾಗಿ ಸಂಚಾರಮಾಡುವುದರಿಂದಲೂ, ಅತ್ಯಂತ ಭಯದಿಂದಲೂ ದೇಹದಲ್ಲಿ ಪಿತ್ತವು ಉಲ್ಬಣವಾಗುತ್ತದೆ.

೧೨೩. ವಿಪರೀತ ನೀರು ಕುಡಿಯುವುದರಿಂದಲೂ ಮಿತಿಮೀರಿ ಭೋಜನ ಮಾಡುವುದರಿಂದಲೂ, ನೆಲದ ಮೇಲೆ ಮಲಗಿ ನಿದ್ರಿಸೋಣದರಿಂದಲೂ ಸ್ವಲ್ಪವೇ ಆಹಾರವನ್ನು ತೆಗೆದುಕೊಳ್ಳೋಣದರಿಂದಲೂ ಶ್ಲೇಷ್ಮವು ಪ್ರಕೋಪವಾಗುತ್ತದೆ.

೧೨೪. ದೇಹದಲ್ಲಿ ಉತ್ಪತ್ತಿಯಾಗುವ ವಾತ, ಪಿತ್ತ, ಕಫಾದಿ ರೋಗಗಳನ್ನು ಲಕ್ಷಣದಿಂದಲೇ ತಿಳಿದುಕೊಂಡ ಮೇಲೆ ವೈದ್ಯನಾದವನು, ಅದರ ನಿವಾರಣೆಗೆ ತಕ್ಕ ಔಷಧವನ್ನು ಕೊಡಲು (ಚಿಕಿತ್ಸೆಗೆ) ಆರಂಭಮಾಡಬೇಕು.

೧೨೫. ವಾತರೋಗದ ಲಕ್ಷಣವನ್ನೀಗ ಹೇಳುತ್ತೇನೆ. ಅಸ್ಥಿಭಂಗವಾಗೋಣ ಮುಖ ಬೆವರುವುದು, ಮುಖ ಬಾಡುವುದು, ಆಕಳಿಕೆ, ಮೈಕೂದಲು ನಿವಿರೇಳುವುದೇ ಮುಂತಾದುವು ವಾತರೋಗ ಲಕ್ಷಣಗಳು.

**ನಖನೇತ್ರಶಿರಾಣಾಂ ಚ ಪೀತತಾ ಕಟುತಾ ಮುಖೇ ।**
**ತೃಷ್ಣಾ ದಾಹೋಽಮ್ಲತಾ ಚೈವ ಪಿತ್ತವ್ಯಾಧಿ ನಿದರ್ಶನಮ್ ॥ ೧೨೬ ॥**

**ಆಲಸ್ಯಂ ಚ ಪ್ರಸೇಕಶ್ಚ ಗುರುತಾ ಮಧುರಾಸ್ಯತಾ ।**
**ಉಷ್ಣಾಭಿಲಾಷಿತಾ ಚೇತಿ ಶ್ಲೈಷ್ಮಿಕಂ ವ್ಯಾಧಿಲಕ್ಷಣಮ್ ॥ ೧೨೭ ॥**

**ಸ್ನಿಗ್ಧೋಷ್ಣಮನ್ನಂ ಸಸುಖಾ ಚ ಶಯ್ಯಾ ಮನೋಽನುಕೂಲಾಃ ಸುಹೃದಃ ಕಥಾಶ್ಚ ।**
**ಅಭ್ಯಙ್ಗನಂ ಚಾಪ್ಯತಿ ತೈಲಪಾನಂ ವಾತಪ್ರಕೋಪಪ್ರಶಮಾಯ ದೃಷ್ಟಂ ॥**

**ಸರಾಂಸಿ ವಾಪ್ಯಃ ಸರಿತಃ ಸುಶೀತಾ ।**
**ಶ್ಚಂದ್ರಾಂಶವಶ್ಚಂದನಪಙ್ಕಲೇಪಾಃ ॥**

---

೧೨೬. ಪಿತ್ತವ್ಯಾಧಿಯ ಲಕ್ಷಣವನ್ನೀಗ ವಿವರಿಸುತ್ತೇನೆ. ಉಗುರು-ಕಣ್ಣು-ತಲೆಗಳು ಹಳದಿಯ ಬಣ್ಣಕ್ಕೆ ತಿರುಗೋಣ ಮುಖದಲ್ಲಿ ಕಟುತ್ವ (ಕಪ್ಪು), ಬಹಳ ದಾಹವಾಗೋಣ, ಹುಳಿದೇಗು, ಇವೆಲ್ಲವುಗಳೂ ಪಿತ್ತರೋಗಕ್ಕೆ ನಿದರ್ಶನಗಳು.

೧೨೭. ಶ್ಲೇಷ್ಮರೋಗ ಲಕ್ಷಣವೇನೆಂದರೆ:—ಆಲಸ್ಯ-ಪ್ರಕೋಪ-ಮೈ ಕೈ ಭಾರ-ಮಧುರಾಸ್ಯತ್ವ-ಉಷ್ಣಾಭಿಲಾಷಿತ್ವವೆಂಬ ಆರು ಲಕ್ಷಣಗಳುಳ್ಳವನ್ನು ಶ್ಲೇಷ್ಮ ರೋಗಿಯೆಂದೆನಬಹುದು.

೧೨೮. ಈ ವಾತ, ಪಿತ್ತ, ಕಫ ರೋಗಗಳ ಉಪಶಮನವನ್ನು ತಿಳಿಸುತ್ತೇವೆ. ಸುಖೋಷ್ಣವಾದ ಅನ್ನಸೇವನೆ, ಒಳ್ಳೇ ಮೆತ್ತನೆಯ ಹಾಸಿಗೆಯಲ್ಲಿ ಮಲಗಿ ನಿದ್ದೆ ಮಾಡೋಣ, ತನ್ನ ಮನಸ್ಸಿಗೆ ಹಿತಕರವಾಗಿರುವಂತೆ ನಡೆಯುವ ಸ್ನೇಹಿತರ ಗುಂಪು, ಒಳ್ಳೆ ಕಥೆಗಳನ್ನೋದೋಣ ಮತ್ತು ಕೇಳೋಣ, ಚೆನ್ನಾಗಿ ನೆತ್ತಿ ನೆನೆಯುವಂತೆ ಎಣ್ಣೆ ಯೊತ್ತಿಕೊಂಡು ನೀರೆರೆದುಕೊಳ್ಳೋಣ, ಈ ರೀತಿ ಮಾಡುತ್ತಾ ಬಂದರೆ ಯಾವ ವಿಧವಾದ ವಾತರೋಗವೂ ಬರುವುದಿಲ್ಲ. ಮತ್ತು ವಾತರೋಗವಿದ್ದರೆ ವಾಸಿಯಾಗಿ ಹೋಗುತ್ತದೆ.

೧೨೯. ಸರೋವರದ ನೀರು, ಭಾವಿಯ ನೀರು, ಹೊಳೆಯ ನೀರುಗಳಲ್ಲಿ ಸ್ನಾನ ಮಾಡುವುದರಿಂದಲೂ, ಒಳ್ಳೆ ಗಂಧವಸ್ತುಗಳನ್ನು ಮೈಗೆ ಲೇಪಿಸಿಕೊಂಡು ಬೆಳದಿಂಗಳಲ್ಲಿ

**ಸಂಸೇವಿತೇನಾಶು ಶಮಂ ಪ್ರಯಾತಿ ।**
**ವಿಲಾಸಮುಗ್ರ್ಯಂ ಮನಸಃ ಪ್ರಹರ್ಷಾತ್ ॥ ೧೨೯ ॥**

**ಸರ್ವಾಮಯಾರ್ತಿ ಪ್ರಶಮಾರ್ಥಮೇಕಾಂ ।**
**ತ್ವಮೌಷಧೀಂ ರಾಮ ನಿಬೋಧ ಗುಹ್ಯಾಂ ॥**
**ಭಕ್ತಿಃ ಪ್ರಭೋರ್ದೇವವರಸ್ಯ ವಿಷ್ಣೋ- ।**
**ರ್ಯಾ ಸರ್ವಕಾಮ್ಯೈಃ ಪುರುಷಂ ಯುನಕ್ತಿ ॥ ೧೩೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ಪುರುಷ ಚಿಕಿತ್ಸಾನಾಮ**
**ಷಟ್‌ಪಂಚಾಶತ್ತಮೋಽಧ್ಯಾಯಃ**

---

ವಿಹರಿಸುವುದರಿಂದಲೂ, ಮನಸ್ಸಿಗೆ ಸಂತೋಷವನ್ನುಂಟುಮಾಡುವ ಕೆಲಸಗಳನ್ನು ಮಾಡೋಣದರಿಂದಲೂ, ಪಿತ್ತರೋಗವು ಪ್ರಶಮನವಾಗುವುದು.

೧೩೦. ಎಲೈ ಪರಶುರಾಮನೇ, ಎಷ್ಟು ಹೇಳಿದುದರಿಂದೇನು ಪ್ರಯೋಜನ? ಸಕಲ ರೋಗಗಳನ್ನೂ ನಿವಾರಣೆಮಾಡಬಲ್ಲ ಶಕ್ತಿಯುಳ್ಳ ಒಂದೇ ಒಂದು ಬಲು ಗುಟ್ಟಾದ ಔಷಧವುಂಟು. ಅದನ್ನು ನಿನಗೀಗ ಹೇಳುತ್ತೇನೆ, ಕೇಳು. ಅದೇನೆನ್ನುವಿಯೋ, ಸಕಲ ಇಷ್ಟಾರ್ಥಗಳನ್ನೂ ಅದಾವ ಪರಮಾತ್ಮನಿಂದ ಹೊಂದಬಹುದೋ, ಅಂತಹ ದೇವದೇವೋತ್ತಮನಾದ ಮಹಾವಿಷ್ಣುವನ್ನು ಭಕ್ತಿಯಿಂದ ಭಜಿಸುತ್ತಾ ಬಂದರೆ ಅದೇ ಪರಮೌಷಧರೂಪವಾಗಿ ಪರಿಣಮಿಸಿ ಸಕಲ (ಭವ) ರೋಗಗಳನ್ನೂ ನಿವಾರಣೆಮಾಡುವುದು.

ಟಿಪ್ಪಣಿ : ಇಲ್ಲಿಯವರೆಗೆ ಚಿಕಿತ್ಸಾಧ್ಯಾಯವು ಹೇಳಲ್ಪಟ್ಟಿದೆ. ದುರ್ಗಸಂಪತ್ತಿಯ ಅಧ್ಯಾಯದಿಂದಾರಂಭವಾಗಿ ಈ ಅಧ್ಯಾಯ ಪೂರ್ತಿಯಾಗುವ ವರಿವಿಗೂ ನಾನಾ ವಿಧವಾದ ಔಷಧಗಳೂ, ರೋಗಗಳೂ, ಚಿಕಿತ್ಸೆಗಳೂ, ಭಗವದ್ಭಕ್ತಿ ವಿಚಾರವೂ ಹೇಳಲ್ಪಟ್ಟಿವೆ. ಈಗ ನಾನು ಈ ವೈದ್ಯಭಾಗವನ್ನು ಬರೆಯುವಾಗ ಅನೇಕ ವೈದ್ಯಗ್ರಂಥಗಳನ್ನೂ, ವೈದ್ಯೋಕ್ತ ಸಲಹೆಗಳನ್ನೂ ಸಹ ತೆಗೆದುಕೊಂಡು ಈ ಶಾಸ್ತ್ರವಿಚಾರವನ್ನು ಬರೆದಿದೇನೆ. ವೈದ್ಯಶಾಸ್ತ್ರದ ಶ್ರೇಷ್ಠಗ್ರಂಥಗಳನ್ನೂ ಧನ್ವಂತರೀ ನಿಘಂಟುವೇ ಮುಂತಾದ ಗ್ರಂಥಗಳನ್ನು ಬರೆದಿರುವ ಪಂಡಿತಶ್ರೇಷ್ಠರು ತಮ್ಮತಮ್ಮ ಗ್ರಂಥಗಳನ್ನು ಬರೆಯುವಾಗ, ಇದರ ಕೆಳಗೆ ಬರೆದಂತೆ ಸ್ವಾಹಂಕಾರಖಂಡನವನ್ನು ಮಾಡಿಕೊಂಡು ಗ್ರಂಥಗಳನ್ನು ಬರೆದಿರುವಲ್ಲಿ

ನಾನೆಷ್ಟರವನೆಂದರೆ, ತೃಣಗಣಾಯಮಾನನೆಂದು ಸರ್ವಥಾ ತಿಳಿಯಬೇಕೇ ಹೊರ್ತು, ಇವನು ವಿದ್ವಾಂಸನೆಂದು ಧೋರಣೆಯಿಂದಲೂ, ದುರಹಂಕಾರದಿಂದಲೂ, ಸ್ವೇಚ್ಛೆಯಿಂದಲೂ ಬರೆದಿರುವನೆಂದು ಭಾವಿಸದೆ ತಮ್ಮ ತಮ್ಮ ಸಹಜಸುಗುಣವನ್ನು ತೋರಿಸಿ ತಮ್ಮ ವೈದುಷ್ಯದ ಔನ್ನತ್ಯವನ್ನು ಪ್ರಕಟಗೊಳಿಸಬೇಕಾಗಿ, ಈ ಅನುವಾದಕನು ಬೇಡಿಕೊಂಡು ವೈದ್ಯಶಾಸ್ತ್ರಜ್ಞರ ಮಾತುಗಳನ್ನಿಲ್ಲಿ ಉದಾಹರಿಸಿದಾನೆ. ಮತ್ತು ಇದನ್ನೇ ತಾನು ಪುನರುಕ್ತಿಯಾಗಿ ಹೇಳಿಕೊಂಡು ಆ ಮಹನೀಯರಿಗೆ ಅಡ್ಡಬಿದ್ದು ಬೇಡಿಕೊಂಡಿದಾನೆ.

ಯದ್ಯಯುಕ್ತಮಿದಂಪ್ರೋಕ್ತಂ ಪ್ರಮಾದೇನ ಭ್ರಮೇಣ ವಾ ।
ಕೃಪಯಾಹಿ ದಯಾವಂತಃ ಸಂತಸ್ಸಂಶೋಧಯಂತು ತತ್ ॥
ಬಹುಚ್ಛಿದ್ರಂ ಪರಿತ್ಯಜ್ಯ ಗುಣಲೇಶಜಿಘೃಕ್ಷಯಾ ।
ಪರಿಗೃಹ್ಣಂತ್ವದೋ ವಿಜ್ಞಾಋಜವೋದಂಭವರ್ಜಿತಾಃ ॥
ಇಂದ್ರಾದಯೋಪಿಯಸ್ಯಾಂತಂ ನಯಯುಶ್ಶಬ್ದವಾರಿಧೇಃ ।
ಸಕ್ರಿಯಾಂತಸ್ಯ ಕೃತ್ಸ್ನಸ್ಯ ಕ್ಷಮೋವಕ್ತುಂ ನರಃ ಕಥಂ ॥

ಅರ್ಥ: ನಾನು ಪ್ರಮಾದ ಭ್ರಮೆಗಳಿಗೆ ವಶವಾಗಿ ಇದರಲ್ಲೇನಾದರೂ ತಪ್ಪರ್ಥವನ್ನು ಬರೆದಿದ್ದರೆ, ಸಜ್ಜನರು ಅದನ್ನು ತಿದ್ದಿಕೊಂಡು ನನ್ನ ಮೇಲೆ ದಯೆತೋರಿಸಲಿ. ಇದರಲ್ಲಿ ಸಹ ತಪ್ಪಿದ್ದರೂ ಅದನ್ನೆಲ್ಲಾ ಗಣಿಸದೆ, ಜ್ಞಾನಿಗಳಾದ ವಿವೇಕಿಗಳು ಏನಾದರೂ ಸಾಸಿವೆ ಕಾಳಿನಷ್ಟು ಗುಣವಿದ್ದರೆ ಮಾತ್ರ ಅದನ್ನು ಮಾತ್ರ ಗಣನೆಗೆ ತಂದುಕೊಳ್ಳಲಿ. ಇಂತಹ ವಿಮರ್ಶಾವಸರದಲ್ಲಿ ತಮ್ಮ ಡಂಭವನ್ನು ವರ್ಜಿಸಿ ಋಜು ಮಾರ್ಗದಿಂದ ವರ್ತಿಸಲಿ. ಶಬ್ದಗಳು ಸಮುದ್ರದಂತೆ ಅಪಾರವಾಗಿವೆ. ಇಂದ್ರಾದಿಗಳೂ ಅದರ ತುದಿ-ಮೊದಲನ್ನು ಕಾಣದಿರುವಾಗ ನನ್ನ ತಪ್ಪನ್ನು ಕ್ಷಮಿಸದೆ ಹೇಗೆ ಇದ್ದೀರಿ? (ಅಂದರೆ ಕ್ಷಮಿಸಬೇಕೆಂದು ಅಭಿಪ್ರಾಯ.)

ಭೋಗೇ ರೋಗಭಯಂ ಎಂದು ಹೇಳುವ ಮಾತು ಮನುಷ್ಯ ಸಾಮಾನ್ಯರ ಅನುಭವದಲ್ಲಿರುವ ಮಾತೇ ಆಗಿದೆ. ಈಗ ಈ ರೋಗಗಳು ೭೨-೭೩ ನೇ ಶ್ಲೋಕದಲ್ಲಿ ಹೇಳಿರುವಂತೆ ಮನುಷ್ಯನಿಗೇಕೆ ಬರುವುವು? ಈ ರೋಗಗಳಿಗೆ ಔಷಧವೊಂದೇ ಪರಿಹಾರವೆ? ಇದಕ್ಕೆ ಮತ್ತಾವ ಸುಲಭೋಪಾಯವೂ ಇಲ್ಲವೆ? ಎಂಬ ಪ್ರಶ್ನೆ ಅನೇಕರಿಗೆ ಹುಟ್ಟುವುದು. ಇದಕ್ಕೆ ಉತ್ತರವಾಗಿ ಕರ್ಮಸ್ವರೂಪವನ್ನು ತಿಳಿಸಬೇಕೆಂದು ಉದ್ದೇಶಿಸಲಾಗಿದೆ. ನಾವೀಗ ಮನನಮಾಡಬೇಕಾದ ಕೆಲವು ಮುಖ್ಯ ವಿಚಾರಗಳನ್ನಿಲ್ಲಿ ತಿಳಿಸುವುದು ಅಪ್ರಕೃತವಲ್ಲ. ದೈವಭಕ್ತಿಯೊಂದಿದ್ದರೆ ಇದೇ ದೊಡ್ಡ

ಔಷಧವೆಂದೂ ಕಡೆಗೆ ಹೇಳಿದಾರೆ. ಈ ವಿಚಾರವನ್ನು ವೈದ್ಯಗ್ರಂಥಕಾರರೆಲ್ಲರೂ ಮಹರ್ಷಿಗಳೂ ಸಹ ಕಂಠರವೇಣ (ಏಕಕಂಠ್ಯ) ಒಪ್ಪಿಕೊಂಡಿದಾರೆ. ಭಗವದ್ಭಕ್ತನನ್ನು ಯಾವ ರೋಗವೂ ಬಾಧಿಸುವುದಿಲ್ಲವೆಂದು ಹೇಳಿದ ಹಾಗಾಯಿತು. ಇದುವರಿಗೆ ಹೇಳಿದ ರೋಗಗಳೆಲ್ಲವೂ ದೇಹದಲ್ಲಿ ಉತ್ಪತ್ತಿಯಾಗುವ ರೋಗಗಳಾದುವು. ಮಾನಸಿಕ ರೋಗಕ್ಕೆ ಆಧಿಯೆಂದೂ, ದೇಹರೋಗಕ್ಕೆ ವ್ಯಾಧಿಯೆಂದೂ ಹೆಸರುಗಳಿವೆ. ಮಾನಸಿಕ ವಾದ ರೋಗಗಳು ಅಪಾರವಾಗಿವೆ. ಮನಸ್ಸು ಇಂದ್ರಿಯಗಳೊಡನೆ ಕಲೆತು ವಿಷಯ ಭೋಗಗಳ ಕಡೆಗೆ ತಿರುಗುವುದಕ್ಕೆ ಆರಂಭವಾದೊಡನೆ (ಜನ್ಮಾರಂಭ-ಸ್ಥೂಲ ದೇಹೋತ್ಪತ್ತಿಯಾದ ನಂತರ) ದೇಹಪಾತಾಂತ್ಯವಾಗಿ (ಸಾಯುವವರಿಗೆ) ಮಾನಸಿಕ ವ್ಯಾಪಾರಗಳಿಗೆ ಆರಂಭವಾಗುವುದು. ಈ ಮನಸ್ಸು, ಮನೋಹಿ ಜನ್ಮಾಂತರ ಸಂಗತಿಜ್ಞಂ ಎಂಬಂತೆ ಒಂದೊಂದು ವೇಳೆ ಜನ್ಮಾಂತರಜ್ಞಾನವನ್ನೂ ಸಹ ಅರಿಯುವು ದುಂಟು. ಹೀಗೆ ಈ ಮನಸ್ಸು ಅನೇಕ ಜನ್ಮಗಳಲ್ಲಿ ಜನಿಸಿ ಸಂಸಾರದ ವಿಷಯಗಳಲ್ಲಿ ಸಿಕ್ಕಿ ನರಳುತ್ತಿದ್ದಾಗ ಮಾಡಿದ ಪಾಪಪುಣ್ಯಗಳಿಗೆ ಕರ್ಮವೆಂದು ಹೆಸರು. ಈ ಕರ್ಮವು ಸಂಚಿತ, ಪ್ರಾರಬ್ಧ, ಆಗಾಮಿಯೆಂದು ಮೂರು ತೆರವಾಗಿರುವುದು. ಸಂಚಿತವೆಂದರೆ ಬಹುಕಾಲದಿಂದ ಕೂಡಿಟ್ಟುಕೊಂಡಿರುವುದು. ಪ್ರಾರಬ್ಧವೆಂದರೆ ಅದರಲ್ಲೇ ಒಂದು ಸ್ವಲ್ಪ ಭಾಗವನ್ನು ತೆಗೆದುಕೊಂಡು ಬಳಸುತ್ತಿರುವುದು. ಆಗಾಮಿಯೆಂದರೆ ಸಂಪಾದಿಸು ವುದು. ಇದಕ್ಕೆ ಉದಾಹರಣೆ:-ಕೋಟ್ಯಧೀಶ್ವರನೊಬ್ಬನಿದ್ದಾನೆ. ಅವನಿಗೆ ಸಂಚಿತವಾದ ಎಷ್ಟೋ ಆಸ್ತಿಯಿದೆ. ಇದೇ ಸಂಚಿತ (ಡಿಪಾಸಿಟ್) ಎಂದು ತಿಳಿದುಕೊಳ್ಳಬೇಕು. ಅದರಲ್ಲಿ ಗೃಹಕೃತ್ಯಕ್ಕೂ ಉಳಿದ ಖರ್ಚಿಗೂ ಸ್ವಲ್ಪ ತೆಗೆದುಕೊಂಡು ಖರ್ಚು ಮಾಡುವುದು. ಚಾಲತಿ (ಪ್ರಾರಬ್ಧ) ಮುಂದೆ ಮುಂದೆ ಸಂಪಾದಿಸುವ ಆಸ್ತಿಯೇ ಆಗಾಮಿಯೆನ್ನೋಣ ಅಂದರೆ ಕರ್ಮವನ್ನನುಭವಿಸುತ್ತಿರುವ ಒಬ್ಬ ಜೀವಿಯು ದೊಡ್ಡ ಆಸ್ತಿಗಾರನೆನ್ನೋಣ. ಅವನ ಆಸ್ತಿಯು ಎಷ್ಟು ಖರ್ಚು ಮಾಡಿದರೂ ಹೇಗೆ ಹೆಚ್ಚುತ್ತ ಹೆಚ್ಚುತ್ತಲೇ ಬರುತ್ತ ಎಂದಿಗೂ ವೆಚ್ಚವಾಗುವುದೇ ಇಲ್ಲವೋ ಅದರಂತೆ ಕರ್ಮ ಗತಿಯನ್ನು ತಿಳಿದುಕೊಳ್ಳಿರಿ, ನಮ್ಮ ಆಸ್ತಿಯನ್ನು ನಾವೇ ಆನಂದದಿಂದ ಅನುಭವಿಸು ವಂತೆ ಜನ್ಮಾಂತರ (ಸಂಚಿತ) ಕರ್ಮಗಳನ್ನೂ ನಾವೇ ಅನುಭವಿಸಬೇಕು. ಇದು ಆಸ್ತಿವಂತನ ಮಾತಾಯಿತು. ಈ ಆಸ್ತಿಯನ್ನೇ ಸುಖವೆಂದು ಭಾವಿಸೋಣ. ಇನ್ನೊಬ್ಬ ಸಾಲಗಾರನಿದಾನೆಯೆಂದು ಇಟ್ಟುಕೊಳ್ಳೋಣ. ಒಬ್ಬ ಆಸ್ತಿವಂತನು ಭಾರಿ ವ್ಯಾಪಾರಮಾಡುತ್ತಿದ್ದಾಗ ಸ್ವಲ್ಪ ಸಾಲವನ್ನು ಮಾಡಿರುತ್ತಾನೆ. ನಾನಾ ಕಾರಣ ದಿಂದಲೂ ದುರದೃಷ್ಟದಿಂದಲೂ ಅವನು ಸಾಲವನ್ನು ಹೆಚ್ಚಾಗಿ ಮಾಡಿ ಆಸ್ತಿಯೆಲ್ಲವನ್ನೂ ಕಳೆದುಕೊಂಡು ಹೀನಸ್ಥಿತಿಗೆ ಬರುತ್ತಾನೆ. ಆದರೂ ಆಸ್ತಿಹೋದರೂ ಸಾಲಮಾತ್ರ ತೀರದೆ ಉಳಿದುಕೊಂಡೇ ಇರುತ್ತದೆ. ಮನೆಮಠಗಳು ಹೋಗಿ ಹೊಟ್ಟೆಗಿಲ್ಲದ ಸ್ಥಿತಿಗೆ

ಬಂದು ಮಾಡಬಾರದ ಪಾಪಕೃತ್ಯಗಳಿಂದ ಹೊಟ್ಟೆಹೊರೆದುಕೊಳ್ಳುವ ಪ್ರಸಂಗ ಬರುತ್ತದೆ. ಆಗ್ಗೆ ನಾನಾ ವಿಧ ಪಾಪಕೃತ್ಯಗಳನ್ನು ಮಾಡಿ ಜೀವಿಸುತ್ತಿರುತ್ತಾನೆ. ಹೊಟ್ಟೆಹೊರೆಯುವುದಕ್ಕಾಗಿ ಮಾಡುವ ಅಕಾರ್ಯಗಳನ್ನು ಪಾಪವೆಂದು ಭಾವಿಸಬೇಕು.

ಈ ರೀತಿ ಪಾಪಪುಣ್ಯಗಳಿಗೊಳಗಾದ ಮನುಷ್ಯನು ಜನ್ಮಜನ್ಮಾಂತರಗಳಲ್ಲಿ 'ಶುಭಕೃಚ್ಛುಭಮಾಪ್ನೋತಿ' ಪಾಪಕೃದುಃಖಮಶ್ನುತೇ ಅನ್ನುವಂತೆ ಪುಣ್ಯವಂತನು ಸೌಖ್ಯವನ್ನೂ, ಪಾಪಿಯು ದುಃಖವನ್ನೂ ಅನುಭವಿಸುತ್ತಾನೆ. ದುಃಖವೆಂದರೆ ರೋಗ ವೆಂದು ಅರ್ಥವಾಗುತ್ತದೆ. ಮನುಷ್ಯನಿ (ಸಂಸಾರಿ) ಗೆ ಬರುವ ಇಂತಹ ಕ್ಲೇಶಪಂಚಕವು, ದರಿದ್ರನನ್ನೂ ಧನಿಕನನ್ನೂ ಸಮವಾಗಿ ಆವರಿಸಿಕೊಂಡಿರುತ್ತದೆ. ಆ ದುಃಖಪಂಚಕ ವಾವುದೆಂಬುದನ್ನು ಇಲ್ಲಿ ವಿವರಿಸುವೆನು. ಜನ್ಮದುಃಖ (ಜನನಕಾಲದ ವ್ಯಥೆ), ವ್ಯಾಧಿ ದುಃಖ (ದೇಹಕ್ಕೆ ರೋಗಗಳಿಂದುಂಟಾಗುವ ವ್ಯಥೆ), ಜರಾದುಃಖ (ಮುಪ್ಪು ಬಂದಾಗ ಸಕಲೇಂದ್ರಿಯಗಳೂ ದೌರ್ಬಲ್ಯ ಹೊಂದಿರುವ ವ್ಯಥೆ), ವಿಪದ್ದುಃಖ (ಮಧ್ಯೇ ಮಧ್ಯೇ ಜೀವಮಾನದಲ್ಲೊದಗುವ ಅನಿರ್ವಚನೀಯವಾದ ವಿಪತ್ಪರಂಪರೆಗಳು), ಮರಣದುಃಖ (ಮರಣದಲ್ಲಾಗುವ ವ್ಯಥೆ), ಈ ಐದಕ್ಕೂ ಕ್ಲೇಶಪಂಚಕಗಳೆಂದು ಹಿರಿಯರು ಹೇಳಿದಾರೆ. ಆದ್ದರಿಂದಲೇ ಜನ್ಮವ್ಯಾಧಿಜರಾವಿಪತ್ತಿಮರಣರೂಪವಾದ ದುಃಖಪರಂಪರೆಗಳ ಪರಿಹಾರ ಕ್ಕಾಗಿ ಸಕಲ ಚರಾಚರ ಪ್ರಜೆಗಳಿಗೊಡೆಯನಾದ, ಸರ್ವಭೂತಪತಿಯಾದ ಭಗವಂತ ನನ್ನು ಧ್ಯಾನಿಸಬೇಕೆಂದೂ, ಆ ಭಗವಂತನೊಬ್ಬನು ಮಾತ್ರ ಈ ಸಕಲ ದುಃಖಗಳನ್ನೂ ಪರಿಹರಿಸಿ ಮೋಕ್ಷವನ್ನು ಕೊಡುವ ಶಕ್ತಿಯುಳ್ಳವನೆಂದೂ ಸಕಲ ವೇದಶಾಸ್ತ್ರಪುರಾಣ ಗಳೂ ಕೂಗಿಕೊಳ್ಳುತ್ತಲಿವೆ. ಈ ಮಾತನ್ನು ವೈದ್ಯಶಾಸ್ತ್ರಕಾರರೆಲ್ಲರೂ ತಮ್ಮ ತಮ್ಮ ಗ್ರಂಥಗಳಲ್ಲುವಹರಿಸಿದಾರೆ. ಅವರಲ್ಲೊಬ್ಬರ ವಚನವನ್ನು ಮಾದರಿಯಾಗಿ ಬರೆಯೋಣ :—

ಚಲದಳತರುಸೇವಾ ಹೋಮಮಂತ್ರತ್ರಿನೇತ್ರ
ದ್ವಿಜಗುರುಜನಪೂಜಾ ವಿಷ್ಣುನಾಮ್ನಾಂ ಸಹಸ್ರಂ।
ಮಣಿಧ್ವನಿರಪಿದಾನಾನ್ಯಾಶಿಷಸ್ತಾಪಸಾನಾಂ
ಸಕಲಮಿದಮರಿಷ್ಟಂ ಸ್ಪಷ್ಟಮಷ್ಟಜ್ವರಾಣಾಂ ॥

ಅರ್ಥ:- ಜ್ವರವು ಎಂಟು ವಿಧ. ಅದು ಪರಿಹಾರವಾಗಬೇಕಾದರೆ ಅಶ್ವತ್ಥ ಪ್ರದಕ್ಷಿಣೆ ಮಾಡಿಸು, ಹೋಮ ಮಾಡಿಸು, ಇಂದ್ರಾಕ್ಷಿ ಶಿವಕವಚ ನವಗ್ರಹಜಪ ಗಳನ್ನು ಮಾಡಿಸು, ಈಶ್ವರನಿಗೆ ರುದ್ರಾಭಿಷೇಕ ಮಾಡಿಸು, ಗುರುಗಳಿಗೂ ಬ್ರಾಹ್ಮಣ ರಿಗೂ ದಾನಧರ್ಮಗಳನ್ನು ಮಾಡು. ವಿಷ್ಣು ಸಹಸ್ರನಾಮ ಪಾರಾಯಣವನ್ನು

ಮಾಡಿಸು. ಮಂತ್ರಗಳನ್ನು ಕಲಿಸು, ಬ್ರಾಹ್ಮಣರ ಆಶೀರ್ವಾದವನ್ನು ಸಂಪಾದಿಸು, ಈ ರೀತಿ ಮಾಡಿದರೆ ಸಕಲ ರೋಗವೂ ಪರಿಹಾರವಾಗುವುದು. ಇದೇ ವಿಚಾರವನ್ನು ಕುರಿತು ಮತ್ತೊಬ್ಬರು ಸಿದ್ಧಾಂತರೂಪವಾಗಿ ಹೇಳಿರುವುದನ್ನು ಕೇಳಿರಿ :

ಜನ್ಮಾಂತರ ಕೃತಂ ಪಾಪಂ ವ್ಯಾಧಿರೂಪೇಣ ಬಾಧತೇ |
ತಚ್ಛಾಂತಿ ರೌಷಧೈರ್ದಾನೈ ಜಪಹೋಮಾರ್ಚನಾದಿಭಿಃ ||

ಅರ್ಥ: ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪರೂಪವಾದ (ಹಿಂದೆ ಬರೆದ) ಕರ್ಮವು (ಕಣ್ಣಿಗೆ ಕಾಣಿಸುವದಿಲ್ಲವಾದ ಕಾರಣ) ಮನುಷ್ಯನ ದೇಹವನ್ನು ರೋಗ ರೂಪದಿಂದ ಮೆಟ್ಟಿ ಬಹಳ ಹಿಂಸೆಯನ್ನು ಕೊಡುತ್ತದೆ. ಆ ಕರ್ಮ (ರೋಗ) ಪರಿಹಾರಕ್ಕಾಗಿಯೇ ಔಷಧ ಕೊಡಿಸಬೇಕು. ದಾನಧರ್ಮಗಳನ್ನು ಮಾಡಬೇಕು.

ಮೇಲಿನ ಶ್ಲೋಕದಲ್ಲಿ ವೈದ್ಯಶಾಸ್ತ್ರಜ್ಞರು ಹೇಳಿರುವಂತೆ ಜಪಹೋಮಾರ್ಚನೆಗಳನ್ನು ಮಾಡಿಸಬೇಕು. ಈ ರೀತಿ ಮಾಡಿದರೆ ಭವ (ಸಂಸಾರ) ಭಯಹರ (ಪರಿಹಾರಕ) ನಾದ ಭವರೋಗ (ಸಂಸಾರದುಃಖ) ವೈದ್ಯನಾದ ಭಗವಾನ್ ಭೂತ-ಭಾವನ (ಪರಮಾತ್ಮ)ನು ಸಕಲ ದುಃಖಗಳನ್ನೂ, ತ್ರಿವಿಧತಾಪಗಳನ್ನೂ, ದುಃಖ ಪಂಚಕಗಳನ್ನೂ ಪರಿಹಾರಮಾಡಿ ನಿತ್ಯಾನಂದಸುಖ (ಮೋಕ್ಷ)ವನ್ನು ದಯಪಾಲಿಸುವನು. ಕರ್ಮವೆಂದರೆ ಬೀಜವೆಂದು ಭಾವಿಸೋಣ. ಹಸೀಬೀಜವನ್ನು ಭೂಮಿಯಲ್ಲಿ ನೆಟ್ಟು ನೀರು ಹಾಕಿದರೆ, ಅನೇಕ ಫಲಗಳನ್ನು ಕೊಡುತ್ತದೆ, ಅದರಂತೆ ಕರ್ಮವು ಬೆಳಸಿದಂತೆ ಕಲ್ಪಕೋಟಿಯವರಿಗೆ ಬೆಳೆಯುತ್ತ ಬರುತ್ತದೆ. ಅದು ನಾಶವಾಗುವುದೇ (ಪುನಃ ಕ್ರಿಯಾಚಕ್ರವದೀರ್ಯತೇ-ಭವಃ) ಇಲ್ಲ, ಚಕ್ರದಂತೆ ಸುತ್ತುತ್ತಲೇ ಇರುತ್ತದೆ. ಅದೇ ಬೀಜ (ಕರ್ಮ) ವನ್ನು ಬಾಣಲೆಯಲ್ಲಿಟ್ಟು ಹುರಿದು ಬಿತ್ತಿದರೆ ಅದು ಪುನಃ ಹುಟ್ಟುವುದಿಲ್ಲ. ಇದು ಹೇಗೋ ಅದರಂತೆ ಕರ್ಮರೂಪವಾದ ಬೀಜವನ್ನು ಭಗವದ್ಭಕ್ತಿಯೆಂಬ ಬಾಣಲೆಯಲ್ಲಿ ಹಾಕಿ ಹುರಿದು ಬಿಡಿರಿ. ವಾಚಕರೇ! ಈ ಟಿಪ್ಪಣಿಯ ತತ್ವಾನುಸಂಧಾನವನ್ನು ಮಾಡಿ, ನೀವು ಕೃತಾರ್ಥರಾದಿರೆಂದರೆ ನಮ್ಮ ಮಹಾರಾಜರ ಅಗಾಧಾಶಯವು ನೆರವೇರುವುದು, ಸರ್ವರೂ ಸುಖ ಸಮುದ್ರದಲ್ಲಿ ವಿಹರಿಸುವರು. ಈ ಲೇಖಕನ ಶ್ರಮವೂ ಸಾರ್ಥಕವಾಗುವುದು. ಈ ಲೇಖನವನ್ನೋದಿ ಯಾರು ಭಗವದಾರಾಧನೆಯಲ್ಲಿ ನಿರತರಾಗುವರೋ, ಅವರ ಸಕಲ ದುಃಖ (ರೋಗ) ಪರಂಪರೆಗಳನ್ನೂ ಶ್ರೀಮನ್ಮಹಾವಿಷ್ಣುವು ಪರಿಹಾರವಾಗುವಂತೆ ಮಾಡುವನು. (ಹೃದ್ರೋಗಂ ಮಮದೇವೇಶಹರಿಮಾಣಂ ಚ ನಾಶಯ ಎಂಬುದಾಗಿ ಅನುವಾದಕನು ತನ್ನ ಇಷ್ಟದೇವರನ್ನು ಪ್ರಾರ್ಥಿಸುತ್ತಾ, ಮಹಾರಾಜರ ಶ್ರೇಯಸ್ಸನ್ನು ಪ್ರಾರ್ಥಿಸುತ್ತಾ ಪ್ರಕೃತಿಮಾತೆಗೆ ಮಂಗಳವನ್ನು ಹಾಡಿ ಮುಗಿಸುವನು.)

ಸಮುದ್ರಮಥನಕಾಲದಲ್ಲಿ ಮಹಾವಿಷ್ಣುವೇ ಧನ್ವಂತರಿರೂಪದಿಂದ ಅವತರಿಸಿ ಆಯುರ್ವೇದವನ್ನು ಲೋಕದಲ್ಲಿ ಪ್ರತಿಷ್ಠಿಸಿರುವನಾದ್ದರಿಂದ ಆ ಮಹಾನುಭಾವನನ್ನು ನಾವೆಲ್ಲರೂ ಸ್ತುತಿಸೋಣ:—

ನಮಾಮಿ ಧನ್ವಂತರಿಮಾದಿದೇವಂ ಸುರಾಸುರೈರ್ವಂದಿತ
ಪಾದಪದ್ಮಂ || ಲೋಕೇ ಜರಾರುಗ್ಭಯ ಮೃತ್ಯುನಾಶಂ-
ದಾತಾರಮೀಶಂ ವಿವಿಧೌಷಧೀನಾಂ ||

ಓ-ಮಹಾನುಭಾವಾ ಧನ್ವಂತರಿ! ನೀನು ಲೋಕದ ಜನರಿಗೆ ಬರುವ ಮುಪ್ಪು, ರೋಗ ಮರಣಗಳನ್ನು ತಪ್ಪಿಸಬಲ್ಲೆಯಲ್ಲಾ! ನನ್ನನ್ನೂ ಸಹ ಈ ಮೂರು ಭಯದಿಂದ ತಪ್ಪಿಸಿ ಕಾಪಾಡಯ್ಯ, ನಿನ್ನ ಮುಂದೆ ನಿಂತು ಕೈಜೋಡಿಸಿ ಈ ರೀತಿ ಬೇಡಿಕೊಂಡು ನಿನ್ನ ಪಾದಕಮಲಗಳ ಮೇಲೆ ನನ್ನ ಶಿರಸ್ಸನ್ನಿಟ್ಟು ಅಡ್ಡಬಿದ್ದಿದ್ದೇನೆ, ದೇವದೇವೋತ್ತಮನೆ! ಕಾಪಾಡು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಪುರುಷ ಚಿಕಿತ್ಸೆಯೆಂಬ ಹೆಸರಿನ
ಐವತ್ತಾರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತಪಂಚಾಶತ್ತಮೋಽಧ್ಯಾಯಃ

**ರಾಮ ಉವಾಚ**

**ಆರೋಗ್ಯಕರಣಂ ನಾಮ ದ್ವಿತೀಯಾ ಪ್ರತಿಪತ್ತಥಾ ।**
**ಆರೋಗ್ಯದಂ ವ್ರತಂ ಚೈವ ವೈಷ್ಣವಂ ಕಥಯಸ್ವ ಮೇ ॥ ೧ ॥**

**ಪುಷ್ಕರ ಉವಾಚ**

**ಧನಿಷ್ಠಾಸು ಮಹಾಭಾಗ ಯಜಮಾನಪುರೋಹಿತೌ ।**
**ಉಪೋಷ್ಯ ವಾರುಣಂ ಸ್ನಾನಂ ಯಜಮಾನಸ್ಯ ಕಾರಯೇತ್ ॥ ೨ ॥**

---

## ಐವತ್ತೇಳನೆಯ ಅಧ್ಯಾಯವು

೧. ಪರಶುರಾಮನು ಪುಷ್ಕರನನ್ನು ಕುರಿತು ಪ್ರಶ್ನೆ ಮಾಡುತ್ತಾನೆ:—ಆರೋಗ್ಯ ಪ್ರತಿಪತ್-ಆರೋಗ್ಯದ್ವಿತೀಯಾ ಎಂಬ ಹೆಸರುಳ್ಳ ಆರೋಗ್ಯಕರಣವ್ರತಗಳೆರಡಿವೆ ಯೆಂದು ಕೇಳಿದೇನೆ. ಅಂತಹ ಆರೋಗ್ಯಭಾಗ್ಯವನ್ನು ಕೊಡುವ ಆ ವೈಷ್ಣವ ವ್ರತಗಳ ವಿಷಯವನ್ನು ದಯಮಾಡಿ ತಿಳಿಸಬೇಕಯ್ಯಾ, ಮಹಾನುಭಾವ!

೨. ಪುಷ್ಕರನು ಹೇಳುತ್ತಾನೆ:— ಈ ವ್ರತವನ್ನು ಧನಿಷ್ಠಾನಕ್ಷತ್ರದ ದಿವಸ ಮಾಡಬೇಕು. ಆ ದಿವಸ ವ್ರತಮಾಡುವ ಯಜಮಾನನೂ, ವ್ರತವನ್ನು ಮಾಡಿಸುವ ಪುರೋಹಿತನೂ, ಈ ರೀತಿ ಇವರಿಬ್ಬರೂ ಉಪವಾಸವಾಗಿರಬೇಕು. ಪುರೋಹಿತನು ಪ್ರಾತಃಕಾಲದಲ್ಲಿ ಯಜಮಾನನಿಗೆ ವಾರುಣಸ್ನಾನ (ಶತಭಿಷಾಸ್ನಾನ) ವನ್ನು ಮಾಡಿಸಬೇಕು.

ಕೃತ್ವಾ ಕುಂಭಶತಂ ಸಾಗ್ರಂ ಶಂಖಮುಕ್ತಾ ಫಲೋದಕೈಃ ।
ಭದ್ರಾಸನೋಪವಿಷ್ಟಸ್ತೈಃ ಸ್ನಾತಶ್ಚೈವಾಹತಾಂಬರಃ ॥ ೩ ॥

ಕೇಶವಂ ವಾರುಣಂ ಚಂದ್ರಂ ನಕ್ಷತ್ರಂ ವಾರುಣಂ ತಥಾ ।
ಪೂಜಯೇತ್ಪ್ರಯತೋ ರಾಮ ಗಂಧಮಾಲ್ಯಾನುಲೇಪನೈಃ ॥ ೪ ॥

ಧೂಪದೀಪನಮಸ್ಕಾರೈಸ್ತಥಾ ಚೈವಾನ್ನಸಂಪದಾ ।
ದೇವತಾನಾಂ ಯಥೋಕ್ತಾನಾಂ ಕುರ್ವೀತ ಹವನಂ ತಥಾ ॥ ೫ ॥

ಸರ್ವೌಷಧೈಸ್ತಥಾಜ್ಯೇನ ಯಥಾಶಕ್ತಿವಿಧಾನತಃ ।
ಗುರವೇ ವಾಸಸೀ ದೇಯೇ ರಸಕುಂಭಂ ಚ ಕಾಂಚನಂ ॥ ೬ ॥

---

೩. ಈ ಶತಭಿಷಾನಕ್ಷತ್ರ (ವರುಣದೇವತಾಕ ನಕ್ಷತ್ರ) ಸ್ನಾನ ವಿಧಿಯನ್ನೀಗ ನಿನ್ನೊಡನೆ ಹೇಳುವೆನು, ಕೇಳು. ಶಂಖೋದಕ ಮುಕ್ತಾಫಲೋದಕಗಳನ್ನು ತುಂಬಿದ ಒಂದುನೂರು ಕಲಶಗಳನ್ನು ಪ್ರಾಗುದಕ್ಸಂಸ್ಥೆಯಾಗಿ (ಪೂರ್ವ ಅಥವಾ ಉತ್ತರಕ್ಕೆ ತುದಿಮಾಡಿ) ಸ್ಥಾಪಿಸಬೇಕು. ಯಜಮಾನನು ಭದ್ರಾಸನದಮೇಲೆ ಕುಳಿತು ಆ ಕಲಶೋದಕಗಳಿಂದ ಪಂಚೆಗಳನ್ನುಟ್ಟುಕೊಂಡಿದ್ದಂತೆಯೇ ಸ್ನಾನ ಮಾಡಬೇಕು.

೪. ಸ್ನಾನಾನಂತರ ಕೇಶವನನ್ನೂ ಚಂದ್ರನನ್ನೂ, ವಾರುಣನಕ್ಷತ್ರವೆನಿಸಿದ ಶತಭಿಷಾ ನಕ್ಷತ್ರವನ್ನೂ, ಚಾಂದ್ರನಕ್ಷತ್ರವೆನಿಸಿದ ಮೃಗಶಿರಾನಕ್ಷತ್ರವನ್ನೂ ಪರಿಶುದ್ಧ ಮನಸ್ಸಿನಿಂದ ಪೂಜೆಮಾಡಬೇಕು.

೫. ಈ ರೀತಿಯಾಗಿ ಮೇಲೆ ವಿವರಿಸಿದ ದೇವತೆಗಳನ್ನು ಗಂಧಮಾಲ್ಯಾನುಲೇಪನಗಳಿಂದಲೂ ಧೂಪದೀಪನೈವೇದ್ಯತಾಂಬೂಲಪ್ರದಕ್ಷಿಣನಮಸ್ಕಾರಾದಿಗಳಿಂದಲೂ ಪೂಜಿಸಿದ ಬಳಿಕ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು.

೬. ಸರ್ವೌಷಧಗಳಿಂದಲೂ, ಆಜ್ಯದ್ರವ್ಯದಿಂದಲೂ, ವಿಧಿಯನ್ನನುಸರಿಸಿ ಯಥಾಶಕ್ತಿಯಾಗಿ ಹೋಮಮಾಡಿದ ಬಳಿಕ ಪುರೋಹಿತನಿಗೆ ಒಂದು ಜೊತೆ ವಸ್ತ್ರವನ್ನೂ, ಸುವರ್ಣಕಲಶವನ್ನೂ ದಾನಮಾಡಬೇಕು.

ಬ್ರಾಹ್ಮಣಾನಾಂ ಪ್ರದಾತವ್ಯಾ ವಿತ್ತಶಕ್ತ್ಯಾ ಚ ದಕ್ಷಿಣಾ ।
ಶಮೀಶಾಲ್ಮಲಿಜೈಃ ಪತ್ರೈರ್ವಂಶಾಗ್ರೇಣ ತಥೈವ ಚ ॥ ೭ ॥

ತ್ರಿವೃತಸ್ತು ಬಲಿಃ ಕಾರ್ಯಃ ಸರ್ವರೋಗವಿನಾಶನಃ ।
ಶಾಕಾನಿ ಹರಿತಂ ಮಾಲ್ಯಂ ಸರ್ವಸಸ್ಯಾನಿ ವಾಸಸೀ ॥ ೮ ॥

ವರುಣಾಯಾಶು ನಿಕ್ಷಿಪ್ಯ ಗಂಧೈರ್ಧೂಪೈರ್ನಿವೇದಯೇತ್ ।
ಅಲಂಘ್ಯಮಾನಸ್ಯ ಹಿ ವಾರುಣಂ ತಂ
ಸ್ನಾನೇನ ದಾನೇನ ಕೃತೇನ ಸಮ್ಯಕ್ ।
ರೋಗಾಃ ಸಮಸ್ತಾಃ ಪ್ರಶಮಂ ಪ್ರಯಾಂತಿ
ಬದ್ಧಸ್ತಥಾ ಮೋಕ್ಷಮವಾಪ್ನುಯಾಚ್ಚ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯ ಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಶತಭಿಷಾಸ್ನಾನ
ವರ್ಣನಂ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೭. ಪೂಜಾಹೋಮಕಾಲದಲ್ಲಿ ಬಂದಿದ್ದ ಬ್ರಾಹ್ಮಣರೆಲ್ಲರಿಗೂ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಕೊಡಬೇಕು. ಬಳಿಕ ಬನ್ನೀಪತ್ರೆ, ಬೂರಗದ ಎಲೆಗಳನ್ನು ಬಿದಿರಿನ ತುದಿಯಿಂದ ಮೂರಾವರ್ತಿ ಬಲಿರೂಪವಾಗಿ ಹಾಕಬೇಕು.

೮. ಈ ರೀತಿ ಬಲಿಪ್ರದಾನದಿಂದ ಸರ್ವರೋಗಗಳೂ ನಾಶ ಹೊಂದುವುವು. ವಾರುಣದೇವತೆಗೆ ನಾನಾವಿಧ ಶಾಕಗಳನ್ನೂ, ಸಕಲ ಸಸ್ಯಗಳನ್ನೂ, ಅರಿಶಿನ, ಹೂವುಗಳನ್ನೂ, ವಸ್ತ್ರವನ್ನೂ ಸಮರ್ಪಿಸಿ ಧೂಪದೀಪನೈವೇದ್ಯತಾಂಬೂಲಾದಿಗಳಿಂದ ಅರ್ಚಿಸಬೇಕು.

೯. ಈ ರೀತಿಯಾಗಿ ಯಾರು ವಾರುಣದೇವತೆಯನ್ನರ್ಚಿಸಿ ಸ್ನಾನದಾನಗಳನ್ನು ಬಿಡದೆ ಮಾಡುತ್ತ ಬರುವರೋ, ಇದರಿಂದ ಅವರು ಸಮಸ್ತ ರೋಗಬಾಧೆಗಳಿಂದಲೂ ಬಿಡಲ್ಪಟ್ಟವರಾಗಿ, ಇದರ ಮಹಿಮೆಯಿಂದ ಬದ್ಧರಾಗಿ ಮೋಕ್ಷಸುಖವನ್ನೂ ಸಹ ಹೊಂದುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಎರಡನೆಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಶತಭಿಷಾಸ್ನಾನವೆಂಬ ಹೆಸರಿನ
ಐವತ್ತೇಳನೆಯ ಅಧ್ಯಾಯ ಮುಗಿಯಿತು

॥ ಶ್ರೀಃ ॥

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಅಷ್ಟಪಂಚಾಶತ್ತಮೋಽಧ್ಯಾಯಃ

ಪುಷ್ಕರ ಉವಾಚ

ಪೌಷಶುಕ್ಲದ್ವಿತೀಯಾಯಾಂ ಗವಾಂ ಶೃಂಗೋದಕೇನ ತು ।
ಸ್ನಾತ್ವಾ ಶುಕ್ಲಾಂಬರೋ ಭೂತ್ವಾ ಸೂರ್ಯೇಽಸ್ತಂ ಸಮುಪಾಗತೆ ॥ ೧ ॥

ಬಾಲೇಂದೋಃ ಪೂಜನಂ ಕೃತ್ವಾ ಗಂಧಮಾಲ್ಯಾನುಲೇಪನೈಃ ।
ಧೂಪದೀಪನಮಸ್ಕಾರೈ ಸ್ತಥಾ ಚೈವಾನ್ನಸಂಪದಾ ॥ ೨ ॥

ದಧ್ನಾ ಚ ಪರಮಾನ್ನೇನ ಗುಡೇನ ಲವಣೇನ ಚ ।
ಪೂಜನೈರ್ಬ್ರಾಹ್ಮಣಾನಾಂ ಚ ಪೂಜಯಿತ್ವಾ ನಿಶಾಕರಂ ॥ ೩ ॥

---

ಐವತ್ತೆಂಟನೆಯ ಅಧ್ಯಾಯವು

೧. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ:— ಪುಷ್ಯ ಶುದ್ಧ ಬಿದಿಗೆಯ ದಿವಸ ಗೋಶೃಂಗದಿಂದ ಜಲವನ್ನು ತುಂಬಿ ಆ ಜಲದಿಂದ ಸ್ನಾನಮಾಡಿ ಮಡೀಪಂಚೆಗಳನ್ನುಟ್ಟು ಸಾಯಂಕಾಲದವರಿವಿಗೂ ಉಪವಾಸವಿರಬೇಕು.

೨. ಆ ಬಳಿಕ ಚಂದ್ರೋದಯವಾದೊಡನೆಯೇ ಆ ಬಿದಿಗೆಯ ಬಾಲಚಂದ್ರನಿಗೆ ಗಂಧಮಾಲ್ಯಾನುಲೇಪನಗಳಿಂದಲೂ ಧೂಪದೀಪನೈವೇದ್ಯತಾಂಬೂಲನೀರಾಜನ ಪ್ರದಕ್ಷಿಣನಮಸ್ಕಾರಗಳಿಂದಲೂ ವೈಭವದಿಂದ ಪೂಜೆಮಾಡಿ ಚಂದ್ರನಂ ಪ್ರಾರ್ಥಿಸಬೇಕು.

೩. ಆ ಬಳಿಕ ಊಟಕ್ಕೆ ಕರೆದಿದ್ದ ಬ್ರಾಹ್ಮಣರನ್ನು ಎಲೆಯ ಮುಂದೆ ಕೂರಿಸಿ, ಭಕ್ಷ್ಯಭೋಜ್ಯಾದಿಗಳಿಂದಲೂ, ಹಾಲುಮೊಸರುತುಪ್ಪಗಳಿಂದಲೂ ಚೆನ್ನಾಗಿ ಊಟ ಮಾಡಿಸಿ ಚಂದ್ರನಿಗೆ ಪ್ರೀತಿಯಾಗಲೆಂದು ಹೇಳಬೇಕು.

**ಯಾವದಸ್ತಂ ನಯಾತೀಂದುಸ್ತಾವದೇವ ಸಮಾಚರೇತ್ ।**
**ಆಹಾರಂ ಗೋರಸಪ್ರಾಯ ಮಧಃಶಾಯೀ ನಿಶಂ ನಯೇತ್ ॥ ೪ ॥**

**ತತಃ ಸಂವತ್ಸರೇ ಪೂರ್ಣೇ ಸೌಮ್ಯಮಾಸೇ ದ್ವಿಜೋತ್ತಮ ।**
**ಬಾಲೇಂದೋಃ ಪೂಜನಂ ಕೃತ್ವಾ ಬ್ರಾಹ್ಮಣಾನಾಂ ಚ ಪೂಜನಂ ॥ ೫ ॥**

**ವಾಸಸೀ ರಸಕುಂಭಂ ಚ ಕಾಂಚನಂ ಚ ದ್ವಿಜಾತಯೇ ।**
**ದತ್ವಾ ಚ ಪೂಜಯಿತ್ವಾ ಚ ವ್ರತಪಾರಂಗತೋ ಭವೇತ್ ॥ ೬ ॥**

**ವ್ರತೇನಾನೇನ ಧರ್ಮಜ್ಞ ರೋಗಮೇವಂ ವ್ಯಪೋಹತಿ ।**
**ಸರ್ವಸೌಖ್ಯಂ ತಥಾ ದ್ರವ್ಯಂ ಪುಷ್ಟಿಂ ಚ ಮನುಜೋತ್ತಮ ॥ ೭ ॥**

---

೪. ಇಷ್ಟು ಕೆಲಸವನ್ನು ಚಂದ್ರೋದಯವಾಗಿ ಚಂದ್ರನು ಅಸ್ತನಾಗುವದರೊಳಗಾಗಿ ಮಾಡಿ ಪೂರೈಸಿಬಿಡಬೇಕು. ವ್ರತಮಾಡಿದ ಯಜಮಾನನು ಮಾತ್ರ ಮೊಸರನ್ನೋ ಹಾಲನ್ನೋ ತುಪ್ಪವನ್ನೋ ಕುಡಿದುಕೊಂಡು ಬರೀ ನೆಲದಮೇಲೆ ಮಲಗಿಕೊಂಡೇ ನಿದ್ದೆಮಾಡಿ ಆ ರಾತ್ರಿಯನ್ನು ಕಳೆಯಬೇಕು.

೫. ಈ ರೀತಿ ಒಂದು ವರ್ಷದವರೆಗೆ ಯಾರು ಈ ಆರೋಗ್ಯದ್ವಿತೀಯಾ ವ್ರತವನ್ನು ಮಾಡುವರೋ ಮತ್ತು ವರ್ಷದ ಕಡೆಯಾದ ಮತ್ತು ಮಾಸಶ್ರೇಷ್ಠವೆನಿಸಿದ ಮಾರ್ಗಶೀರ್ಷಮಾಸದಲ್ಲಿ ಬಾಲಚಂದ್ರನನ್ನು ಪೂಜಿಸಿ ಬ್ರಾಹ್ಮಣರನ್ನು ಪೂಜಿಸುವರೋ,

೬. ಮತ್ತು ಬ್ರಾಹ್ಮಣರಿಗೆ ವಸ್ತ್ರಗಳನ್ನೂ ಸುವರ್ಣದ ಉದಕುಂಭವನ್ನೂ ದಾನಮಾಡುವರೋ ಅಂತಹ ಮಹಾತ್ಮರು ವ್ರತಪಾರಂಗತರಾಗಿ ಪುಣ್ಯಶಾಲಿಗಳೆನಿಸಿಕೊಳ್ಳುವರು.

೭. ಈ ರೀತಿ ಹನ್ನೆರಡು ತಿಂಗಳೂ ತಪ್ಪದೆ ಯಾರು ಆರೋಗ್ಯದ್ವಿತೀಯಾ ವ್ರತವನ್ನು ಮಾಡಿಕೊಂಡು ಬರುವರೋ ಅಂತಹವರು ತಮ್ಮ ಸಕಲ ವ್ಯಾಧಿಗಳನ್ನೂ ಆಧಿಗಳನ್ನೂ ಸಹ ಕಳೆದುಕೊಂಡು ಸರ್ವಸೌಖ್ಯವನ್ನು ಹೊಂದುವರಲ್ಲದೆ ವಿಶೇಷವಾದ ಬಲವನ್ನೂ ದ್ರವ್ಯವನ್ನೂ ಸಹ ಹೊಂದುತ್ತಾರೆ.

ಕಾಮಂ ಸಮಾಪ್ನೋತ್ಯಥವ್ಯೈಕಮಿಷ್ಟಂ
ಯೇನ ವ್ರತೇನಾಥ ಸಮಸ್ತಧರ್ಮಂ ।
ಅಭ್ಯಾಸತಸ್ತಸ್ಯ ಸಮಸ್ತ ಕಾಮಾ
ನ್ನರಃ ಸಮಾಪ್ನೋತಿ ಕಿಮತ್ರ ಚಿತ್ರಂ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೆ ಮಾರ್ಕಂಡೇಯ ವಜ್ರ ಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಆರೋಗ್ಯದ್ವಿತೀಯಾ ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

೮. ಈ ರೀತಿ ಹನ್ನೆರಡು ತಿಂಗಳು ಮಾಡಿದರೆ ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಾರೆ. ಆದರೆ ಒಂದೇ ಒಂದು ತಿಂಗಳು ಸಮಸ್ತ ಧರ್ಮಮೂಲವಾದ ಈ ವ್ರತವನ್ನು ಮಾಡಿದಾಗ್ಯೂ ಸಹ ಅಂಥವರೂ ಸಹ ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಾರೆಂದು ಹೇಳುವುದರಲ್ಲಿ ಏನೇನೂ ಆಶ್ಚರ್ಯವಿಲ್ಲ. ಕೇಳಿದೆಯಾ? ಪರಶುರಾಮಾ! ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ ದ್ವಿತೀಯ ಖಂಡದಲ್ಲಿ ಆರೋಗ್ಯ ದ್ವಿತೀಯ ವ್ರತವೆಂಬ ಹೆಸರಿನ ಐವತ್ತೆಂಟನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕೋನಷಷ್ಟಿತಮೋಽಧ್ಯಾಯಃ

### ಪುಷ್ಕರ ಉವಾಚ

**ಸಂವತ್ಸರಾವಸಾನೇ ತು ಪಂಚದಶ್ಯಾಮುಪೋಷಿತಃ ।**
**ಪೂಜಯೇದ್ಭಾಸ್ಕರಂ ದೇವಂ ವರ್ಣಕೈಃ ಕಮಲೇ ಕೃತೇ ॥ ೧ ॥**

**ಶುಕ್ಲೇನ ಗಂಧಮಾಲ್ಯೇನ ಚಂದನೇನ ಸಿತೇನ ಚ ।**
**ತಥಾ ಕರ್ಪೂರೇಣ ಧೂಪೇನ ಘೃತದೀಪೇನ ಭಾರ್ಗವ ॥ ೨ ॥**

**ಅಪೂಪೈಃ ಸೈಕತೈರ್ದಧ್ನಾ ಪರಮಾನ್ನೇನ ಭೂರಿಣಾ ।**
**ಓದನೇನ ಚ ಶುಕ್ಲೇನ ಸಿತಾಲವಣಸರ್ಪಿಷಾ ॥ ೩ ॥**

**ಕ್ಷೀರೇಣ ಚ ಫಲೈಃ ಶುಕ್ಲೈರ್ವಹ್ನಿಬ್ರಾಹ್ಮಣತರ್ಪಣೈಃ ।**
**ಪೂಜಯಿತ್ವಾ ಜಗದ್ಧಾಮ ದಿನಭಾಗೇ ಚತುರ್ಥಕೇ । ॥ ೪ ॥**

---

### ಐವತ್ತೊಂಭತ್ತನೆಯ ಅಧ್ಯಾಯವು

೧. ಪುಷ್ಕರನು ಪುನಃ ಪರಶುರಾಮನನ್ನು ಕುರಿತು ಹೇಳಿದುದೇನೆಂದರೆ:— ವರ್ಷದ ಕಡೆಯಲ್ಲಿ ಬರುವ ಪೂರ್ಣಿಮೆಯ ದಿವಸ (ಫಾಲ್ಗುಣ ಶುದ್ಧ ೧೫—ಕಾಮನ ಹಬ್ಬ.) ಉಪವಾಸವಾಗಿದ್ದು ರಂಗವಲ್ಲಿಗಳಿಂದ ಕಮಲದಳವನ್ನು ಬರೆದು ಸೂರ್ಯನನ್ನು ಪೂಜಿಸಬೇಕು.

೨. ಗಂಧಮಾಲ್ಯಧೂಪದೀಪನೈವೇದ್ಯ ತಾಂಬೂಲ ಷೋಡಶೋಪಚಾರಪೂಜೆ ಮಾಡಿ ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಬೇಕು.

೩-೫. ದೇವರ ನೈವೇದ್ಯಕ್ಕೋಸ್ಕರ ಒಳ್ಳೇ ಭಕ್ಷ್ಯಗಳನ್ನು ಮಾಡಬೇಕು. ಪಾಯಸ, ಮೊಸರು, ಬೆಳ್ಳಗಿರುವ ಸಣ್ಣಕ್ಕಿಯ ಅನ್ನ, ಬೆಳ್ಳಗಿರುವ ಉಪ್ಪು, ಒಳ್ಳೆ ತುಪ್ಪ,

**ಆಹಾರಂ ಪ್ರಥಮಂ ಕುರ್ಯಾತ್ಸಘೃತಂ ಮನುಜೋತ್ತಮಃ ।**
**ರಸಂ ಚ ಮನುಜಶ್ರೇಷ್ಠ ಘೃತಹೀನಂ ವಿವರ್ಜಯೇತ್ ॥ ೫ ॥**

**ಭುಕ್ತ್ವಾ ಚ ಸಕೃದೇವಾನ್ನಂ ನಾಹಾರಂ ಸಮುಪಾಚರೇತ್ ।**
**ಪಾನೀಯಪಾನಂ ಕುರ್ವೀತ ಬ್ರಾಹ್ಮಣಾನುಮತೇ ಪುನಃ ॥ ೬ ॥**

**ಸಂವತ್ಸರಮಿದಂ ಕೃತ್ವಾ ತತಃ ಕೃತ್ವಾ ತ್ರಯೋದಶಂ ।**
**ಪೂಜನಂ ದೇವದೇವಸ್ಯ ತಸ್ಮಿನ್ನಹನಿ ಭಾರ್ಗವ ॥ ೭ ॥**

**ಸಮಾಪಯೇದ್ವ್ರತಂ ಪುಣ್ಯಂ ರಾಮ ಕುಂಭಂ ದ್ವಿಜಾತಯೇ ।**
**ಸಹಿರಣ್ಯಂ ಸವಸ್ತ್ರಂ ಚ ತಥಾ ದದ್ಯಾದ್ದ್ವಿಜೋತ್ತಮ ॥ ೮ ॥**

---

ಹಾಲು, ಹಣ್ಣುಗಳು (ಇವು ಬಿಳೀ ಬಣ್ಣದ ಹಣ್ಣುಗಳಾಗಿಯೇ ಇರಬೇಕು.) ಇವುಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ಬ್ರಾಹ್ಮಣರಿಗೆ ಸಮಾರಾಧನೆ ಮಾಡಿಸಿ ನಾಲ್ಕನೆ ಯಾಮದಲ್ಲಿ ಲೋಕನಿಯಾಮಕನಾದ ಭಗವಂತನ ಪೂಜೆಯನ್ನು ಮಾಡಬೇಕು. ಊಟಕ್ಕೆ ತುಪ್ಪವನ್ನು ಉಪಯೋಗಿಸಬೇಕು. ತುಪ್ಪವಿಲ್ಲದ ಊಟವನ್ನು ಮಾಡಬಾರದು.

೬. ಯಜಮಾನನು ಸ್ವಲ್ಪ ಅನ್ನವನ್ನು ಉಣ್ಣಬೇಕೇ ಹೊರತು ಹೊಟ್ಟೆ ತುಂಬಾ ಉಣ್ಣಬಾರದು. ಆದರೆ ಬ್ರಾಹ್ಮಣರ ಅಪ್ಪಣೆಯನ್ನು ಪಡೆದು ಪಾನೀಯವನ್ನು ಉಪಯೋಗಿಸಬಹುದು.

೭. ಈ ರೀತಿ ಒಂದು ವರ್ಷಕಾಲ ಮಾಡಿ ವರ್ಷಾನಂತರ ಹದಿಮೂರನೇ ತಿಂಗಳಲ್ಲಿ ಬರುವ ಪಾಡ್ಯದ ದಿನ (ಚೈತ್ರ ಶುದ್ಧ ೧.) ಹಗಲು ದೇವದೇವನಾದ ಸೂರ್ಯನನ್ನು ಪೂಜೆಮಾಡಿ ವ್ರತಸಮಾಪ್ತಿ ಮಾಡಬೇಕು.

೮. ವ್ರತವೆಲ್ಲಾ ಸಂಪೂರ್ಣವಾದೊಡನೆಯೇ ಬ್ರಾಹ್ಮಣರಿಗೆ ಕಲಶವಸ್ತ್ರ ಪ್ರತಿಮೆಗಳನ್ನು ಯಥಾಶಕ್ತಿಯಾಗಿ ದಕ್ಷಿಣಾಸಹಿತವಾಗಿ ಕೊಡಬೇಕು.

**ವ್ರತೇನಾನೇನ ಧರ್ಮಜ್ಞ ರೋಗಮೇವ ವ್ಯಪೋಹತಿ ।**
**ಆರೋಗ್ಯಮಾಪ್ನೋತಿ ಗತಿಂ ತಥಾಽಗ್ರ್ಯಾಂ**
**ಯಶಸ್ತಥಾಽಗ್ರ್ಯಂ ವಿಪುಲಾಂಶ್ಚ ಭೋಗಾನ್ ।**
**ವ್ರತೇನ ಸಮ್ಯಕ್ಪುರುಷೋ ಧನಾರ್ಥೀ**
**ಸಂಪೂಜಯೇದ್ಯಶ್ಚ ಜಗತ್ಪ್ರಧಾನಂ ॥ ೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಆರೋಗ್ಯಪ್ರತಿಪನ್ನಾಮೈಕೋನಷಷ್ಟಿತಮೋಽಧ್ಯಾಯಃ**

---

೯. ಈ ರೀತಿ ವ್ರತಮಾಡೋಣದರಿಂದ ಸಕಲ ರೋಗಗಳೂ ಪರಿಹಾರವಾಗುವುವು. ಈ ವ್ರತವನ್ನಾರು ಮಾಡುವರೋ ಅವರು ಆರೋಗ್ಯಭಾಗ್ಯಸಂಪನ್ನರಾಗುವರಲ್ಲದೆ ಲೋಕೋತ್ತರವಾದ ಕೀರ್ತಿಯನ್ನೂ, ವಿಪುಲವಾದ ಭೋಗಗಳನ್ನೂ, ಯಥೇಚ್ಛವಾದ ಐಶ್ವರ್ಯವನ್ನೂ ಜಗತ್ಪ್ರಧಾನನಾದ ಮಹಾವಿಷ್ಣುವಿನ ಅನುಗ್ರಹದಿಂದ ಹೊಂದುವರು.

ಟಿಪ್ಪಣಿ: ಈ ವ್ರತಕ್ಕೆ ಆರೋಗ್ಯಪ್ರತಿಪದ್ವ್ರತವೆಂದು ವ್ಯಾಸರು ಹೆಸರಿಟ್ಟಿದ್ದಾರೆ. ಈ ವ್ರತವು ವರ್ಷದ ಕೊನೇ ಪೂರ್ಣಿಮೆಯಲ್ಲಿ ಮಾಡಲ್ಪಡಬೇಕೆಂದೂ, ಹದಿಮೂರನೆಯ ತಿಂಗಳಲ್ಲಿ ವ್ರತವನ್ನು ಮುಗಿಸಿ ಭಗವದಾರಾಧನೆ ಮಾಡಬೇಕೆಂದೂ ಉಕ್ತವಾಗಿದೆ.

ಈಗ ನಾವು ಉಪಯೋಗಿಸುತ್ತಿರುವ ಪಂಚಾಂಗಗಳಲ್ಲಿ ವರ್ಷಾದಿಯಾದ ಚೈತ್ರ ಶುದ್ಧ ಪ್ರತಿಪತ್ತಿಗೆ ಆರೋಗ್ಯಪ್ರತಿಪತ್ತೆಂದು ಹೆಸರಿಟ್ಟು ಹಾಕುತ್ತಿದ್ದಾರೆ. ಈ ಸಂದರ್ಭಕ್ಕೂ, ಪುರಾಣ ವಚನಕ್ಕೂ ವ್ಯತ್ಯಾಸ ಕಂಡುಬರುವುದು. ನಾವು ನೋಡಿದುದರಲ್ಲಿ ಈ ಪುರಾಣೋಕ್ತವ್ರತವು ಎಲ್ಲಿಯೂ ಅನುಷ್ಠಾನದಲ್ಲಿರುವಂತೆ ಕಾಣುವುದಿಲ್ಲ. ಈ ಪುರಾಣವು ಪ್ರಪ್ರಥಮದಲ್ಲಿ ಪ್ರಕಟವಾದ ಬದರಿ, ಹರಿದ್ವಾರ, ಕೋಸಲ, ಕಾಶೀ ದೇಶಗಳಲ್ಲಿ ಇದರ ಆಚರಣೆಯು ಎಂತಿರುವುದೋ ತಿಳಿಯದು. ವಿಂಧ್ಯಪರ್ವತಕ್ಕೆ ಉತ್ತರದಲ್ಲಿರುವ ದೇಶಗಳ ಆಚರಣೆಗಳೂ, ಸಂಕಲ್ಪವೂ, ಸಂವತ್ಸರಾದಿಗಳೂ ದಕ್ಷಿಣ ದೇಶದ ಸಂಪ್ರದಾಯಕ್ಕಿಂತಲೂ ತೀರ ಭಿನ್ನವಾಗಿದೆ. ವಿಂಧ್ಯಗಿರಿಯ ದಕ್ಷಿಣ ದಿಕ್ಕಿಗೆ ಈಗ ಪಾರ್ಥಿವ ಸಂವತ್ಸರವಾದರೆ, ಉತ್ತರ ದಿಗ್ದೇಶಗಳಿಗೆಲ್ಲಾ ಬಾರ್ಹ

ಸ್ವತ್ಯಮಾನೇನ ಹೇವಿಳಂಬ ಸಂವತ್ಸರವೆಂದು ಪಂಚಾಂಗದಲ್ಲಿ ಬರೆದಿರುವುದನ್ನು ಎಲ್ಲರೂ ನೋಡಿಯೇ ಇದಾರೆ. ಫಾಲ್ಗುಣ ಮಾಸದಿಂದ ಇನ್ನೊಂದು ಮಾಸದ ವರಿವಿಗೆ ಹನ್ನೆರಡು ತಿಂಗಳೆಂದೂ, ಮುಂದಿನ ಚೈತ್ರಕ್ಕೆ ಹದಿಮೂರನೇ ತಿಂಗಳೆಂದೂ ಲೆಕ್ಕಮಾಡಿಕೊಂಡು, ಈ ಹದಿಮೂರನೆಯ ತಿಂಗಳಾದ ಚೈತ್ರಮಾಸದ ಯುಗಾದಿಯ ದಿವಸ ಈ ಆರೋಗ್ಯಪ್ರತಿಪದ್ವ್ರತವನ್ನು ಮಾಡಬೇಕೆಂದು ವ್ಯಾಸರ ತಾತ್ಪರ್ಯವಿರ ಬಹುದೆಂದೂಹಿಸಿ, ಆ ವ್ಯಾಸ ತಾತ್ಪರ್ಯ ನಿರ್ಣಯವನ್ನಿಲ್ಲಿ ಪ್ರಕಟಿಸಲಾಗಿದೆ. ಇದರ ಮೇಲೂ ಇದರ ನಿರ್ಣಯಾಂಶದಲ್ಲಿ ಚಿಕಿತ್ಸಕ ಬುದ್ಧಿಯುಳ್ಳ ಅನುಭವಿಗಳು ಏನಾದರೂ ವಿಮರ್ಶಿಸುವುದಾದರೆ ಆ ವಿಚಾರವನ್ನು ಈ ಅನುವಾದಕನಿಗೆ ದಯಮಾಡಿ ತಿಳಿಸ ಬೇಕೆಂದು ಕೋರುತ್ತೇನೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ಎರಡನೇ ಖಂಡದಲ್ಲಿ ಪುಷ್ಕರೋಪಾಖ್ಯಾನದಲ್ಲಿ ಆರೋಗ್ಯಪ್ರತಿಪದ್ವ್ರತವೆಂಬ ಐವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು.



॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಷಷ್ಟಿತಮೋಽಧ್ಯಾಯಃ

### ಪುಷ್ಕರ ಉವಾಚ

**ಶುಕ್ಲಪಕ್ಷಾವಸಾನೇತು ಯದ್ರಾಮ ದಿನಪಂಚಕಂ ।**
**ತತ್ರ ಸಂಪೂಜಯೇದ್ವಿಷ್ಣುಂ ವಿಧಿನಾ ಯೇನ ತಂ ಶೃಣು ॥ ೧ ॥**

**ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಸ್ತಥೈವ ಚ ।**
**ಏಕೈಕೇನ ಚರೇತ್ಸ್ನಾನಮೇಕಾದಶ್ಯಾದಿಷು ಕ್ರಮಾತ್ ॥ ೨ ॥**

---

### ಅರವತ್ತನೆಯ ಅಧ್ಯಾಯವು

ಪುಷ್ಕರನು ಪರಶುರಾಮನೊಡನೆ ಹೇಳುತ್ತಾನೆ:— ಪ್ರತಿತಿಂಗಳ ಶುಕ್ಲಪಕ್ಷದ ಕಡೆಯ ಐದು ದಿವಸಗಳಲ್ಲಿಯೂ (ಏಕಾದಶಿಯಿಂದ ಹಿಡಿದು ಪೂರ್ಣಿಮಾ ಪೂರ್ತಿಯಾಗಿ) ಈ ಕೆಳಗೆ ಹೇಳಿರುವ ವಿಧಿಯನ್ನನುಸರಿಸಿ ಮಹಾವಿಷ್ಣುವನ್ನು ಪೂಜಿಸಬೇಕು. ಆ ಕ್ರಮವನ್ನು ನಿನ್ನೊಡನೆ ಹೇಳುವೆನು, ಕೇಳು.

೨. ಏಕಾದಶಿಯ ದಿನ ಗೋಮೂತ್ರದಿಂದ (ಗಂಜಲ) ಸ್ನಾನ, ದ್ವಾದಶೀ ದಿವಸ ಸಗಣಿ ಕದಡಿದ ನೀರು, ತ್ರಯೋದಶೀ ದಿವಸ ಹಸುವಿನ ಹಾಲಿನಿಂದ ಸ್ನಾನ, ಚತುರ್ದಶೀ ದಿವಸ ಮೊಸರಿನಿಂದ ಸ್ನಾನ, ಪೂರ್ಣಿಮಾ ದಿನ ತುಪ್ಪದ ಸ್ನಾನ, ಪ್ರತಿ ಸ್ನಾನಾನಂತರವೂ ಶುದ್ಧೋದಕ ಸ್ನಾನ, ಈ ಪ್ರಕಾರ ಐದು ದಿವಸವೂ ಸ್ನಾನಮಾಡಿ ಶ್ರೀಹರಿಯನ್ನು ಪೂಜಿಸಬೇಕು.

ಕೌಪತಾಡಾಗನಾದೇಯ್ಯೈಃ ಪದ್ಮಿನೀಸಾರಸ್ಯೈರ್ಜಲೈಃ ।
ಕರ್ತವ್ಯಂ ಕ್ರಮಶಃ ಸ್ನಾನಂ ಸ್ನಾತಃ ಸಂಪೂಜಯೇದ್ಧರಿಂ ॥ ೩ ॥

ತೈಲಮಿಕ್ಷುರಸಂ ಕ್ಷೌದ್ರಂ ಕ್ಷೀರಂ ಸರ್ಪಿಶ್ಚ ಭಾರ್ಗವ ।
ಸ್ನಾಪಯೇದ್ದೇವದೇವಸ್ಯ ಕರ್ತವ್ಯಂ ಸ್ಯಾದ್ದಿನಕ್ರಮಾತ್ ॥ ೪ ॥

ಕಾಲಾಗುರುಮುಶೀರಂ ಚ ತಥಾ ಜಾತಿ ಫಲಂ ದ್ವಿಜ ।
ಕರ್ಪೂರಂ ಚಂದನಂ ಚೈವ ಕಲ್ಪಯೇದನುಲೇಪನೇ ॥ ೫ ॥

ಕುಸುಮೇಷ್ವಂಬುಜಾತೇಷು ಗಂಧವತ್ಸು ಸಿತೇಷು ಚ ।
ಏಕೈಕಂ ಕಲ್ಪಯೇಜ್ಜಾತಿಂ ಶ್ರದ್ಧಯಾ ದಿವಸಕ್ರಮಾತ್ ॥ ೬ ॥

---

೩. ಪ್ರತಿದಿವಸವೂ ಈ ಪಂಚಗವ್ಯಸ್ನಾನಗಳನ್ನು ಮಾಡುವುದಕ್ಕಿಂತ ಮುಂಚೆ ಭಾವಿ, ಕೆರೆ, ಕೊಳಗಳಿಂದಲಾಗಲಿ, ನಳಿನೀ ಸರಸ್ಸುಗಳಿಂದಾಗಲಿ ಶುದ್ಧೋದಕವನ್ನು ತಂದಿಟ್ಟುಕೊಂಡು ಪಂಚಗವ್ಯಸ್ನಾನಾನಂತರ ಮೇಲೆ ಹೇಳಿದಂತೆ ಚೊಕ್ಕಟವಾಗಿ ಸ್ನಾನಮಾಡಿ, ಆಮೇಲೆ ಮೈಯೊರಸಿಕೊಂಡು ಶ್ರೀಮನ್ಮಹಾವಿಷ್ಣುವನ್ನು ಪೂಜೆ ಮಾಡಬೇಕು.

೪. ಮತ್ತು ದೇವರಿಗೂ ಸಹ ದಿನಕ್ರಮವನ್ನನುಸರಿಸಿ ಏಕಾದಶಿಯಿಂದ ಆರಂಭಮಾಡಿ ಎಣ್ಣೆ, ಕಬ್ಬಿನಹಾಲು, ಜೇನುತುಪ್ಪ, ಹಾಲು, ತುಪ್ಪಗಳಿಂದ ಅಭಿಷೇಕ ಮಾಡಿ ಪುನರಪಿ ಶುದ್ಧೋದಕೇನ ಸ್ನಪಯಾಮಿ ಎಂದು ಹೇಳಿಕೊಂಡು, ಆ ಬಳಿಕ ಉದ್ವರ್ತನಮಾಡಿಕೊಂಡು ದೇವರ ಸಾಲಿಗ್ರಾಮವನ್ನು ಚೆನ್ನಾಗಿ ಒರೆಸಿ ಸಂಪುಟದಲ್ಲಿಡಬೇಕು.

೫. ಆಮೇಲೆ ಧೂಪವನ್ನು ಹಾಕಿ (ಕಾಲಾಗರು ಮತ್ತು ಲಾಮಂಚದ ಹೊಗೆ) ಜಾಜಿ ಹೂವನ್ನು ಪೂಜೆಮಾಡಿ ಪಚ್ಚಕರ್ಪೂರ, ಕುಂಕುಮಕೇಸರಿಗಂಧದಿಂದ ಸ್ವಾಮಿಗೆ ಅನುಲೇಪನ ಮಾಡಬೇಕು. ಒಳ್ಳೇ ಸುವಾಸನೆಯಿಂದ ಕೂಡಿದ ಬೆಳ್ಳಗಿರುವ ಮತ್ತು ನೀರಿನಲ್ಲಿ ಹುಟ್ಟುವ ಒಂದೊಂದು ಜಾತಿ ಕಮಲವನ್ನೂ ಸಹ ದೇವರಿಗೆ ಐದು ದಿವಸವೂ ಕ್ರಮವಾಗಿ ಸಮರ್ಪಿಸಬೇಕು.

೬-೭. ಈ ಐದುದಿವಸವೂ ದೇವರ ಮುಂದೆ ತುಪ್ಪದ ದೀಪವನ್ನೇ ಹತ್ತಿಸಬೇಕು. ಮೊದಲನೆಯ ದಿನ ಕಪ್ಪು ಹಸುವಿನ ತುಪ್ಪ, ಎರಡನೆ ದಿನ ಬಿಳಿ ಹಸುವಿನ

ಕೃಷ್ಣಾ ಗೌರಾ ತಥಾ ತಾಮ್ರಾ ಕಪಿಲಾ ಚ ಸಿತಾ ತಥಾ ।
ಯಾ ಧೇನುಸ್ತದ್ಘೃತಂ ದೇಯಂ ದೀಪಾರ್ಥಂ ದಿವಸಕ್ರಮಾತ್ ॥ ೭ ॥

ಮಾಷಮುದ್ಗಕ ಕುಲ್ಮಾಷ ಚಣಕಾನಾಂ ತಿಲಸ್ಯಚ ।
ಭಕ್ಷ್ಯಾಣಿ ವಿನಿವೇದ್ಯಾನಿ ತಥೈವ ದಿವಸಕ್ರಮಾತ್ ॥ ೮ ॥

ಫಾಣಿತಂ ಚ ಗುಡಂ ಚೈವ ತಥಾ ಮತ್ಸ್ಯಂಡಿಕಾ ಶುಭಾ ।
ಖಂಡಂ ಚ ಶರ್ಕರಾಂ ಚೈವ ಕ್ರಮಶೋ ವಿನಿವೇದಯೇತ್ ॥ ೯ ॥

ಕ್ಷೀರವೃಕ್ಷಸ್ಯ ಸಮಿಧಸ್ತಥಾ ದೂರ್ವಾಸ್ತಿಲಾನಪಿ ।
ಸಿದ್ಧಾರ್ಥಕಾನ್ಯಥಾಜ್ಯಂ ಚ ಭಾವಯೇದ್ದಿವಸಕ್ರಮಾತ್ ॥ ೧೦ ॥

ಅನಿರುದ್ಧಾಯ ದೇವಾಯ ಪ್ರದ್ಯುಮ್ನಾಯ ತಥೈವ ಚ ।
ಸಂಕರ್ಷಣಾಯ ದೇವಾಯ ವಾಸುದೇವಾಯ ಚಾಪ್ಯಥ ॥ ೧೧ ॥

---

ತುಪ್ಪ, ಮೂರನೆಯ ದಿವಸ ಕೆಂಪು ಹಸುವಿನ ತುಪ್ಪ, ನಾಲ್ಕನೆಯ ದಿವಸ ಕಪಿಲವರ್ಣ (ನಶ್ಯದ ಬಣ್ಣ)ದ ಹಸುವಿನ ತುಪ್ಪ, ಐದನೆಯ ದಿವಸವೂ ಬಿಳಿ ಹಸುವಿನ ತುಪ್ಪದಿಂದ ಬತ್ತಿಯನ್ನು ನೆನೆಸಿ ದೀಪ ಹತ್ತಿಸಬೇಕು.

೮-೯. ದೇವರ ನೈವೇದ್ಯಕ್ಕೆ ಮೊದಲನೆಯ (ಏಕಾದಶಿ) ದಿನ ಉದ್ದಿನೊಡೆ, ಎರಡನೆಯ (ದ್ವಾದಶಿ) ದಿನ ಹೆಸರೊಡೆ, ಮೂರನೆಯ ದಿವಸ ಹಲಸಂದೆ ಒಡೆ, ನಾಲ್ಕನೆಯ ದಿನ ಕಡಲೇಬೇಳೆ ಆಂಬೊಡೆ, ಐದನೆಯ (ಪೂರ್ಣಿಮೆ) ದಿನ ಎಳ್ಳಿನ ಚಿಗಳಿ, ಇದೇ ಮೇರೆ ಮೊಗದುಂಸಕ್ಕರೆ, ಬಿಸಿಬೆಲ್ಲದುಂಡೆ, ಕಲ್ಲುಸಕ್ಕರೆ, ಮುಂತಾದ ಸಕ್ಕರೆಯ ಭೇದಗಳನ್ನು ನಿವೇದನೆ ಮಾಡಬೇಕು.

೧೦. ಐದು ದಿವಸವೂ ಹೋಮಮಾಡುವುದಕ್ಕಾಗಿ ಅತ್ತಿ ಸಮಿತ್ತು, ದೂರ್ವೆ, ಎಳ್ಳು, ಸಾಸುವೆ, ತುಪ್ಪಗಳನ್ನು ಕ್ರಮವಾಗಿ ಉಪಯೋಗಿಸಬೇಕು.

೧೧. ಕಡೆಯ ದಿವಸ ಪೂಜೆಮಾಡಬೇಕಾದ ದೇವತೆಗಳಾರಾರೆಂದರೆ:— ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರುಗಳು.

ನಾಮ್ನಾ ತು ಜುಹುಯಾದ್ವಹ್ನೌ ಪ್ರಣವೇನಾಂತಿಮೇಽಹನಿ ।
ಅಯಃ ಸೀಸಂ ತಥಾ ತಾಮ್ರಂ ರಾಜತಂ ಕನಕಂ ತಥಾ ॥ ೧೨ ॥

ದಕ್ಷಿಣಾರ್ಥಂ ಪ್ರದಾತವ್ಯಂ ದ್ವಿಜೇಭ್ಯೋ ದಿವಸಕ್ರಮಾತ್ ।
ನಕ್ತಂ ಚ ಗೋರಸಪ್ರಾಯಂ ಭೋಕ್ತವ್ಯಂ ತೈಲವರ್ಜಿತಂ ॥ ೧೩ ॥

ಭೂಶೋಧನಂ ಚ ಕರ್ತವ್ಯಂ ದೇವಸ್ಯ ಪುರತಸ್ತಥಾ ।
ಗೀತವಾದ್ಯಸ್ತವೈಶ್ಚೈವ ಪೂಜಯೇದ್ದಿನಪಂಚಕಂ ॥ ೧೪ ॥

ಏವಂ ಸಂವತ್ಸರಂ ಕೃತ್ವಾ ಸರ್ವಾನ್ರೋಗಾನ್ವ್ಯಪೋಹ್ಯತಿ ।
ಗ್ರಹಣೇ ಚ ವ್ರತಸ್ಯಾಸ್ಯ ನ ಕಾಲನಿಯಮಃ ಸ್ಮೃತಃ ॥ ೧೫ ॥

ನಿತ್ಯಾಭ್ಯಾಸೇನ ಚೈವಾಸ್ಯ ವಿಷ್ಣುಲೋಕೇ ಮಹೀಯತೇ ।
ವ್ರತಂ ಶ್ರೇಷ್ಠಮಿದಂ ಪ್ರೋಕ್ತಂ ಮಯಾ ತೇ ಭೃಗುನಂದನ ॥ ೧೬ ॥

---

೧೨. ಕಡೆಯ ದಿವಸ ಪ್ರಣವಸಹಿತವಾಗಿಯೂ, ಚತುರ್ಥ್ಯಂತ್ಯವಾಗಿಯೂ ಇರುವ ನಾಮಗಳಿಂದ ಆಜ್ಯಾಹುತಿಯನ್ನು ಕೊಡಬೇಕು. ಹೋಮಾನಂತರ ಬ್ರಾಹ್ಮಣರಿಗೆ ದಕ್ಷಿಣೆಗೆ ಬದಲಾಗಿ ಕಬ್ಬಿಣ-ಸೀಸ-ತಾಮ್ರ-ಬೆಳ್ಳಿ-ಚಿನ್ನವೆಂಬ ಈ ಐದು ವಿಧ್ಮಲೋಹಗಳನ್ನೂ ದಿವಸಕ್ರಮದಿಂದ ಕೊಡಬೇಕು.

೧೩. ರಾತ್ರಿವರಿವಿಗೆ ಉಪವಾಸವಿದ್ದು ರಾತ್ರಿಹೊತ್ತು ಭೋಜನಮಾಡಬೇಕು. ಎಣ್ಣೆಯ ಪದಾರ್ಥಗಳನ್ನು ಭುಜಿಸಬಾರದು.

೧೪. ಊಟವಾದ ಮೇಲೆ ದೇವರ ಮುಂದಿನ ಜಾಗವನ್ನು ಚೆನ್ನಾಗಿ ಶೋಧನ ( ಸ್ವಚ್ಛ ) ಮಾಡಬೇಕು. ಪ್ರತಿದಿವಸ ರಾತ್ರಿಯೂ ದೇವರ ಮುಂದೆ ಭಜನೆ ಮಾಡುತ್ತಲೂ ಗೀತವಾದ್ಯಧ್ವನಿಗಳಿಂದಲೂ, ದೇವರ ಸ್ತೋತ್ರಗಳಿಂದಲೂ ಕಾಲಹರಣ ಮಾಡಬೇಕು.

೧೫. ಈ ರೀತಿ ಒಂದು ವರ್ಷಕಾಲ ಈ ವ್ರತವನ್ನು ಮಾಡಿದರೆ ಬದುಕಿರುವವರಿವಿಗೂ ಯಾವ ರೋಗವೂ ಬರುವುದಿಲ್ಲ. ಈ ವ್ರತವನ್ನು ಹಿಡಿಯಬೇಕಾದರೆ ಕಾಲನಿಯಮವೇನೂ ಇಲ್ಲ. ಯಾವಾಗ ಬೇಕಾದರೂ ಮಾಡಬಹುದು.

೧೬. ಈ ವ್ರತವನ್ನು ಐದುದಿನ ಮಾತ್ರವೇ ಅಲ್ಲ. ನಿತ್ಯವೂ ಮಾಡುವ ಅಭ್ಯಾಸವನ್ನಿಟ್ಟುಕೊಂಡರೆ ಅಂಥವನಿಗೆ ನಿಜವಾಗಿ ವಿಷ್ಣುಲೋಕ ಪ್ರಾಪ್ತಿಯಾಗುವುದು. ಇಂತಹ ಶ್ರೇಷ್ಠವಾದ ವ್ರತವನ್ನು ನಿನಗೆ ತಿಳಿಸಿರುತ್ತೇನೆ, ಕೇಳಯ್ಯಾ !

ಧನ್ಯಂ ಯಶಸ್ಯಂ ರಿಪುನಾಶಕಾರಿ
ಸೌಭಾಗ್ಯದಂ ಪಾಪಹರಂ ಪವಿತ್ರಂ ।
ಆಯುಷ್ಯಮಗ್ರ್ಯಂ ಸುಗತಿಪ್ರದಂ ಚ
ವ್ರತೋತ್ತಮಂ ವಿಘ್ನವಿನಾಶನಂ ಚ　　॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋऽತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಆರೋಗ್ಯವ್ರತಂನಾಮ ಷಷ್ಟಿತಮೋऽಧ್ಯಾಯಃ

---

೧೭. ಎಲೈ ಪರಶುರಾಮನೇ! ಕೇಳು. ಈ ಉತ್ತಮವಾದ ವ್ರತವನ್ನಾರು ಮಾಡುವರೊ, ಅವರೇ ಧನ್ಯರು. ಅವರೇ ಯಶಸ್ವಿಗಳು. ಸಕಲ ಶತ್ರುಗಳನ್ನೂ ಅವರು ನಾಶಪಡಿಸಲು ಸಮರ್ಥರು. ಅವರು ಮಾಡಿದ ಸಕಲ ಪಾಪಗಳೂ ಪರಿಹಾರವಾಗುವುವು. ಅವರೇ ಮಹಾಸೌಭಾಗ್ಯಶಾಲಿಗಳು. ಇದನ್ನು ಮಾಡುವವರು, ಆಯುಷ್ಮಂತರಾಗಿಯೂ, ಸಕಲ ವಿಘ್ನಗಳನ್ನು ಪರಿಹಾರಮಾಡಿಕೊಂಡವರಾಗಿಯೂ ಬಾಳುವರಲ್ಲದೆ ಕಡೆಯಲ್ಲಿ ಒಳ್ಳೆಯ ದಿವ್ಯಲೋಕವಾಸವನ್ನನುಭವಿಸುತ್ತಾರೆ. ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಎರಡನೆಯ ಖಂಡದಲ್ಲಿ ಆರೋಗ್ಯವ್ರತವೆಂಬ ಹೆಸರಿನ ಅರವತ್ತನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

## ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

### ಏಕಷಷ್ಟಿತಮೋಽಧ್ಯಾಯಃ

**ಪುಷ್ಕರ ಉವಾಚ**

**ರಾಜಧರ್ಮವ್ರತಂ ಶ್ರೇಷ್ಠಂ ಕೃತ್ವಾ ಪುರುಷವಿಗ್ರಹಮ್ ।**
**ಪುರುಷಾನ್ವಿನಿಯುಂಜೀತ ಚೋತ್ತಮಾಧಮಕರ್ಮಸು ॥ ೧ ॥**

**ಗ್ರಾಮಸ್ಯಾಧಿಪತಿಂ ಕುರ್ಯಾದ್ದಶಗ್ರಾಮಾಧಿಪಂ ತಥಾ ।**
**ಶತಗ್ರಾಮಾಧಿಪಂ ಚಾಪಿ ತಥೈವ ವಿಷಯೇಶ್ವರಂ ॥ ೨ ॥**

---

## ಅರವತ್ತೊಂದನೆಯ ಅಧ್ಯಾಯವು

೧. ಪುಷ್ಕರನು ಪುನಃ ಹೇಳುತ್ತಾನೆ:— ಮಹಾರಾಜನಾದವನು ಶ್ರೇಷ್ಠತಮವೆನಿಸಿದ ಮತ್ತು ಪುರುಷವಿಗ್ರಹರೂಪವಾದ ರಾಜಧರ್ಮವೆಂಬ ವ್ರತವನ್ನು ಆರಂಭಿಸಿದ ಬಳಿಕ (ರಾಜ್ಯಭಾರವನ್ನು ಸ್ವೀಕರಿಸಿದ ಬಳಿಕ) ರಾಜ್ಯದ ಕಾರ್ಯಗಳು ಸುಲಲಿತವಾಗಿ ನಡೆಯುವುದಕ್ಕೋಸ್ಕರ ಕೆಲಸಗಳ ಬಲಾಬಲಗಳನ್ನು ಚೆನ್ನಾಗಿ ತಿಳಿದು, ಆ ಕೆಲಸಗಳಿಗೆ ತಕ್ಕಂತಹ ಉತ್ತಮ ಧರ್ಮಕರ್ಮಗಳಿಗೆ ಅನುಸಾರವಾಗಿ ಜನರನ್ನು ನೇಮಿಸಬೇಕು.

೨. ಒಂದು ಗ್ರಾಮಕ್ಕೆ ಒಬ್ಬ ಯಜಮಾನನನ್ನು ನಿಯಮಿಸಬೇಕು. (ಇವನನ್ನು ಈಗ ಶಾನುಭೋಗನೆಂದು ಹೇಳಬಹುದು.) ಬಳಿಕ ಇಂತಹ ಹತ್ತು ಗ್ರಾಮಗಳ ವಿಚಾರಣೆಗೆ ಒಬ್ಬ ಅಧಿಕಾರಿಯನ್ನು ನೇಮಿಸಬೇಕು. (ಈ ಅಧಿಕಾರಕ್ಕೆ ಈಗ ಶೇಕದಾರಿ ಅಥವಾ ರೆವಿನ್ಯೂ ಇನ್ಸ್‌ಪೆಕ್ಟರೆಂದು ಹೆಸರಿದೆ.) ಮತ್ತು ಇಂತಹ ನೂರುಗ್ರಾಮಗಳ ಆಡಳಿತಗಳನ್ನು ನೋಡಲು ದೊಡ್ಡ ಅಧಿಕಾರಿಯನ್ನು ನೇಮಿಸಬೇಕು. (ಈ ಅಧಿಕಾರಕ್ಕೆ ಅಮಲ್ದಾರಿ ಎಂದು ಕರೆಯುವರು.) ಇಂತಹ ಅಧಿಕಾರಿಗಳ ಮೇಲ್ಪಟ್ಟ ವಿಚಾರಣೆಗೆ ರಾಜ್ಯವಿಸ್ತರಣಾನುರೂಪವಾಗಿ ವಿಷಯೇಶ್ವರರನ್ನು (ಡೆಪ್ಯುಟಿಕಮಿಷನರ್- ಎಕ್ಸೈಜ್, ರೆವಿನ್ಯೂ, ಮುಜರಾಯಿ ಮುಂತಾದ ಇಲಾಖಾ ಕಮಿಷನರರನ್ನು) ಗೊತ್ತುಮಾಡಿಕೊಳ್ಳಬೇಕು.

**ತೇಷಾಂ ಭಾಗವಿಭಾಗಶ್ಚ ಭವೇತ್ಕರ್ಮಾನುರೂಪತಃ ।**
**ನಿತ್ಯಮೇವ ತಥಾ ಕಾರ್ಯಂ ತೇಷಾಂ ಚಾರೈಃ ಪರೀಕ್ಷಯೇತ್ ॥ ೩ ॥**

**ಗ್ರಾಮದೋಷಾನ್ಸಮುತ್ಪನ್ನಾನ್ಗ್ರಾಮೇಶಃ ಪ್ರಶಮಂ ನಯೇತ್ ।**
**ಅಶಕ್ತೌ ದೇಶಪಾಲಸ್ಯ ಸ ತು ಗತ್ವಾ ನಿವೇದಯೇತ್ । ॥ ೪ ॥**

**ಶ್ರುತ್ವಾ ತು ದೇಶಪಾಲೋಽಪಿ ತತ್ರ ಯುಕ್ತಿಮುಪಾಚರೇತ್ ।**
**ಸೋಽಪ್ಯಶಕ್ತಃ ಶತೇಶಾಯ ಯಥಾವದ್ವಿನಿವೇದಯೇತ್ ॥ ೫ ॥**

**ಶತೇಶೋ ವಿಷಯೇಶಾಯ ಸೋಽಪಿ ರಾಜ್ಞೇ ನಿವೇದಯೇತ್ ।**
**ಅಶಕ್ತೌ ಶಕ್ತಿಮಾನ್ ರಾಮ ಸ್ವಯಂ ಯುಕ್ತಿಮುಪಾಚರೇತ್ ॥ ೬ ॥**

---

೩. ಈ ಅಧಿಕಾರಿಗಳ ಭಾಗವಿಭಾಗವನ್ನೂ, ಅಧಿಕಾರದ ಪರಮಾವಧಿಯನ್ನೂ, ಅವರವರ ಕರ್ಮಾನುರೂಪವಾಗಿ ಗೊತ್ತುಮಾಡಬೇಕು. ಇಷ್ಟು ಜನರೂ ಸಹ ಅಧಿಕಾರವನ್ನು ಹೇಗೆ ನಿರ್ವಹಿಸುತ್ತಿರುವರೆಂಬ ವಿಷಯವನ್ನು ಮಹಾರಾಜನಾದವನು ಆಗಿಂದಾಗ್ಗೆ ಗೂಢಚಾರರಿಂದ ಗೊತ್ತುಮಾಡಿಕೊಳ್ಳುತ್ತಲೇ ಇರಬೇಕು.

೪. ಗ್ರಾಮದಲ್ಲಿ ಏನಾದರೂ ವ್ಯಾಜ್ಯಗಳು ಹುಟ್ಟಿದರೆ ಶ್ಯಾನುಭೋಗನು ಅದನ್ನು ಅಲ್ಲಿಯೇ ವಿಚಾರಣೇ ನಡೆಸಿ ರಾಜಿ (ಶಾಂತಿ) ಮಾಡಿಸಿಬಿಡಬೇಕು. ಆ ವ್ಯಾಜ್ಯವನ್ನು ತೀರ್ಪುಮಾಡಲು ತನಗೆ ಶಕ್ತಿಯಿಲ್ಲದೆ ಹೋದರೆ ತನಗೆ ಮೇಲ್ಪಟ್ಟ (ಶೇಕದಾರ) ಅಧಿಕಾರಿಗೆ ತಿಳಿಸಬೇಕು.

೫. ಇಂತಹ ವ್ಯಾಜ್ಯವು ತನ್ನಲ್ಲಿ ಬಂದೊಡನೆ ಬಲು ಜಾಣತನದಿಂದ ಶೇಕದಾರನು ಅದನ್ನು ತಾನೇ ವ್ಯವಸ್ಥೆಪಡಿಸಿ ಬಿಡಬೇಕು. ಹಾಗೆ ಆ ವ್ಯಾಜ್ಯವನ್ನು ತೀರ್ಮಾನಮಾಡಲು ತನಗೆ ಅಸಾಧ್ಯವಾಗುವುದಾದರೆ ಶತೇಶನಿಗೆ (ಅಮಲ್ದಾರನಿಗೆ— ಇಲ್ಲಿ ಮ್ಯಾಜಿಸ್ಟ್ರೇಟರೆಂದು ವ್ಯವಹರಿಸಲಿಕ್ಕೂ ಅವಕಾಶವಿದೆ.) ವ್ಯಾಜ್ಯಕಾರಣವನ್ನೆಲ್ಲಾ ಕ್ರಮವಾಗಿ ತಿಳಿಸಬೇಕು.

೬. ಇಂತಹ ಶತೇಶ್ವರನಿಗೆ (ಜಡ್ಜಿಗೆ) ಸಾಧ್ಯವಾಗದೆ ಹೋದ ವ್ಯಾಜ್ಯವನ್ನು ವಿಷಯೇಶ್ವರನಿಗೆ (ಹೈಕೋರ್ಟು ಜಡ್ಜಿಗೆ) ವ್ಯವಸ್ಥೆಯ ಬಗ್ಗೆ ಕಳುಹಿಸಿಕೊಡಬೇಕು. ಹೈಕೋರ್ಟಿನ ಜಡ್ಜಿ (ವಿಷಯೇಶ್ವರ)ಗಳಿಗೂ ಮೀರಿದಂತೆ ಕಂಡ ವ್ಯಾಜ್ಯವನ್ನು ಧೊರೆಯ ತೀರ್ಮಾನಕ್ಕೆ ಕಳುಹಿಸಬೇಕು. ಕಡೆಗೆ ಮಹಾರಾಜನು ಇಂತಹ ವ್ಯಾಜ್ಯಗಳ ತೀರ್ಮಾನವನ್ನು ಯುಕ್ತಿಯಿಂದಲೂ ವಿಚಕ್ಷಣೆಯಿಂದಲೂ ಬಗೆಹರಿಸಬೇಕು.

**ರಾಜಾ ಸರ್ವಾತ್ಮನಾ ಕುರ್ಯಾದ್ವಿಷಯೇ ರಾಮ ರಕ್ಷಣಂ ।**
**ವಿತ್ತವಾಪ್ನೋತಿ ಧರ್ಮಜ್ಞ ವಿಷಯಾಚ್ಚ ಸುರಕ್ಷಿತಾತ್ ॥ ೭ ॥**

**ರಿಪುಘಾತಸಮರ್ಥಃ ಸ್ಯಾದ್ವಿತ್ತವಾನೇವ ಪಾರ್ಥಿವಃ ।**
**ಪರಚಕ್ರೋಪಮರ್ದೇಷು ವಿತ್ತವಾನೇವ ಮುಚ್ಯತೇ ॥ ೮ ॥**

**ವಿತ್ತವಾನೇವ ಸಹತಿ ಸುದೀರ್ಘಮಪಿ ವಿಗ್ರಹಂ ।**
**ಬಹುದಂಡಾನಪಿ ಪರಾಂಸ್ತಥಾ ಭಿನ್ದ್ಯಾದ್ಧನಾಧಿಪಃ ॥ ೯ ॥**

---

೭. ಈ ರೀತಿ ಧರ್ಮಾಧರ್ಮಗಳನ್ನೂ, ತಪ್ಪುನೆಪ್ಪುಗಳನ್ನೂ ಕಂಡುಹಿಡಿದು ದರ್ಪದಿಂದ ರಾಜ್ಯಭಾರವಂ ನಿರ್ವಹಿಸುವ ಮಹಾರಾಜನಿಂದ ಆತನ ದೇಶದ ಜನಗಳು ಚೆನ್ನಾಗಿ ರಕ್ಷಿಸಲ್ಪಡುವರು. ಇಂತಹ ಸಂರಕ್ಷಿತವಾದ ರಾಜ್ಯದಿಂದ ಮಹಾರಾಜನು ರಾಜ್ಯಾದಾಯವನ್ನು ವಿಶೇಷವಾಗಿ ಸಂಪಾದಿಸಬಲ್ಲನು.

೮. ಯಾವಾಗ ಭಂಡಾರ (ಖಜಾನೆ) ದಲ್ಲಿ ವಿಶೇಷವಾಗಿ ಹಣವಿರುವುದೋ ಅಂತಹ ಸಮಯದಲ್ಲಿ ಮಹಾರಾಜನು ವಿಶೇಷ ಸೈನ್ಯವನ್ನು ಕೂಡಿಸಿ ಶತ್ರುಗಳನ್ನು ಸಹ ಜಯಿಸಲು ಸಮರ್ಥನಾಗುತ್ತಾನೆ. ಒಂದು ವೇಳೆ ಶತ್ರುರಾಜರಿಂದ ಸೋಲುವ ಸಂದರ್ಭ ಬಂದಾಗ್ಯೂ ವಿಶೇಷವಾಗಿ ಹಣವನ್ನು ಕೂಡಿಟ್ಟ ಧೊರೆಯು ಆ ದ್ರವ್ಯ ಬಲದಿಂದ ರಕ್ಷಣೆ ಹೊಂದಬಲ್ಲವನಲ್ಲದೆ ತನ್ನ ಪ್ರಜೆಗಳನ್ನೂ ಪರರಾಜರ ಭಯದಿಂದ ತಪ್ಪಿಸುತ್ತಾನೆ.

೯. ಒಂದು ವೇಳೆ ಶತ್ರುಗಳು ಸಾಮ ದಾನ ಭೇದಗಳಿಗೂ ಜಗ್ಗದೆ ಯುದ್ಧ ಮಾಡಿಯೇ ತೀರಬೇಕೆಂಬ ಹಠ ಹಿಡಿದಾಗ್ಯೂ, ಆರ್ಥಿಕಬಲವುಳ್ಳ ರಾಜನು ಶತ್ರುಗಳಿಗೆ ಹೆದರದೆ ದೀರ್ಘಕಾಲದ ವರೆಗೆ ಯುದ್ಧಮಾಡಲು ಸಮರ್ಥನಾಗುವನು. ಈ ರೀತಿಯಾಗಿ ರಾಜ್ಯವು ಯಾವಾಗ ಆರ್ಥಿಕಸಂಪತ್ತಿನಿಂದ ಮೆರೆಯುತ್ತಿರುವುದೋ, ಎಷ್ಟೇ ವರ್ಷ ಯುದ್ಧ ನಡೆದರೂ ಆಗ್ಗೆ ಆ ದೇಶವು ಜಗ್ಗುವುದಿಲ್ಲ. ಈ ರಾಜ್ಯವು ಎಂದಾದರೊಂದು ದಿನ ಶತ್ರುವನ್ನು ನಿರ್ಮೂಲಮಾಡಿಬಿಡುವುದು. (ಈಗ ಪ್ರಪಂಚದಲ್ಲಿ ಘೋರ ಯುದ್ಧವು ನಡೆಯುತ್ತಿರುವುದರಿಂದ ಈ ವಿಷಯದಲ್ಲಿ ನಾವು ಟಿಪ್ಪಣಿಯನ್ನೇನೂ ಬರೆಯಬೇಕಾಗಿಯೇ ಇಲ್ಲ.)

**ಅನ್ನೇ ಪ್ರಾಣಾಃ ಪ್ರಜಾಸ್ಸರ್ವಾಃ ಧನೇ ತಚ್ಚ ಪ್ರತಿಷ್ಠಿತಂ ।**
**ಧನವಾನ್ಧರ್ಮಮಾಪ್ನೋತಿ ಧನಾರ್ವಾಕಾಮಮುಶ್ನುತೆ ॥ ೧೦ ॥**

**ಯಸ್ಯಾರ್ಥಸ್ತಸ್ಯ ಮಿತ್ರಾಣಿ ಯಸ್ಯಾರ್ಥಸ್ತಸ್ಯ ಬಾಂಧವಾಃ ।**
**ಯಸ್ಯಾರ್ಥಾಃ ಸಪುಮಾಂಲ್ಲೋಕೇ ಯಸ್ಯಾರ್ಥಃ ಸೋಪಿ ಪಂಡಿತಃ ॥ ೧೧ ॥**

**ಅರ್ಥೇನ ಹಿ ವಿಹೀನಸ್ಯ ಪುರುಷಸ್ಯಾಲ್ಪಮೇಧಸಃ ।**
**ವಿಚ್ಛಿದ್ಯಂತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥ ೧೨ ॥**

---

೧೦. ಹಣದ ಮಾತಿರಲಿ. ಆಹಾರದ್ರವ್ಯಗಳನ್ನು ಯಾರಾದರೂ ಸರಿಯೇ, ಬಲವಾಗಿ ಕೂಡಿಡಬೇಕು. ಪ್ರಜೆಗಳ ಪ್ರಾಣವು ಅನ್ನದಿಂದಲೇ ನಿಂತಿರುವುದು. ಅನ್ನವು ದೊರಕಬೇಕಾದರೆ ಕೈಯಲ್ಲಿ ದುಡ್ಡಿರಬೇಕು. ಹಣಗಾರನಾದವನು ಬೇಕಾದಷ್ಟು ಧರ್ಮಕಾರ್ಯಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಬಲ್ಲನು. ಅಲ್ಲದೆ ಹಣಗಾರನು ಬೇಕಾದ ಭೋಗಭಾಗ್ಯಗಳನ್ನೂ ಮನಸ್ಸಿನ ಕೋರಿಕೆಗಳನ್ನೂ ಪಡೆಯಬಲ್ಲನು.

೧೧. ಯಾವನಲ್ಲಿ ಹಣವಿರುವುದೋ ಅವನ ಬಳಿ ಮಿತ್ರರು ಗುಂಪುಗುಂಪಾಗಿ ಸೇರುವರು. ಯಾರಲ್ಲಿ ವಿಶೇಷವಾಗಿ ದುಡ್ಡಿರುವುದೋ ಅಲ್ಲಿ ನೆಂಟರು ವಿಶೇಷವಾಗಿ ಬಂದು ಹೋಗುತಲಿರುವರು. ಯಾವನು ಹಣವುಳ್ಳವನೋ ಅವನೇ ಗಂಡಸು. ಯಾವನು ಹಣವನ್ನು ಸಂಪಾದಿಸಿರುವನೋ ಅವನೇ ಮಹಾಪಂಡಿತನು.

೧೨. ಯಾವ ಮನುಷ್ಯನ ಕೈಯಲ್ಲಿ ಹಣವಿರುವುದಿಲ್ಲವೋ ಅಂತಹ ಅಲ್ಪಮೇಧಾವಿಯ (ದುರದೃಷ್ಟಶಾಲಿಯ) ಸಮಸ್ತ ಕಾರ್ಯಗಳೂ ಗ್ರೀಷ್ಮಋತುವಿನಲ್ಲಿ ಸಣ್ಣ ಸಣ್ಣ ಕುಂಟೆಗಳಲ್ಲಿ ನೀರು ಬತ್ತಿಹೋಗುವಂತೆ ಭಂಗವಾಗಿ ಹೋಗುವುವು. ಅಂದರೆ, ಬಂಡವಾಳ ರೂಪದಿಂದ ಹಿಡಿದ ಕಾರ್ಯಗಳು ಅಥವಾ ವ್ಯಾಪಾರಗಳು ಹಣ ಮುಗಿದೊಡನೆ( ಬೇರೆ ಬಂಡವಾಳವಿಲ್ಲದೆ) ನಾಶವಾಗಿ ಹೋಗುವುವು. (ಹಣ ಬರುವುದೂ ಹೋಗುವುದೂ ಅದೃಷ್ಟಾಯತ್ತವೆಂದು ಕೆಲವರ ಅಭಿಮತ.)

**ವಿಶೇಷೋ ನಾಸ್ತಿ ಲೋಕೇಷು ಪತಿತಸ್ಯಾ ಧನಸ್ಯಚ ।**
**ಪತಿತಾನಾಂ ನ ಗೃಹ್ಣಂತಿ ದರಿದ್ರೋ ನ ಪ್ರಯಚ್ಛತಿ ॥ ೧೩ ॥**

**ಧನಹೀನಸ್ಯ ಭಾರ್ಯಾಽಪಿ ನೈವ ಸ್ಯಾದ್ವಶವರ್ತಿನೀ ।**
**ಗುಣೌಘಮಪಿ ಚೈವಾಸ್ಯ ನೈವ ಕಶ್ಚಿತ್ಪ್ರಕಾಶಯೇತ್ ॥ ೧೪ ॥**

**ಬಾಂಧವಾ ವಿನಿವರ್ತಂತೇ ಧನಹೀನಾತ್ತಥಾ ನರಾತ್ ।**
**ಯಥಾ ಪುಷ್ಪಫಲೈರ್ಹೀನಾಚ್ಛಕುಂತಾ ದ್ವಿಜ ಪಾದಪಾತ್ । ॥ ೧೫ ॥**

**ದಾರಿದ್ರ್ಯಮರಣೆ ಚೋಭೇ ಕೇಷಾಂಚಿತ್ಸದೃಶೇ ಮತೇ ।**
**ಸತ್ಯಂ ಹ್ರಾಸಾದ್ದರಿದ್ರಸ್ಯ ಮೃತಃ ಶ್ರೇಯಾನ್ಮತೇ ಮಮ ॥ ೧೬ ॥**

---

೧೩. ಲೋಕದಲ್ಲಿ ಹಣವಿಲ್ಲವೆನ್ನುವ ಬಡವನೂ ಪರಲೋಕವಿಲ್ಲವೆನ್ನುವ ನಾಸ್ತಿಕನೂ ಇಬ್ಬರೂ ಒಂದೇ. ಅವರವರಿಗೆ ವಿಶೇಷ ಭೇದವೇನೂ ಇಲ್ಲ. ಪತಿತ (ನಾಸ್ತಿಕ) ರಾದಂತಹ ಜನರ ಹಣವನ್ನು ಯಾರೂ ಮುಟ್ಟುವುದಿಲ್ಲ. ದರಿದ್ರನು ಯಾರಿಗೂ ದಾನವನ್ನು ಕೊಡಲಾರನು.

೧೪. ಹುಟ್ಟು ಬಡವನಾದ ಮನುಷ್ಯನಿಗೆ, ಕೈಹಿಡಿದ ಹೆಂಡತಿಯೂ ಸಹ ಸ್ವಾಧೀನಳಾಗುವುದಿಲ್ಲ. ಅಂತಹವನು ಎಷ್ಟೇ ವಿದ್ಯಾವಂತನಾಗಿರಲಿ, ಎಷ್ಟೇ ಸುಗುಣದ ಗಣಿಯಾಗಿರಲಿ, ಅಂತಹವನನ್ನು ಯಾರೂ ಪ್ರಕಾಶಕ್ಕೆ ತರುವುದೇ ಇಲ್ಲ.

೧೫. ಹಣವಿಲ್ಲದ ಕಡುಬಡವನ ಮನೆಗೆ ಯಾವ ನೆಂಟರೂ ಸಹ ಸುಳಿದಾದರೂ ನೋಡುವುದಿಲ್ಲ. ಈ ಬಡವನ ಅವಸ್ಥೆಯನ್ನು ಹೂವು ಹಣ್ಣುಗಳಿಲ್ಲದೆ ಇರುವ ಬರೀ ಮರಕ್ಕೆ ಯಾವ ವಿಧವಾದ ಹಕ್ಕಿಯೂ ಸಹ ಹೋಗದೆ ಇರುವ ಒಂದು ಸಾಮ್ಯವನ್ನು ಉದಾಹರಣೆಯಾಗಿ ಹೇಳಬಹುದು.

೧೬. ಕೆಲವು ಜನರು ಬಡತನದ ಬಾಳಿಗಿಂತ ಸಾಯುವುದೇ ಮೇಲು ಎಂದು ಹೇಳುತ್ತಾ ಇರುವುದರಿಂದ, ದಾರಿದ್ರ್ಯ ಮರಣಗಳೆರಡೂ ಸಮಾನವಾದುದೆಂದು ಒಪ್ಪಿಕೊಳ್ಳುತ್ತೇನೆ. ಕೆಲವು ಮಂದಿ ಬಡವರು ಪೆದ್ದಸುಟಿ ಹತ್ತಿಕೊಂಡು ಧನಿಕರ ಗುಂಪಿಗೆ ಹೋಗಿ, ಅವರ ಜತೆಗೆ ಸೇರಿಕೊಂಡು ತಾವೂ ಸಹ (ಧನಿಕರು ವಿಶೇಷ ಅಲಕ್ಷ್ಯದಿಂದ ಕಾಣುತ್ತಿದ್ದರೂ) ಅವರಂತೆ ತಾವೂ ನಟಿಸಿದಾಗ ಆ ದೊಡ್ಡ ಮನುಷ್ಯರು ಇವನನ್ನು ಕಂಡು ಹಾಸ್ಯಮಾಡಿಕೊಂಡು ಹುಸಿನಗು ನಗುವ ವಿಚಾರವು ಈ ಲೋಕದಲ್ಲಿ

**ಕೋಶಂ ರಾಜ್ಯತರೋರ್ಮೂಲಂ ತಸ್ಮಾದ್ಯತ್ನಂ ತದರ್ಜನೇ।**
**ಧರ್ಮೇಣೈವ ತತಃ ಕುರ್ಯಾನ್ನಾಧರ್ಮೇಣ ಕಥಂಚನ　　　॥ ೧೭ ॥**

---

ಪ್ರತ್ಯಕ್ಷವಾಗಿ ಅನೇಕರಿಗೆ ಗೊತ್ತೇ ಇದೆಯಷ್ಟೆ! ಇಂತಹ ಅನುಭವವನ್ನು ತಿಳಿಯ ಬೇಕಾದರೆ ಪ್ರವಾಸಿಗಳಾದ ಹರಿದಾಸರನ್ನೂ, ದೇಶಾವಾರ ಬೇಡುವವರನ್ನೂ, ಪರದ್ರವ್ಯೋಪಜೀವಿಗಳನ್ನೂ ಇನ್ನೂ ಇತ್ಯಾದಿ, ಇತ್ಯಾದಿ ಹೀಗೆಯೇ ಇರುವ ಈ ಅನುವಾದಕ ಸಹೋದರವರ್ಗವನ್ನು ಕೇಳಿನೋಡಿರಿ. ಇಂತಹ ಅವಸ್ಥೆಯ ಜನರನ್ನು ವ್ಯಾಸಮಹರ್ಷಿಗಳು ತಾವು ಭೂಲೋಕದಲ್ಲಿ ಜೀವಿಸಿದ್ದಾಗ ಎಷ್ಟೆಷ್ಟೋ ಮಂದಿಯನ್ನು ನೋಡಿ ನೋಡಿ ಸಾಕಾಗಿ, ಇಂತಹ ಬಡತನದಿಂದ ಬದುಕಿರುವುದಕ್ಕಿಂತ ಸಾಯುವುದೇ ಒಳ್ಳೆಯದೆಂದು ನನ್ನ ಅಭಿಪ್ರಾಯವೆಂದು, ತಮ್ಮ ಅಭಿಪ್ರಾಯವನ್ನು ಪರಶುರಾಮನಿಗೆ ಉಪದೇಶಮಾಡಿಸಲೋಸುಗ ಪುಷ್ಕರನ ಬಾಯಿಯಲ್ಲಿ ಚಮತ್ಕಾರವಾಗಿ ನುಡಿಸಿರುವರು. ವ್ಯಾಸಮಹರ್ಷಿಗಳು ಲೋಕದ ಜನರಿಗೆ ಧರ್ಮೋಪದೇಶವನ್ನು ಮಾಡುವ ಸಂದರ್ಭದಲ್ಲಿ ಧರ್ಮದಿಂದಲೇ ದ್ರವ್ಯವೂ ಧರ್ಮದಿಂದಲೇ ಕಾಮವೂ ಸಿದ್ಧಿಯಾಗುವು ದೆಂದು ಕೈಗಳೆರಡನ್ನೂ ಮೇಲಕ್ಕೆತ್ತಿಕೊಂಡು ಬೀದಿಯಲ್ಲಿ ಸಾರಿ ಸಾರಿ ಹೇಳಿಕೊಂಡು ಹೋಗುತ್ತಿದ್ದರಂತೆ. ಇಷ್ಟು ನಾನು ಕಿರಿಚಿಕೊಂಡರೂ ನನ್ನ ಮಾತನ್ನು ಯಾರೂ ಲಕ್ಷಿಸದೆ ಅಧರ್ಮಮಾರ್ಗದಲ್ಲಿ ಕಾಲಿಟ್ಟು ಬಡತನದ ಬೇಗೆಯಿಂದ ಬಳಲುತ್ತಿರುವರಲ್ಲಾ ಎಂದು ಪಶ್ಚಾತ್ತಾಪಪಡುತ್ತಿದ್ದರೆಂಬ ವಿಷಯವು ಈ ಕೆಳಗಿನ ಶ್ಲೋಕದಿಂದ ವ್ಯಕ್ತ ವಾಗುವುದು.

ಊರ್ಧ್ವಬಾಹುರ್ವಿರೌಮ್ಯೇಷಃ ನ ಚ ಕಶ್ಚಿಚ್ಛೃಣೋತಿಮೇ।
ಧರ್ಮಾದರ್ಥಶ್ಚಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ॥
(ಭಾರತಸಾವಿತ್ರಿಯಿಂದ.)

೧೭. ರಾಜ್ಯದಲ್ಲಿ ಹಣದರಾಶಿಯಿಂದ ಭಂಡಾರವು ತುಂಬಿದ್ದುದಾದರೆ ಅದೇ ರಾಜ್ಯವೆಂಬ ವೃಕ್ಷಕ್ಕೆ ಬುಡ (ಬೇರು). ಆದ್ದರಿಂದ ಬುಡ ಭದ್ರವಾಗಿರಬೇಕೆಂದು ಹೇಳಿದ ಹಾಗಾಯಿತು. ಬುಡ ಭದ್ರವಾಗಿರಬೇಕಾದರೆ ಖಜಾನೆಯು ಭರ್ತಿಯಾಗಿರ ಬೇಕು. ಆದ್ದರಿಂದ ಹಣಸಂಪಾದಿಸಿಕೊಂಡಿರುವ ಪ್ರಯತ್ನಮಾಡು. ಆದರೆ ಆ ರೀತಿ ಆರ್ಜಿಸುವ ಹಣವನ್ನು ಧರ್ಮದಿಂದ ಮಾತ್ರ ಸಂಪಾದಿಸು. ಯಾವ ಕಾಲದಲ್ಲೂ ಅಧರ್ಮದಿಂದ ಹಣಸಂಪಾದಿಸುವ ಕೆಲಸಕ್ಕೆ ಮಾತ್ರ ಹೋಗಬೇಡ.

ಮೇಲೆ ಹೇಳಿದ ಶ್ಲೋಕದ ಟಿಪ್ಪಣಿಯ ಅಭಿಪ್ರಾಯವು ಈಗ ಈ ಶ್ಲೋಕ ದಿಂದಲೂ ತಿಳಿದಹಾಗಾಯಿತು. (ಇತಿಹಾಸಗಳನ್ನೂ, ಪ್ರಾಚೀನ ಚರಿತ್ರಾಂಶಗಳನ್ನೂ

**ಧನ್ಯೈರಧರ್ಮಸಂಪ್ರಾಪ್ತ್ಯೈರ್ಯದ್ವೃಥಂ ಹಿ ವಿಧೀಯತೇ ।**
**ತದೇವ ಯಾತಿ ವಿಸ್ತಾರಂ ವಿನಾಶಾಯ ದುರಾತ್ಮನಾಂ ॥ ೧೮ ॥**

**ಸುಕೃತಸ್ಯ ಪುರಾಣಸ್ಯ ಬಲೇನ ಬಲಿನಾಂ ವರ ।**
**ಯದ್ಯಧರ್ಮಾತ್ಫಲಂ ಶೀಘ್ರಂ ನಾಪ್ನುವಂತಿ ದುರಾತ್ಮನಃ ॥ ೧೯ ॥**

**ತಥಾಽಪಿ ಪೂರ್ವಕರ್ಮಾಂತೇ ತೇನ ಪಾಪೇನ ಕರ್ಮಣಾ ।**
**ವಿನಶ್ಯಂತಿ ಸಮೂಲಾಸ್ತೇ ಸಪುತ್ರಧನಬಾಂಧವಾಃ ॥ ೨೦ ॥**

---

ಭಗ್ನಾವಶಿಷ್ಟ ವಾಸ್ತುಶಿಲ್ಪಗಳನ್ನೂ ಕೇಳಿ, ನೋಡಿದವರು ಈ ಶ್ಲೋಕದ ಸತ್ಯಾಂಶ ವನ್ನು ತಿಳಿಯಬಲ್ಲರು. ಅಧರ್ಮದಿಂದಾರ್ಜಿಸಿದ ದ್ರವ್ಯಗಳೂ ದೇಶಗಳೂ ನಾಮಾವಶೇಷವಾಗಿದೆಯೆಂದು ಈಗ ನಾವೇನೂ ಹೊಸದಾಗಿ ಬರೆಯಬೇಕಾಗಿಲ್ಲವಷ್ಟೆ! ಈ ಗ್ರಂಥವನ್ನು ಅಡ್ಡಜ್ಞಾನದಿಂದ ಓದುವುದಕ್ಕಿಂತ ಗ್ರಂಥಸ್ವಾರಸ್ಯವನ್ನು ಮನನಮಾಡಿ ಓದುವುದೊಳ್ಳೆಯದಲ್ಲವೆ?

೧೮. ಅಧರ್ಮಾರ್ಜಿತದ್ರವ್ಯದ ಗತಿಯನ್ನು ಇನ್ನೂ ವಿಸ್ತರಿಸಿ ಈ ಶ್ಲೋಕದಲ್ಲಿ ಹೇಳಿರುತ್ತಾರೆ. ಅಧರ್ಮಕಾರ್ಯಗಳಿಂದಲೇ ಸಂಪಾದಿಸಿದ ಹಣದ ರಾಶಿಯಿಂದ ಅದಾವಾವ ಪಾಪಕರ್ಮಗಳು ದೃಢವಾಗಿರುವುದಾದರೂ, ಆ ಅಧಾರ್ಮಿಕನಾದ ಆಶಾಪಿಶಾಚಗ್ರಸ್ತ ನೃಪನಿಂದಗೂಢವಾಗಿ ಮುಚ್ಚಲ್ಪಟ್ಟ ಪಾಪವು ಕ್ರಮೇಣ ವಿಸ್ತಾರವಾಗಿ ಹರಡಿ, ಒಳಗೇ ಹೊಗೆಯಾಡುವ ಬೆಂಕಿಯಂತೆ ಭಗ್ಗನೆ ಹತ್ತಿಕೊಂಡು ದುರಾತ್ಮರಾದ ದುರಾಶಾಪಿಶಾಚಿ ಗಳನ್ನು ನಾಶಮಾಡಿಬಿಡುವುದು.

೧೯. ಈ ಜನ್ಮದಲ್ಲಿ ಮಾಡಿದ ಪುಣ್ಯಪಾಪರೂಪವಾದ ಕರ್ಮಗಳು ಈ ಜನ್ಮದಲ್ಲೇ ಫಲವನ್ನು ಎಲ್ಲರೂ ಕಾಣುವಂತೆ ಕೊಡದೆಹೋದಾಗ್ಯೂ, ದುರಾತ್ಮರಾದ ಜನರು ಅಧರ್ಮದ್ರವ್ಯದಿಂದ ಮೆರೆದು ಮೆಕ್ಕೇಕಾಯಿಗಳಾದಾಗ್ಯೂ, ಅಂತಹವರು ಜನ್ಮಾಂತರ(ಮುಂದಿನ ಜನ್ಮ)ದಲ್ಲಿಯಾದರೂ ಇದರ ಫಲವನ್ನು ಅನುಭವಿಸಲೇಬೇಕು.

೨೦. ಬೇರೆ ಜನ್ಮಕ್ಕೆ ಬಂದಾಗ ಅಂತಹವರು ಪೂರ್ವಾರ್ಜಿತಪಾಪಶೇಷದಿಂದ ಬುಡಸಹಿತವಾಗಿ, ಅಂದರೆ ಹೆಂಡತಿ, ಮಕ್ಕಳು, ನೆಂಟರೆಲ್ಲರೊಡನೆ ನಿರ್ನಾಮವಾಗಿ ನಾಶವಾಗಿ ಹೋಗುತ್ತಾರೆ. (ಇದೇ ಜನ್ಮದಲ್ಲೇ ನಿಮ್ಮ ಕಣ್ಣುಮುಂದೆಯೇ ಲಕ್ಷಾಧೀಶ್ವರನು ಭಿಕ್ಷಾರ್ಥಿಯಾದುದನ್ನೂ, ಭಿಕ್ಷಾಪಾತ್ರಧಾರಿಯು ಲಕ್ಷಾಧೀಶ್ವರನಾಗಿ ಪರಿಣಮಿಸಿರುವುದನ್ನೂ ನೀವು ಪ್ರತ್ಯಕ್ಷವಾಗಿ ನೋಡುತ್ತಲಿರುವಿರಷ್ಟೆ?)

**ನರಕೇಷು ತಥಾ ತೇಷಾಂ ಯಾತನಾ ವಿವಿಧಾಃ ಸ್ಮೃತಾಃ ।**
**ಬಹೂನ್ಯಬ್ದಸಹಸ್ರಾಣಿ ಯೇ ನೃಪಾ ರಾಷ್ಟ್ರಪೀಡಕಾಃ ॥ ೨೧ ॥**

**ನಿತ್ಯಂ ರಾಜ್ಞಾ ತಥಾ ಭಾವ್ಯಂ ಗರ್ಭಿಣೀಸಹಧರ್ಮಿಣಾ ।**
**ಯಥಾ ಸ್ವಂ ಸುಖಮುತ್ಸೃಜ್ಯ ಗರ್ಭಸ್ಯ ಸುಖಮಾವಹೇತ್ ॥ ೨೨ ॥**

**ಗರ್ಭಿಣೀ ತದ್ವದೇವೇಹ ಭಾವ್ಯಂ ಭೂಪತಿನಾ ಸದಾ ।**
**ಪ್ರಜಾಸುಖಂ ತು ಕರ್ತವ್ಯಂ ಸುಖಮುದ್ದಿಶ್ಯ ಚಾತ್ಮನಃ ॥ ೨೩ ॥**

**ಕಿಂ ಯಜ್ಞೈಸ್ತಪಸಾ ತಸ್ಯ ಪ್ರಜಾ ಯಸ್ಯ ಸುರಕ್ಷಿತಾಃ ।**
**ಸುರಕ್ಷಿತಾಃ ಪ್ರಜಾಸ್ತಸ್ಯ ಸ್ವರ್ಗಸ್ತಸ್ಯ ಗೃಹೋಪಮಃ ॥ ೨೪ ॥**

---

೨೧. ಈ ಜನ್ಮದಲ್ಲಿ ನಾಶವಾಗುವ ಮಾತದಂತಿರಲಿ. ಅಂತಹ ಅಧರ್ಮ ಪ್ರವರ್ತಕರು ಸತ್ತಮೇಲೆ ನರಕಲೋಕದಲ್ಲಿ ವಾಸಮಾಡುತ್ತಾ ವಿವಿಧವಾದ ಯಾತನೆಗಳನ್ನು ಅನುಭವಿಸುತ್ತಾರೆ. ರಾಷ್ಟ್ರಪೀಡಕರಾದ ರಾಜರುಗಳು ಬಹಳ ಸಾವಿರವರ್ಷಗಳವರಿವಿಗೆ ನರಕವಾಸ ಮಾಡುತ್ತಾರೆ.

೨೨. ಆದುದರಿಂದ ರಾಜರಾದವರು ಪ್ರಜೆಗಳನ್ನು ತಮ್ಮ ಹೊಟ್ಟೆಯಲ್ಲಿರುವ ಶಿಶುಗಳನ್ನು ಗರ್ಭಿಣಿಯರು ಹೇಗೆ ಕಾಪಾಡುವರೋ, ಅದರಂತೆ ಸುಖವಾಗಿ ಕಾಪಾಡಿಕೊಂಡಿರಬೇಕು. ಯಾರ ಆಶ್ರಯದಲ್ಲಾದರೂ ಜೀವಿಸತಕ್ಕ ಮನುಷ್ಯರು, ಮಹಾಸ್ವಾಮಿ! ನಾನು ತಮ್ಮ ಗರ್ಭವಾಸದಲ್ಲಿ ಸುಖವಾಗಿ ಜೀವಿಸಿಕೊಂಡಿದೇನೆ, ಎಂದು ಹೇಳುವ ಲೋಕೋಕ್ತಿಯನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬೇಕು.

೨೩. ಗರ್ಭಿಣಿಯು ತನ್ನ ಗರ್ಭದಲ್ಲಿರುವ ಮಗುವಿಗೆ ತೊಂದರೆಯಾಗದಂತೆ ತಾನೂ ಸುಖವಾಗಿರುವಂತೆ ಹೇಗೆ ನೋಡಿಕೊಳ್ಳುವಳೋ, ಆ ಮಾದರಿಯಂತೆ ಮಹಾರಾಜನು ಪ್ರಜೆಗಳನ್ನು ಕಾಪಾಡುವುದರ ಮೂಲಕ ತನ್ನ ಹಿತವನ್ನೂ ಸಹ ಸಾಧಿಸಿಕೊಳ್ಳಬೇಕು.

೨೪. ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಸುರಕ್ಷಿತವಾಗಿರುವರೋ. ಅಂತಹ ಮಹಾರಾಜನು ಬೇರೆ ಇನ್ನಾವ ಯಜ್ಞಗಳನ್ನೂ, ತಪಸ್ಸನ್ನೂ ಮಾಡಬೇಕಾಗಿಯೇ ಇಲ್ಲ. ಪ್ರಜೆಗಳು ಸುಖವಾಗಿರುವ ರಾಜ್ಯವು ರಾಜನಿಗೆ ಸ್ವರ್ಗಲೋಕಕ್ಕೆ ಸಮನಾದುದು.

**ಅರಕ್ಷಿತಾಃ ಪ್ರಜಾ ಯಸ್ಯ ನರಕಂ ತಸ್ಯ ಮಂದಿರಂ।**
**ರಾಜಾ ಷಡ್ಭಾಗಮಾದತ್ತೇ ಸುಕೃತಾದ್ದುಷ್ಕೃತಾದಪಿ ॥ ೨೫ ॥**
**ಧರ್ಮೋ ನಾಮ ಮಹಾಭಾಗ ಸಂಪದ್ರಕ್ಷಣ ತತ್ಪರಃ।**
**ಅರಕ್ಷಿತಸ್ತಥಾ ಸರ್ವಂ ಪಾಪಮಾಪ್ನೋತಿ ಭಾರ್ಗವ ॥ ೨೬ ॥**
**ನೈವ ಕಿಂಚಿದವಾಪ್ನೋತಿ ಪುಣ್ಯಭಾಕ್ಪೃಥಿವೀಪತಿಃ।**
**ಆಪನ್ನಮಪಿ ಧರ್ಮಿಷ್ಠಂ ಪ್ರಜಾ ರಕ್ಷಂತ್ಯಥಾಪದಿ ॥ ೨೭ ॥**
**ತಸ್ಮಾದ್ಧರ್ಮಾರ್ಥಕಾಮೇನ ಪ್ರಜಾ ರಕ್ಷ್ಯಾ ಮಹೀಕ್ಷಿತಾ।**
**ಸುಭಗೈಶ್ಚಾಥ ದುರ್ವೃತ್ತೈ ರಾಜವಲ್ಲಭತಸ್ಕರೈಃ ॥ ೨೮ ॥**
**ಭಕ್ಷ್ಯಮಾಣಾಃ ಪ್ರಜಾ ರಕ್ಷ್ಯಾ ಕಾಯಸ್ಥೈಶ್ಚ ವಿಶೇಷತಃ।**
**ರಕ್ಷಿತಾಸ್ತದ್ಭಯೇಭ್ಯಸ್ತು ಪ್ರಜಾ ರಾಜ್ಞಾಂ ಭವಂತಿ ತಾಃ ॥ ೨೯ ॥**

೨೫. ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳಿಗೆ ಸರಿಯಾಗಿ ರಕ್ಷಣೆಯಿಲ್ಲದೆ ಜನರು ಸಂಕಟಪಡುವರೋ, ಅಂತಹ ರಾಜನ ರಾಜಮಂದಿರವು ನರಕಸದೃಶವೆಂದು ಭಾವಿಸಬೇಕು.

೨೬. ಧರ್ಮವೆನ್ನುವುದು ಸಂಪತ್ತನ್ನು ಸಂರಕ್ಷಿಸುವ ಒಂದು ವಸ್ತುವು. ಈ ವಸ್ತುವನ್ನು (ಧರ್ಮವನ್ನು) ಕಾಪಾಡಿಕೊಳ್ಳದೆ ಹೋಗುವವನು ಪಾಪಕೂಪದಲ್ಲಿ ಬಿದ್ದು ಬಿಡಬೇಕಾಗುವುದು.

೨೭. ಪುಣ್ಯಭಾಜನನಾದ ಪೃಥಿವೀಪತಿಯು ಯಾವ ಕಷ್ಟವನ್ನೂ ಅನುಭವಿಸ ಬೇಕಾದುದಿಲ್ಲ. ಧರ್ಮಿಷ್ಠನಾದ ಮಹಾರಾಜನು ಎಂತಹ ವಿಪತ್ತಿನಲ್ಲಿ ಬಿದ್ದಿದ್ದಾಗ್ಯೂ ಅವನ ಪ್ರಜೆಗಳು ಅವನನ್ನು ಸುಖವಾಗಿ ಕಾಪಾಡುವರು.

೨೮. ಆದುದರಿಂದ ಧರ್ಮವನ್ನೂ, ಅರ್ಥವನ್ನೂ ಸಂಪಾದಿಸಬೇಕೆಂದಿರುವ ರಾಜನು ತನ್ನ ಪ್ರಜೆಗಳನ್ನು ಸುಖವಾಗಿ ಕಾಪಾಡಿಕೊಂಡಿರಬೇಕು.

೨೯. ನೋಡುವುದಕ್ಕೆ ಬಹಳ ಯೋಗ್ಯರೆಂದು ಮುಖದಲ್ಲಿ ಕಾಣಿಸಿಕೊಳ್ಳುತ್ತಾ ಒಳಗೇ ದುಷ್ಕಾರ್ಯಪ್ರವರ್ತಕರಾಗಿ ಪ್ರಜಾಪೀಡಾನಿರತರಾದ ರಾಜ್ಯಾಧಿಕಾರಿಗಳೆಂಬ ಕಳ್ಳರನ್ನು ಮಹಾರಾಜನಾದವನು ಗೂಢಚಾರರಿಂದ ಕಂಡು ಹಿಡಿದು ಪ್ರಜೆಗಳಿಗೆ ಅವರಿಂದಾಗುತ್ತಿರುವ ಹಿಂಸೆ (ಕಿರುಕುಳ)ಗಳನ್ನು ತಪ್ಪಿಸಿ ಪ್ರಜೆಗಳನ್ನು ಕಾಪಾಡಬೇಕು. ಈ ರೀತಿ ದುಷ್ಟಾಧಿಕಾರಿಗಳ ಭಯದಿಂದ ಪ್ರಜೆಗಳನ್ನು ತಪ್ಪಿಸುವವನೇ ನಿಜವಾದ ನರಪತಿಯೆನಿಸುವನು.

**ಅರಕ್ಷಿತಾ ಸಾ ಭವತಿ ತೇಷಾಮೇವೇಹ ಭೋಜನಂ ।**
**ಸಾಧು ಸಂರಕ್ಷಣಾರ್ಥಾಯ ರಾಜಾ ದುಷ್ಟನಿಬರ್ಹಣಂ ॥ ೩೦ ॥**

**ತೃಣಾನಾಮಿವ ನಿರ್ಮಾತಾ ಸದಾ ಕುರ್ಯಾಜ್ಜಿತೇಂದ್ರಿಯಃ ।**
**ಶಾಸ್ತ್ರೋಕ್ತಂ ಬಲಿಮಾದದ್ಯಾದ್ಧರ್ಮಂ ತತ್ತಸ್ಯ ಜೀವಿತಂ ॥ ೩೧ ॥**

**ತಸ್ಯ ಸಂತ್ಯಜನಂ ರಾಜಾ ನ ಸಮೃದ್ಧೋಪಿ ಕಾರಯೇತ್ ।**
**ಆಕಾರಾಣಿ ಚ ಸರ್ವಾಣಿ ಶುಲ್ಕಂ ಶಾಸ್ತ್ರೋದಿತೋ ಬಲಿಃ ॥ ೩೨ ॥**

**ದಂಡಂ ವಿನಯನಾಚ್ಚ್ರಾಜ್ಞೋ ಧರ್ಮ್ಯಂ ತತ್ತಸ್ಯ ಜೀವಿತಂ ।**
**ಧರ್ತಾ ಕರಾಣಾಂ ಸರ್ವೇಷಾಂ ಪ್ರಭುರುಕ್ತೋ ಮಹೀಪತಿಃ ॥ ೩೩ ॥**

---

೩೦. ಹಾಗೇನಾದರೂ ಅಧಿಕಾರಿಗಳಿಂದಾಗುವ ಹಿಂಸೆಯನ್ನು ತಪ್ಪಿಸದೆ ಹೋದರೆ ಆ ಅಧಿಕಾರಿಗಳು ಪ್ರಜೆಗಳನ್ನೇ ತಿಂದುಬಿಡುವರು. ಪ್ರಜೆಗಳಲ್ಲಿ ಸಾಧುಗಳೂ ಅಸಾಧುಗಳೂ ಸಹ ಇರುವರಾದುದರಿಂದ ಸಾಧುಗಳಿಗೆ ಹಿಂಸೆಯುಂಟಾಗದಂತೆ ದುಷ್ಟರನ್ನು ನಿಗ್ರಹಮಾಡುವುದು ರಾಜನ ಅವಶ್ಯಕರ್ತವ್ಯವಾಗಿದೆ.

೩೧. ಹುಲ್ಲು ಹೊರೆ ಕಟ್ಟುವವನು ಒಂದೊಂದು ಹುಲ್ಲನ್ನಾಗಿ ಸಂಗ್ರಹಿಸಿ ಹೇಗೆ ಹೊರೆಯನ್ನು ಮಾಡುವನೋ, ಅದರಂತೆ ಮಹಾರಾಜನಾದವನು ಪ್ರಜೆಗಳಿಂದ ಶಾಸ್ತ್ರೋಕ್ತವಾಗಿ ಕಂದಾಯ (ಬಲಿ) ವನ್ನು ತೆಗೆದುಕೊಂಡು, ಅತ್ಯಾಶೆಪಡದೆ ಜಿತೇಂದ್ರಿಯನಾಗಿ ಜೀವನ ಮಾಡುವುದೇ ಮುಖ್ಯ ಧರ್ಮ.

೩೨. ಖಜಾನೆಯಲ್ಲಿ ಎಷ್ಟೇ ಅಗಣಿತದ್ರವ್ಯವಿರಲಿ, ಮಹಾರಾಜನು ಎಷ್ಟೇ ಪುಷ್ಟನಾಗಿರಲಿ, ಶಾಸ್ತ್ರೀಯವಾಗಿ ವಿಧಿಸಿರುವ ಕಂದಾಯವನ್ನು ಪ್ರಜೆಗಳಿಂದ ತೆಗೆದು ಕೊಳ್ಳದೆ ಅನಾದರಣೆಯಿಂದ ಬಿಟ್ಟುಬಿಡಬಾರದು. ಈ ಕಂದಾಯಕ್ಕೆ ಶಾಸ್ತ್ರದಲ್ಲಿ ಶುಲ್ಕವೆಂದೂ, ಬಲಿ ದ್ರವ್ಯವೆಂದೂ ಹೇಳುತ್ತಾರೆ.

೩೩. ಎಲ್ಲಾ ಪ್ರಜಾವರ್ಗಕ್ಕೂ ಧೊರೆಯೆಂದೆನಿಸಿಕೊಂಡ ಬಳಿಕ ಮಹಾರಾಜನು ಪ್ರತಿಯೊಬ್ಬ ಪ್ರಜೆಯಿಂದಲೂ ಶಾಸ್ತ್ರವಿಹಿತನಾದ ಕಂದಾಯವನ್ನು ತೆಗೆದುಕೊಂಡೇ ಜೀವಿಸಬೇಕಾದುದು ಅವನ ಧರ್ಮವು. ಮತ್ತು ಪ್ರಜೆಗಳ ಅಪರಾಧಾನುಸಾರವಾಗಿ ದಂಡ (ಜುಲ್ಮಾನೆ)ವನ್ನು ವಿಧಿಸಿ ಅದನ್ನೂ ಸಹ ತನ್ನ ಖಜಾನೆಗೆ ಸೇರಿಸಿಕೊಳ್ಳುವುದೂ ಸಹ ಧರ್ಮವೆಂದೆನಿಸಿಕೊಳ್ಳುವುದು.

**ನಿಧಿಂ ಪುರಾಣಂ ಸಂಪ್ರಾಪ್ಯ ಕೇಶವಂ ತು ಪ್ರವೇಶಯೇತ್ ।**
**ಅರ್ಧಂ ಬ್ರಾಹ್ಮಣಸಾತ್ಕುರ್ಯಾದ್ಧರ್ಮಕಾಮೋ ಮಹೀಪತಿಃ ॥ ೩೪ ॥**

**ನಿಧಿಂ ದ್ವಿಜೋತ್ತಮಃ ಪ್ರಾಪ್ಯ ಗೃಹ್ಣೀಯಾತ್ಸಕಲಂ ತಥಾ ।**
**ಜಗತೋಽಸ್ಯ ಸಮಗ್ರಸ್ಯ ಪ್ರಭುರುಕ್ತೋ ದ್ವಿಜೋತ್ತಮಃ ॥ ೩೫ ॥**

**ನಿಧಿಂ ಜ್ಞಾತ್ವಾ ಪುರಾಣಂ ತು ಕ್ಷತ್ರವಿಟ್ ಶೂದ್ರಯೋನಯಃ ।**
**ನಿವೇದಯೇಯು. ಭೂಪಾಯ ರಾಜಾ ಲಬ್ಧ್ವಾಽಪಿ ತಂ ನಿಧಿಂ ॥ ೩೬ ॥**

**ಚತುರ್ಥಮಷ್ಟಮಂ ಚಾಂಶಂ ತಥಾ ಷೋಡಶಮಂ ದ್ವಿಜ ।**
**ವರ್ಣಕ್ರಮೇಣ ವಿಸೃಜೇದಾಖ್ಯಾತಂ ಧರ್ಮ ಕಾರಣಂ ॥ ೩೭ ॥**

---

೩೪. ಭೂಮಿಯಲ್ಲಿ ಹೂತಿಟ್ಟಿದ್ದ ನಗನಾಣ್ಯಗಳು, ಚಿನ್ನಬೆಳ್ಳಿರೂಪವಾದ ನಿಧಿ ನಿಕ್ಷೇಪಗಳೇನಾದರೂ ರಾಜನಿಗೆ ದೊರೆತರೆ ಹಾಗೆ ಸಿಕ್ಕಿದ ನಿಧಿಯಲ್ಲಿ ನಾಣ್ಯ ರೂಪವಾದ ದ್ರವ್ಯಗಳನ್ನು ಧರ್ಮಕಾಮನಾದ ರಾಜನು ಬ್ರಾಹ್ಮಣರ ವಶಕ್ಕೆ ಕೊಟ್ಟು ಬಿಡಬೇಕು.

೩೫. ಯಾವನಾದರೂ ಯೋಗ್ಯಬ್ರಾಹ್ಮಣನಿಗೆ ಭೂಮಿಯಲ್ಲೇನಾದರೂ ನಿಧಿಯು ಆಕಸ್ಮಿಕವಾಗಿ ಸಿಕ್ಕಿದರೆ ಹಣವನ್ನೆಲ್ಲಾ ಬ್ರಾಹ್ಮಣನೇ ಇಟ್ಟುಕೊಂಡು ಬಿಡಬೇಕು. ಏಕೆಂದರೆ, ಈ ಸಕಲ ಪ್ರಪಂಚಕ್ಕೂ ಬ್ರಾಹ್ಮಣೋತ್ತಮನೇ ಪ್ರಭುವೆನಿಸಿ ಕೊಂಡಿರುವನು.

೩೬. ಬಹಳ ಹಳೇ ಕಾಲದಲ್ಲಿ ಹೂತಿಟ್ಟಿದ್ದ ನಿಧಿಯೇನಾದರೂ ಕ್ಷತ್ರಿಯ ವೈಶ್ಯ ಶೂದ್ರರಿಗೆ ದೊರೆತುದಾದರೆ ಆ ವಿಷಯವನ್ನು ಆ ಕೂಡಲೆ ಅವರು ರಾಜನಿಗೆ (ಸರಕಾರಕ್ಕೆ) ತಿಳಿಸಬೇಕು. ಅದನ್ನು ಕೂಡಲೆ ರಾಜನು (ಸರಕಾರದ) ವಶಮಾಡಿ ಕೊಂಡು ಬಿಡಬೇಕು.

೩೭. ಆ ರೀತಿ ಸ್ವಾಧೀನಮಾಡಿಕೊಂಡ ಹಣವನ್ನು ವರ್ಣಕ್ರಮಾನು ಸಾರವಾಗಿ ಶೇಕಡಾ ನಾಲ್ಕನೇ ಭಾಗ-ಎಂಟನೇ ಭಾಗ-ಹದಿನಾರನೇ ಭಾಗಗಳನ್ನು ನಿಧಿ ಪಡೆದ ಜನರಿಗೆ ಕೊಟ್ಟುಬಿಡಬೇಕಾದುದು ಧರ್ಮಕಾರಣವೆನಿಸಿಕೊಳ್ಳುವುದು.

ತೇಽಪಿ ಲಬ್ಧ್ವಾ ತದಾ ತೇನ ಸಂವಿಭಜ್ಯ ದ್ವಿಜೋತ್ತಮಾನ್ ।
ಶೇಷೇಣ ಕುರ್ಯುಃ ಕಾಮಾರ್ಥೌ ವಿದಿತೌ ಪೃಥಿವೀ ಪತೇಃ ॥ ೩೮ ॥

ಪ್ರಕಾಶವಿಭವೋ ಲೋಕೇ ಯಸ್ಯ ರಾಜ್ಞಃ ಸ ಭೂಪತಿಃ ।
ಅಪ್ರಕಾಶಧನೋ ಯಸ್ತು ನರಕಂ ತಸ್ಯ ಮಂದಿರಂ ॥ ೩೯ ॥

ಮಮೇದಮಿತಿ ಯೋ ಬ್ರೂಯಾನ್ನಿಧಿಂ ಸತ್ಯೇನ ಮಾನವಃ ।
ತಸ್ಮಾದದೀತ ನೃಪತಿರ್ಭಾಗಮಬ್ರಾಹ್ಮಣಸ್ಯ ತು ॥ ೪೦ ॥

ಚತುರ್ವಿಂಶತಿಕಂ ರಾಮ ದ್ವಾದಶಂ ಷಷ್ಠಮೇವ್ಚ ।
ಕ್ಷತ್ರಿಯಾಶ್ಚ ತಥಾವೈಶ್ಯಾಃ ಶೂದ್ರಾಶ್ಚ ಭೃಗುನಂದನ ॥ ೪೧ ॥

---

೩೮. ಈ ರೀತಿ ನಿಧಿಯನ್ನು ರಾಜನ (ಸರ್ಕಾರದ) ಮೂಲಕವಾಗಿ ಹೊಂದಿದ ಆ ನಿಧಿಯ ಯಜಮಾನರು ಅದು ತಮ್ಮ ಸ್ವಾಧೀನಕ್ಕೆ ಬಂದ ಕೂಡಲೆ; ಅದರಲ್ಲಿ ಅರ್ಧ-ಭಾಗವನ್ನು ಬ್ರಾಹ್ಮಣರಿಗೆ ಹಂಚಿಬಿಡಬೇಕು. ಉಳಿದ ಹಣವನ್ನು ರಾಜನಿಗೆ ತಿಳಿಸಿ ತಮ್ಮ ತಮ್ಮ ಧರ್ಮಕಾರ್ಯಗಳಿಗೋಸ್ಕರ ಉಪಯೋಗಿಸಿಕೊಳ್ಳಬೇಕು.

೩೯. ನಿಧಿ ಸಿಕ್ಕಿದ ವಿಷಯವನ್ನು ಪ್ರಜೆಗಳು ರಾಜನಿಗೆ ಕೂಡಲೆ ತಿಳಿಸಿಬಿಡಬೇಕು. ರಾಜನಾದರೂ ಸಹ ಆ ವಿಷಯವನ್ನು ಪ್ರಕಟನೆಗಳ ಮೂಲಕ ಲೋಕಕ್ಕೆಲ್ಲಾ ತಿಳಿಸಿಬಿಡಬೇಕು. ಈ ರೀತಿ ಮಾಡದೆ ತಪ್ಪಿದಲ್ಲಿ ನರಕವಾಸಕ್ಕೆ ಹೋಗಬೇಕಾಗುವುದು. (ಶಿಕ್ಷಾರ್ಹರಾಗುತ್ತಾರೆಂದು ತಾತ್ಪರ್ಯ.)

೪೦. ಯಾವನಾದರೂ ಶೂದ್ರನಿಗೆ ಹಣವು ನೆಲದಲ್ಲಿ ದೊರೆತರೆ ಅವನ ಕೈಲಿ ಇದು ನನ್ನದೇ ಸರಿಯೆಂದು ಪ್ರಮಾಣಮಾಡಿಸಿ, ಆ ಬಳಿಕ ರಾಜನು ಅದರಲ್ಲಿ ಮೇಲೆ ವಿವರಿಸಿದಂತೆ ಅವನ ಭಾಗವನ್ನು ಕೊಟ್ಟುಬಿಡಬೇಕು.

೪೧. ಈ ರೀತಿ ದೊರೆತ ನಿಧಿಯಲ್ಲಿ ರಾಜಾಂಶವಾಗಿ ಕ್ಷತ್ರಿಯರು ಇಪ್ಪತ್ತನಾಲ್ಕರಂತೆಯೂ, ವೈಶ್ಯನು ಹನ್ನೆರಡರಂತೆಯೂ, ಶೂದ್ರನಾದರೆ ಆರರಂತೆಯೂ ಕೊಟ್ಟುಬಿಡಬೇಕು.

ಅನೃತಂ ಚ ವದರ್ದಂಡ್ಯಃ ಸ್ವವಿತ್ತಸ್ಯಾಂಶಮಷ್ಟಕಂ ।
ಪ್ರಣಷ್ಟಸ್ವಾಮಿಕಂ ರಿಕ್ಥಂ ರಾಜಾ ತ್ರ್ಯಬ್ದಂ ನಿಧಾಪಯೇತ್ ॥ ೪೨ ॥

ಅರ್ವಾಕ್ತ್ರ್ಯಬ್ದಾದ್ಧರೇತ್ಸ್ವಾಮೀ ಪರೇಣ ನೃಪತಿರ್ಹರೇತ್ ।
ಮಮೇದಮಿತಿ ಯೋ ಬ್ರೂಯಾದನುಯುಕ್ತೋ ಯಥಾವಿಧಿ ॥ ೪೩ ॥

ಸಂಪಾದ್ಯ ರೂಪಂ ದ್ರವ್ಯಾದೀನ್ಸ್ವಾಮೀತದ್ದ್ರವ್ಯಮರ್ಹತಿ ।
ಅವೇದಯಾನೋ ನಷ್ಟಸ್ಯ ದೇಶಂ ಕಾಲಂ ಚ ತತ್ವತಃ ॥ ೪೪ ॥

---

೪೨. ಯಾವನೋ ಒಬ್ಬನು ಕಳೆದುಕೊಂಡ ಹಣವು ಸರ್ಕಾರದ ವಶಕ್ಕೆ ಬಂದಿರುತ್ತದೆ. ಅದನ್ನು ಸರ್ಕಾರದವರು ಇದರ ಮಾಲೀಕರು ಬಂದು ತೆಗೆದುಕೊಂಡು ಹೋಗಬಹುದೆಂದು ಪ್ರಕಟಿಸುತ್ತಾರೆ. ಆಗ ಯಾವನೋ ಸುಳ್ಳುಗಾರನು ಆ ಹಣವನ್ನು ಸುಳ್ಳುಸುಳ್ಳಾಗಿ ತನ್ನದೆಂದು ಹೇಳುತ್ತಾನೆ. ಆ ರೀತಿ ಹೇಳಿದ ಸುಳ್ಳುಗಾರನ ಮೋಸವು ಸರ್ಕಾರಕ್ಕೆ ಗೊತ್ತಾದರೆ ಅಂಥವನ ಆಸ್ತಿಯಿಂದ ಶೇಕಡ ಎಂಟರಂತೆ ಸರ್ಕಾರಕ್ಕೆ ದಂಡವನ್ನು ತೆಗೆದುಕೊಂಡು ಸರ್ಕಾರದ ಅಧೀನದಲ್ಲಿರುವ ಹಣವನ್ನು ಮೂರು ವರ್ಷದವರಿವಿಗೆ (ಮಾಲೀಕನ ಶೋಧನೆಗಾಗಿ) ಹಾಗೆಯೇ ಇಟ್ಟಿರಬೇಕು.

೪೩. ಮೂರು ವರ್ಷ ಕಳೆದ ಮೇಲೆ ಅದು ತನ್ನದೆಂದು ಯಾವನಾದರೂ ಬಂದು ಕೇಳಿದರೆ, ಅವನ ಕೈಯಿಂದ ಪಂಚಾಯಿತರೆದುರಿಗೆ, ಈ ಹಣ ನನ್ನದೆಂದು ಪ್ರಮಾಣಮಾಡಿಸಿ ಕೊಟ್ಟುಬಿಡಬೇಕು.

೪೪. ಹೀಗೆ ಹಣವನ್ನು ಪಡೆಯುವಾಗ ಅವನು ಪ್ರಮಾಣಮಾಡುವುದೊಂದೇ ಅಲ್ಲ. ಈ ಹಣವು ಯಾವಾಗ, ಎಷ್ಟು ಹೊತ್ತಿನಲ್ಲಿ, ಹೇಗೆ ಹೋಯಿತು ? ಎಷ್ಟು ಹಣ ಹೋಯಿತೆಂಬ ವಿಷಯವಾಗಿ ಸರಿಯಾದ ಹೇಳಿಕೆಕೊಟ್ಟು, ಆ ಹಣವನ್ನು ತೆಗೆದುಕೊಳ್ಳಬೇಕು.

ವರ್ಣರೂಪಂ ಪ್ರಮಾಣಂ ಚ ತತ್ಸಮಂ ದಂಡಮರ್ಹತಿ ।
ನಿಧಿವದ್ಭಾಗಮಾದದ್ಯಾತ್ಪ್ರನಷ್ಟಾಧಿಗತಾನ್ನೃಪಃ ॥ ೪೫ ॥

ಬಾಲದಾಯಾದಿಕಂ ರಿಕ್ಥಂ ತಾವದ್ರಾಜಾ ತು ಪಾಲಯೇತ್ ।
ಯಾವತ್ಸ ಸ್ಯಾತ್ಸಮಾವೃತ್ತೋ ಯಾವದ್ವಾತೀತ ಶೈಶವಃ ॥ ೪೬ ॥

ಬಾಲಪುತ್ರೀಷು ಚೈವಂ ಸ್ಯಾದ್ರಕ್ಷಣಂ ನಿಷ್ಕುಲಾಸು ಚ ।
ಪತಿವ್ರತಾಸು ಚ ಸ್ತ್ರೀಷು ವಿಧವಾ ಸ್ವಾತುರಾಸು ಚ ॥ ೪೭ ॥

---

೪೫. ಆಯಾಯ ವರ್ಣದವರಿಗೆ ತಕ್ಕಂತೆ ಪ್ರಮಾಣವನ್ನು ಮಾಡಿಸಬೇಕು. ಒಂದು ವೇಳೆ ಅವನು ಮೋಸಗಾರನಾಗಿದ್ದು ಈ ವಿಧಿಗಳಿಗೆಲ್ಲಾ ಒಪ್ಪದೆಹೋಗಿ ಅವನ ಮೇಲೆ ಸಂಶಯವೇನಾದರೂ ಬಂದರೆ, ಅದಕ್ಕೆ ತಕ್ಕ ದಂಡವನ್ನು ಅವನಿಗೆ ವಿಧಿಸಬೇಕು. ನಿಧಿಯು ಸಿಕ್ಕಿದರೆ ಹೇಗೆ ಅವನಿಂದ ಪಾಲನ್ನು ಸರ್ಕಾರಕ್ಕೆ ತೆಗೆದುಕೊಳ್ಳುತ್ತೇವೆಯೋ ಆ ಕ್ರಮದಂತೆ ಕಳೆದುಹೋಯಿತೆಂದು ಹೇಳುವ ಹಣಕ್ಕೆ ಅನುರೂಪವಾಗಿ ಪಾಲನ್ನು ತೆಗೆದುಕೊಂಡುಬಿಡಬೇಕು.

೪೬. ರಾಜ್ಯದಲ್ಲಿ ಯಾವನಾದರೂ ಒಬ್ಬಮನೆಯ ಯಜಮಾನನು ಸತ್ತು ಹೋಗಿ ಆ ಮನೆಯಲ್ಲಿ ಚಿಕ್ಕಮಕ್ಕಳಿದ್ದು ಅವನ ಆಸ್ತಿಯನ್ನು ರೂಢಿಸಿಕೊಳ್ಳಲು ಶಕ್ತಿಯಿಲ್ಲದೆ ಹೋದ ಸಂದರ್ಭದಲ್ಲಿ (ಮೈನರ್ ಸ್ವತ್ತು) ಆ ಮೃತನ ದ್ರವ್ಯವನ್ನೆಲ್ಲಾ ಸರ್ಕಾರದವರು (ರಾಜ) ನೋಡಿಕೊಂಡಿದ್ದು ಮಕ್ಕಳ ಮೈನಾರಿಟಿ (ಬಾಲ್ಯವು) ಕಳೆದು ವಿದ್ಯಾಬುದ್ಧಿಸಂಪನ್ನರಾದಾಗ ಅವರ ಆಸ್ತಿಯನ್ನು ಆ ಹುಡುಗರಿಗೆ ವಹಿಸಿಬಿಡಬೇಕು.

೪೭. ಮನೆಯಲ್ಲಿ ಯಾರೂ ದಿಕ್ಕಿಲ್ಲದೆ ಹುಡುಗರು ಮಕ್ಕಳು ಮಾತ್ರವೇ ಉಳಿದುಕೊಂಡಿರುವ ಸಂದರ್ಭದಲ್ಲಿಯೂ ಸಹ ಇದೇ ಕ್ರಮವನ್ನನುಸರಿಸಬೇಕು. ಮತ್ತು ಯಾರೂ ಗತಿಯಿಲ್ಲದೆ ಗಂಡನನ್ನು ಕಳೆದುಕೊಂಡು ದುಃಖಕ್ಕೆ ಗುರಿಯಾದ ಪತಿವ್ರತಾಸ್ತ್ರೀಯರ ವಿಷಯದಲ್ಲಿಯೂ ಇದೇ ನೀತಿಯನ್ನನುಸರಿಸಬೇಕು.

**ಜೀವಂತೀನಾಂ ತು ತಾಸಾಂ ಯೇ ಧಾರಯೇಯುಃ ಸ್ವಬಾಂಧವಾಃ ।**
**ತಾಂಚ್ಛಿಷ್ಯಾಚ್ಚೌರದಂಡೇನ ಧಾರ್ಮಿಕಃ ಪೃಥಿವೀಪತಿಃ ॥ ೪೮ ॥**

**ಸರ್ವೇಷಾಮೇವ ವರ್ಣಾನಾಂ ಚೋರೈರಪಹೃತಂ ಧನಂ ।**
**ತತ್ಪ್ರಮಾಣಂ ಸ್ವಕಾತ್ಕೋಶಾದ್ದಾತವ್ಯಮವಿಧಾರಯನ್ ॥ ೪೯ ॥**

**ತತಸ್ತು ಪಶ್ಚಾತ್ಕರ್ತವ್ಯಂ ಚೌರಾನ್ವೇಷಣಮಂಜಸಾ ।**
**ಚೌರರಕ್ಷಾಧಿಕಾರಿಭ್ಯೋ ರಾಜಾಽಪಿ ತದವಾಪ್ನುಯಾತ್ ॥ ೫೦ ॥**

**ಅಹೃತೇ ಚ ತಥಾ ವಿತ್ತೇ ಹೃತಮಿತ್ಯೇವ ವಾದಿನಂ ।**
**ನಿರ್ಧನಂ ಪಾರ್ಥಿವಃ ಕೃತ್ವಾ ವಿಷಯಾತ್ಸ್ವಾದ್ವಿವಾಸಯೇತ್ ॥ ೫೧ ॥**

---

೪೮. ಇಂತಹ ದುಃಖಿತರಾದ ಹೆಂಗಸರು ಬದುಕಿರುವಾಗಲೇ ಯಾರಾದರೂ ನೆಂಟರು ಆಕೆಯ ಹಣವನ್ನು ತಾವು ಅಧೀನಮಾಡಿಕೊಳ್ಳಲು ಪ್ರಯತ್ನಪಟ್ಟರೆ ಅಥವಾ ಸ್ವಾಧೀನಮಾಡಿಕೊಂಡರೆ ಅವರನ್ನು ಕಳ್ಳರಂತೆ ಭಾವಿಸಿ, ಕಳ್ಳರಿಗೆ ವಿಧಿಸಬೇಕಾದ ಶಿಕ್ಷೆಯನ್ನೇ ರಾಜನು ಅವರಿಗೂ ವಿಧಿಸಬೇಕು.

೪೯. ಯಾರ ಮನೆಯಲ್ಲಾದರೂ ಕಳುವಾಯಿತೆಂದು ಸರ್ಕಾರಕ್ಕೆ ದೂರು ಬಂದರೆ, ಆ ಹಣ ಕಳೆದುಕೊಂಡವನು ಯಾವ ಜಾತಿಯವನೇ ಆಗಲಿ, ಅವನ ಮನೆಯಲ್ಲಿ ಹೋಯಿತೆಂದು ಹೇಳುವಷ್ಟು ದ್ರವ್ಯವನ್ನು ಸರ್ಕಾರದ ಖಜಾನೆಯಿಂದ ಮೊದಲು ಕೊಟ್ಟುಬಿಡಬೇಕು.

೫೦. ಆ ಮೇಲೆ ಕಳ್ಳರನ್ನು ಹುಡುಕಲು ಪ್ರಯತ್ನಪಡಬೇಕು. ಪೋಲೀಸಿನವರು (ರಕ್ಷಕರು) ಸಾಧ್ಯವಾದಷ್ಟು ಬೇಗ ಆ ಕಳ್ಳರನ್ನು ಹಿಡಿದು ವಿಚಾರಣೆಮಾಡಿ ಆ ಹಣವನ್ನು ಬರಮಾಡಿಕೊಡಬೇಕು. ಹಾಗೆ ಅವರು ಪತ್ತೆಮಾಡಿಕೊಡದೆ ಹೋದರೆ ಪೋಲೀಸ್ ಅಧಿಕಾರಿಗಳು ತಾವೇ ಅಷ್ಟು ಹಣವನ್ನು ಖಜಾನೆಗೆ ಕಟ್ಟಿಬಿಡಬೇಕು.

೫೧. ಇಂತಹ ಒಂದು ಸಂದರ್ಭವು ನಡೆದುದನ್ನು ನೋಡಿಕೊಂಡಿದ್ದು ಯಾವನಾದರೂ ಅತ್ಯಾಶಾಪರನಾದ ಮನೆಗಾರನು ಈ ಕ್ರಮದಿಂದ ತಾನೂ ಸರ್ಕಾರದಿಂದ ದುಡ್ಡು ಹೊಡೆಯಬೇಕೆಂಬ ದುರಾಶೆಯಿಂದ, ನನ್ನ ಮನೆಯಲ್ಲೂ ಹಣ ಕಳುವಾಯಿತೆಂದು ಸರ್ಕಾರಕ್ಕೆ ಸುಳ್ಳು ಸುಳ್ಳಾಗಿಯೇ ಏನಾದರೂ ದೂರುಕೊಟ್ಟ ಸಂದರ್ಭವು

**ನ ತದ್ರಾಜ್ಞಾ ಪ್ರದಾತವ್ಯಂ ಗೃಹೇ ಯತ್ಪರಿಚಾರಕೈಃ ।**
**ಪ್ರಚರದ್ಭಿರ್ಹೃತಂ ದ್ರವ್ಯಂ ಕಾರ್ಯಂ ತತ್ರಾನ್ವವೇಕ್ಷಣಂ ॥ ೫೨ ॥**

**ಸ್ವರಾಷ್ಟ್ರಪಣ್ಯಾದಾದದ್ಯಾದ್ರಾಜಾ ವಿಂಶತಿಮಂ ದ್ವಿಜ ।**
**ಶುಲ್ಕಾಂಶಂ ಪರದೇಶಾಚ್ಚ ನಿಬೋಧ ಗದತೋ ಮಮ ॥ ೫೩ ॥**

**ಕ್ಷಯವ್ಯಯಪ್ರವಾಸಾಂಶ್ಚ ಯಥಾಯಾಮಂ ದ್ವಿಜೋತ್ತಮ ।**
**ಜ್ಞಾತ್ವಾ ತು ಕಲ್ಪಯೇತ್ತತ್ರ ಶುಲ್ಕಾಂಶಂ ಪೃಥಿವೀಪತಿಃ ॥ ೫೪ ॥**

---

ತಿಳಿದಮೇಲೆ, ಅವನ ಮನೆಯಲ್ಲಿ ಹಣ ಹೋಗದೇಹೋದರೂ ಹಣ ಹೋಯಿತೆಂದು ಸುಳ್ಳುದೂರು ಬಂದಿರುವುದೆಂದು ತಿಳಿದಕೂಡಲೆ, ಅಂತಹ ವಂಚಕನನ್ನು ಹಿಡಿದು ಅವನ ಆಸ್ತಿಪಾಸ್ತಿಗಳನ್ನೆಲ್ಲಾ ಮುಟ್ಟುಗೋಲು ಹಾಕಿಕೊಂಡು ಸರ್ಕಾರಕ್ಕೆ ತೆಗೆದು ಕೊಂಡು ಬಿಡಬೇಕಲ್ಲದೆ, ಆ ಪಾಪಿಯನ್ನು ದೇಶವನ್ನೇ ಬಿಟ್ಟು ಓಡಿಸಿಬಿಡಬೇಕು.

೫೨. ಯಾರಾದರೂ ಶ್ರೀಮಂತರ ಮನೆಯಲ್ಲಿ ಕೆಲಸಮಾಡುವ ಆಳುಕಾಳು ಗಳೂ, ಅಡಿಗೆಪರಿಚಾರಕರೂ ಸಮಯನೋಡಿಕೊಂಡಿದ್ದು ಆ ಮನೆಯಲ್ಲೇನಾದರೂ ಸಾಮಾನುಗಳನ್ನು ಕದ್ದರೆಂದು ಅವರ ಮೇಲೆ ಸಂದೇಹಕರವಾದ ದೂರುಬಂದರೆ, ಆ ದ್ರವ್ಯವನ್ನು ರಾಜನು (ಸರ್ಕಾರ) ಕೊಡಬೇಕಾದ್ದಿಲ್ಲ. ಆದರೆ ಅಂತಹವನನ್ನು ಹಿಡಿದು ವಿಚಾರಣೆಮಾಡಿ ಶಿಕ್ಷಿಸಬೇಕು.

೫೩. ಇನ್ನು ಆದಾಯದತೆರಿಗೆ ವಿಷಯ ;—ಯಾವ ವಿಧವಾದ ವ್ಯಾಪಾರದಿಂದ ಯಾವನು ಜೀವಿಸುವನೋ ಅಂತಹ ಆದಾಯದ ಲೆಖ್ಖವನ್ನು ಪರಿಶೀಲಿಸಿ ಖರ್ಚು ವೆಚ್ಚ ಕಳೆದು ಆದಾಯದ ಮೇಲೆ ೧೦೦ಕಡಾ ಇಪ್ಪತ್ತರಷ್ಟು ತೆರಿಗೆಯನ್ನು ಹಾಕಬೇಕು. ಇದು ಒಳದೇಶದ ವ್ಯಾಪಾರಿಗಳ ಮಾತಾಯಿತು. ಹೊರದೇಶದ ವ್ಯಾಪಾರಿಗಳು ಬಂದು ನಮ್ಮ ದೇಶದಲ್ಲಿ ವ್ಯಾಪಾರಮಾಡಿ ಜೀವಿಸುತ್ತಿದ್ದರೆ ಅವರ ವಿಷಯದಲ್ಲಿ ಮಾಡಬೇಕಾದ ಅವರಿಂದ ತೆಗೆದುಕೊಳ್ಳಬೇಕಾದ ತೆರಿಗೆಯವಿಷಯವನ್ನು ಈಗ ಹೇಳುತ್ತೇನೆ. ಕೇಳು.

೫೪. ಪರದೇಶದ ವ್ಯಾಪಾರಿಗಳ ಲೆಖ್ಖವನ್ನು ಚೆನ್ನಾಗಿ ಶೋಧಿಸಿ ಆ ಹಣದಲ್ಲಿ ಖರ್ಚಾದದ್ದು, ನಷ್ಟವಾದದ್ದು, ಪ್ರಯಾಣದಖರ್ಚು ಸಿಬ್ಬಂದಿಖರ್ಚು ಇವುಗಳನ್ನೆಲ್ಲಾ ನೋಡಿ ಅದನ್ನೆಲ್ಲಾ ಕಳೆದುಳಿದ ಆದಾಯದ ಮೇಲೆ ರಾಜನು ತನಗೆ ತೋರಿದಷ್ಟು ತೆರಿಗೆಯನ್ನು ವಿಧಿಸಬಹುದು.

ತಥಾ ಕಾರ್ಯಂ ಯಥಾ ಲಾಭಂ ವಣಿಜಃ ಸಮವಾಪ್ನುಯುಃ ।
ಪುಣ್ಯಚ್ಛೇದಶ್ಚ ನೈವ ಸ್ಯಾತ್ಸ್ವದೇಶೇ ಪೃಥಿವೀಪತೇಃ ॥ ೫೫ ॥

ವ್ಯಯಂ ಶುಲ್ಕಪ್ರವಾಸಾದಿ ಲಂಘಯಿತ್ವಾ ತಥಾ ದ್ವಿಜ ।
ವಿಂಶಾಂಶಭಾಗಮಾದದ್ಯುರ್ದಂಡನೀಯಾ ಅತೋಽನ್ಯಥಾ ॥ ೫೬ ॥

ದಿಶಿ ದಿಶ್ಯೇಕಮೇವ ಸ್ಯಾಚ್ಛುಲ್ಕಸ್ಥಾನಂ ನೃಪಸ್ಯ ತು ।
ತದತಿಕ್ರಮತೋ ದ್ರವ್ಯಂ ರಾಜಗಾಮಿ ವಿಧೀಯತೇ ॥ ೫೭ ॥

---

೫೫. ನಿಜವಾಗಿಯೂ ಅವರು ಚೆನ್ನಾಗಿ ಆದಾಯವನ್ನು ಹೊಂದಿರುವರೆಂದು ಲೆಕ್ಕಪತ್ರಗಳಿಂದ ದೃಢಪಟ್ಟ ಮೇಲೆ ಮಾತ್ರವೇ ಅವರಿಂದ ಆದಾಯ ತೆರಿಗೆಯನ್ನು ತೆಗೆದುಕೊಳ್ಳಬೇಕೇ ಹೊರತು ನಷ್ಟಾದಿಗಳಿಂದ ಅವನು ಕಷ್ಟಕ್ಕೀಡಾಗಿದ್ದರೆ, ತೆರಿಗೆಯನ್ನು ತೆಗೆದುಕೊಳ್ಳಲೇಕೂಡದು. ಈ ರೀತಿ ಯಾವ ರಾಜನು ಧರ್ಮಾನುಸಾರವಾಗಿ ತನ್ನ ದೇಶದಲ್ಲಿ ಆದಾಯಶುಲ್ಕವನ್ನು ವಿಧಿಸುವನೋ, ಅವನಿಗೆ ಯಾವ ದೋಷವೂ ಸಂಘಟಿಸುವುದಿಲ್ಲ.

೫೬. ಲೆಕ್ಕಪರಿಶೀಲನೆಗೆ ನಿಯಮಿತರಾದ ಲೆಕ್ಕಪರಿಶೋಧಕರು ಆದಾಯ ತೆರಿಗೆಯನ್ನು ವಿಧಿಸುವ ಸಂದರ್ಭದಲ್ಲಿ ವ್ಯಾಪಾರಿಯ ಅಥವಾ ಕಂಪನಿಯ ನೌಕರರ ಸಂಬಳ ಸಾರಿಗೆ, ನೌಕರರ ಮಾರ್ಗವ್ಯಯದ ಎಲ್ಲಾ ಖರ್ಚುಗಳನ್ನೂ ಆದಾಯದಿಂದ ಕಳೆದು ಉಳಿಯುವ ನಿವ್ವಳನಫೆಯ ಮೇಲೆ ಶೇಕಡ ಇಪ್ಪತ್ತರಂತೆ ತೆರಿಗೆಯನ್ನು ವಿಧಿಸಬೇಕು. ಹಾಗೆ ಮಾಡದೆ ವ್ಯಾಪಾರಿಗೆ ತೊಂದರೆಮಾಡಿ ಹೆಚ್ಚು ತೆರಿಗೆ ಹಾಕಿದರೆ ಶಿಕ್ಷೆಗೆ ಗುರಿಯಾಗಬೇಕಾಗುತ್ತೆ.

೫೭. ದೇಶದ ಎಲ್ಲಾ ಜಿಲ್ಲೆಗಳಲ್ಲೂ ಒಂದೊಂದು ಆದಾಯದ ತೆರಿಗೆಯ ಕಾರ್ಯಾಲಯವನ್ನು (ಇನ್‌ಕಂಟ್ಯಾಕ್ಸ್ ಆಫೀಸ್) ಸ್ಥಾಪಿಸಬೇಕು. ವಿಧಾಯಕವಾದ ದರಕ್ಕಿಂತ ಹೆಚ್ಚು ತೆರಿಗೆಯನ್ನು ಹಾಕಿ, ಅದನ್ನು ಸರ್ಕಾರಿಲೆಕ್ಕಕ್ಕೆ ಜಮಾ ಮಾಡದೇ ತಾನೇ ವಸೂಲುಮಾಡಿಕೊಳ್ಳುವ ಮನುಷ್ಯನು ದುರುಯೋಗದ ತಪ್ಪಿತಕ್ಕೆ ಗುರಿಯಾಗುತ್ತಾನೆ.

ದೂತಾನಾಂ ಬ್ರಾಹ್ಮಣಾನಾಂ ಚ ರಾಜಾಜ್ಞಾಗಾಮಿನಾಂ ತಥಾ ।
ಸ್ತ್ರೀಣಾಂ ಪ್ರವ್ರಜಿತಾನಾಂ ಚ ತಾರಶುಲ್ಕಂ ವಿವರ್ಜಯೇತ್ ॥ ೫೮ ॥

ಭಿನ್ನಕರ್ಷಾರ್ಪಣಂ ಶುಲ್ಕಂ ನಗ್ರಾಹ್ಯಂ ಪೃಥಿವೀ ಕ್ಷಿತಾ ।
ತಾರೇಷು ದಾಶದೋಷೇಣ ನಷ್ಟಂ ದಾಶಾತ್ಪ್ರದಾಪಯೇತ್ ॥ ೫೯ ॥

ದೈವದೋಷವಿನಿಷ್ಟಂ ಚ ನಷ್ಟಂ ಯಸ್ಯೈವ ತಸ್ಯ ತತ್ ।
ಶೂಕಧಾನ್ಯೇಷು ಷಡ್ಭಾಗಂ ಶಿಂಬಿಧಾನ್ಯೇಷ್ವಥಾಷ್ಟಕಂ ॥ ೬೦ ॥

ರಾಜಾ ಬಲ್ಯರ್ಥಮಾದದ್ಯಾದ್ದೇಶಕಾಲಾನುರೂಪಕಂ ।
ರಾಜಾಂಶಭಾಗಮಾದದ್ಯಾದ್ರಾಜಾ ಪಶುಹಿರಣ್ಯಯೋಃ ॥ ೬೧ ॥

---

೫೮. ಸರಕಾರಿ ನೌಕರರು, ನಿಷ್ಠರಾದ ಬ್ರಾಹ್ಮಣರು, ಅರಮನೆಯ ನೌಕರರು ಹೆಂಗಸರು, ಸನ್ಯಾಸಿಗಳು ಇವರುಗಳಿಗೆಲ್ಲಾ ಯಾವ ವಿಧವಾದ ವೃತ್ತಿಕಂದಾಯವನ್ನೂ ಹಾಕಿ ವಸೂಲುಮಾಡಬಾರದು.

೫೯. ಒಂದು ದೊಡ್ಡ ಅಂಗಡಿಯ ಯಜಮಾನನು ತನ್ನ ವ್ಯಾಪಾರಕ್ಕೆ ಸಂಬಂಧಿಸಿದಂತೆ ಅನೇಕ ಶಾಖೆಗಳನ್ನು (ಬ್ರಾಂಚ್) ತೆರೆದಿರುವುದಾದರೆ, ಆ ಶಾಖೆಗಳಲ್ಲೆಲ್ಲಾ ಬೇರೆ ಬೇರೆಯಾಗಿ ಶುಲ್ಕವನ್ನು ವಸೂಲುಮಾಡಕೂಡದು. ದೊಡ್ಡ ಅಂಗಡಿಗೆ ಸಂಬಂಧಪಟ್ಟಂತೆ ಈ ಶಾಖೆಗಳ ಲೆಖ್ಖವೂ ಸೇರಿಹೋಗುವುದಾದರೆ, ದೊಡ್ಡ ಪ್ರಧಾನವೆನಿಸಿದ ಅಂಗಡಿಗೇ ಎಲ್ಲಾ ತೆರಿಗೆಯನ್ನೂ ಒಟ್ಟುಸೇರಿಸಿ ಲೆಖ್ಖವನ್ನು ವಿಧಿಸಬೇಕು.

೬೦. ದುರದೃಷ್ಟದೋಷದಿಂದ ಯಾವನಾದರೂ ವ್ಯಾಪಾರದಲ್ಲಿ ನಷ್ಟ ಹೊಂದಿದರೆ ಅಥವಾ ಕಳ್ಳರಿಂದಾಗಲಿ, ಬೇರೆ ವಿಧದಿಂದಾಗಲಿ ಪದಾರ್ಥಗಳು ನಷ್ಟವಾಗಿ ಆ ವ್ಯಾಪಾರಿಗೆ ವಿಪತ್ತು ಸಂಭವಿಸಿದರೆ ಇದನ್ನು ವಿಮರ್ಶಿಸಿ ಶುಲ್ಕವನ್ನು ವಜಾಮಾಡಿ ಬಿಡಬೇಕು. ಚಿಕ್ಕಶಾಖೆಗಳಿಗೆ ನಷ್ಟಸಂಭವಿಸಿದರೆ ಇತರ ಶಾಖೆಗಳ ಆದಾಯದಿಂದ ಆ ನಷ್ಟವನ್ನು ಕಟ್ಟಿಕೊಡಬೇಕು.

೬೧. ಸಾವೆ, ನವಣೆ, ಹಾರಕ ಮುಂತಾದ ಧಾನ್ಯಗಳು ಬೆಳೆದರೆ ರಾಜಪಾಲಿಗೋಸ್ಕರ ರೂಪಾಯಿನಲ್ಲಿ ಆರಾಣೆಪಾಲನ್ನು ಕೊಡಬೇಕು. ಹೆಸರು, ಕಡಲೆ, ಉದ್ದು ಮುಂತಾದ ಧಾನ್ಯಗಳಿಗೆ ಎಂಟಾಣೆಪಾಲು ಕೊಡಬೇಕು.

ತಥಾ ಕಾರ್ಯಂ ಯಥಾ ಲಾಭಂ ವಣಿಜಃ ಸಮವಾಪ್ನುಯುಃ ।
ಪುಣ್ಯಚ್ಛಿದಶ್ಚ ನೈವ ಸ್ಯಾತ್ಸ್ವದೇಶೇ ಪೃಥಿವೀಪತೇಃ ॥ ೫೫ ॥

ವ್ಯಯಂ ಶುಲ್ಕಪ್ರವಾಸಾದಿ ಲಂಘಯಿತ್ವಾ ತಥಾ ದ್ವಿಜ ।
ವಿಂಶಾಂಶಭಾಗಮಾದದ್ಯುರ್ದಂಡನೀಯಾ ಅತೋನ್ಯಥಾ ॥ ೫೬ ॥

ದಿಶಿ ದಿಶ್ಯೇಕಮೇವ ಸ್ಯಾಚ್ಛುಲ್ಕಸ್ಥಾನಂ ನೃಪಸ್ಯ ತು ।
ತದತಿಕ್ರಮತೋ ದ್ರವ್ಯಂ ರಾಜಗಾಮಿ ವಿಧೀಯತೇ ॥ ೫೭ ॥

---

೫೫. ನಿಜವಾಗಿಯೂ ಅವರು ಚೆನ್ನಾಗಿ ಆದಾಯವನ್ನು ಹೊಂದಿರುವರೆಂದು ಲೆಖ್ಖಪತ್ರಗಳಿಂದ ದೃಢಪಟ್ಟ ಮೇಲೆ ಮಾತ್ರವೇ ಅವರಿಂದ ಆದಾಯ ತೆರಿಗೆಯನ್ನು ತೆಗೆದುಕೊಳ್ಳಬೇಕೇ ಹೊರತು ನಷ್ಟಾದಿಗಳಿಂದ ಅವನು ಕಷ್ಟಕ್ಕೀಡಾಗಿದ್ದರೆ, ತೆರಿಗೆಯನ್ನು ತೆಗೆದುಕೊಳ್ಳಲೇಕೂಡದು. ಈ ರೀತಿ ಯಾವ ರಾಜನು ಧರ್ಮಾನುಸಾರವಾಗಿ ತನ್ನ ದೇಶದಲ್ಲಿ ಆದಾಯಶುಲ್ಕವನ್ನು ವಿಧಿಸುವನೋ, ಅವನಿಗೆ ಯಾವ ದೋಷವೂ ಸಂಘಟಿಸುವುದಿಲ್ಲ.

೫೬. ಲೆಖ್ಖಪರಿಶೀಲನೆಗೆ ನಿಯಮಿತರಾದ ಲೆಖ್ಖಪರಿಶೋಧಕರು ಆದಾಯ ತೆರಿಗೆಯನ್ನು ವಿಧಿಸುವ ಸಂದರ್ಭದಲ್ಲಿ ವ್ಯಾಪಾರಿಯ ಅಥವಾ ಕಂಪನಿಯ ನೌಕರರ ಸಂಬಳ ಸಾರಿಕೆ, ನೌಕರರ ಮಾರ್ಗವ್ಯಯದ ಎಲ್ಲಾ ಖರ್ಚುಗಳನ್ನೂ ಆದಾಯದಿಂದ ಕಳೆದು ಉಳಿಯುವ ನಿವ್ವಳನಫೆಯ ಮೇಲೆ ಶೇಕಡ ಇಪ್ಪತ್ತರಂತೆ ತೆರಿಗೆಯನ್ನು ವಿಧಿಸಬೇಕು. ಹಾಗೆ ಮಾಡದೆ ವ್ಯಾಪಾರಿಗೆ ತೊಂದರೆಮಾಡಿ ಹೆಚ್ಚು ತೆರಿಗೆ ಹಾಕಿದರೆ ಶಿಕ್ಷೆಗೆ ಗುರಿಯಾಗಬೇಕಾಗುತ್ತೆ.

೫೭. ದೇಶದ ಎಲ್ಲಾ ಜಿಲ್ಲೆಗಳಲ್ಲೂ ಒಂದೊಂದು ಆದಾಯದ ತೆರಿಗೆಯ ಕಾರ್ಯಾಲಯವನ್ನು (ಇನ್‌ಕಂಟಾಕ್ಸ್ ಆಫೀಸ್) ಸ್ಥಾಪಿಸಬೇಕು. ವಿಧಾಯಕವಾದ ದರಕ್ಕಿಂತ ಹೆಚ್ಚು ತೆರಿಗೆಯನ್ನು ಹಾಕಿ, ಅದನ್ನು ಸರ್ಕಾರಿಲೆಖ್ಖಕ್ಕೆ ಜಮಾ ಮಾಡದೇ ತಾನೇ ವಸೂಲುಮಾಡಿಕೊಳ್ಳುವ ಮನುಷ್ಯನು ದುರುಯೋಗದ ತಪ್ಪಿತಕ್ಕೆ ಗುರಿಯಾಗುತ್ತಾನೆ.

ದೂತಾನಾಂ ಬ್ರಾಹ್ಮಣಾನಾಂ ಚ ರಾಜಾಜ್ಞಾಗಾಮಿನಾಂ ತಥಾ ।
ಸ್ತ್ರೀಣಾಂ ಪ್ರವ್ರಜಿತಾನಾಂ ಚ ತಾರಶುಲ್ಕಂ ವಿವರ್ಜಯೇತ್ ॥ ೫೮ ॥

ಭಿನ್ನಕರ್ಷಾಪಣಂ ಶುಲ್ಕಂ ನಗ್ರಾಹ್ಯಂ ಪೃಥಿವೀ ಕ್ಷಿತಾ ।
ತಾರೇಷು ದಾಶದೋಷೇಣ ನಷ್ಟಂ ದಾಶಾತ್ಪ್ರದಾಪಯೇತ್ ॥ ೫೯ ॥

ದೈವದೋಷವಿನಿಷ್ಟಂ ಚ ನಷ್ಟಂ ಯಸ್ಯೈವ ತಸ್ಯ ತತ್ ।
ಶೂಕಧಾನ್ಯೇಷು ಷಡ್ಭಾಗಂ ಶಿಂಬಿಧಾನ್ಯೇಷ್ವಥಾಷ್ಟಕಂ ॥ ೬೦ ॥

ರಾಜಾ ಬಲ್ಯರ್ಥಮಾದದ್ಯಾದ್ದೇಶಕಾಲಾನುರೂಪಕಂ ।
ರಾಜಾಂಶಭಾಗಮಾದದ್ಯಾದ್ರಾಜಾ ಪಶುಹಿರಣ್ಯಯೋಃ ॥ ೬೧ ॥

---

೫೮. ಸರಕಾರಿ ನೌಕರರು, ನಿಸ್ಪೃರಾದ ಬ್ರಾಹ್ಮಣರು, ಅರಮನೆಯ ನೌಕರರು ಹೆಂಗಸರು, ಸನ್ಯಾಸಿಗಳು ಇವರುಗಳಿಗೆಲ್ಲಾ ಯಾವ ವಿಧವಾದ ವೃತ್ತಿಕಂದಾಯವನ್ನೂ ಹಾಕಿ ವಸೂಲುಮಾಡಬಾರದು.

೫೯. ಒಂದು ದೊಡ್ಡ ಅಂಗಡಿಯ ಯಜಮಾನನು ತನ್ನ ವ್ಯಾಪಾರಕ್ಕೆ ಸಂಬಂಧಿಸಿದಂತೆ ಅನೇಕ ಶಾಖೆಗಳನ್ನು (ಬ್ರಾಂಚ್) ತೆರೆದಿರುವುದಾದರೆ, ಆ ಶಾಖೆಗಳಲ್ಲೆಲ್ಲಾ ಬೇರೆ ಬೇರೆಯಾಗಿ ಶುಲ್ಕವನ್ನು ವಸೂಲುಮಾಡಕೂಡದು. ದೊಡ್ಡ ಅಂಗಡಿಗೆ ಸಂಬಂಧಪಟ್ಟಂತೆ ಈ ಶಾಖೆಗಳ ಲೆಖ್ಖವೂ ಸೇರಿಹೋಗುವುದಾದರೆ, ದೊಡ್ಡ ಪ್ರಧಾನವೆನಿಸಿದ ಅಂಗಡಿಗೇ ಎಲ್ಲಾ ತೆರಿಗೆಯನ್ನೂ ಒಟ್ಟುಸೇರಿಸಿ ಲೆಖ್ಖವನ್ನು ವಿಧಿಸಬೇಕು.

೬೦. ದುರದೃಷ್ಟದೋಷದಿಂದ ಯಾವನಾದರೂ ವ್ಯಾಪಾರದಲ್ಲಿ ನಷ್ಟ ಹೊಂದಿದರೆ ಅಥವಾ ಕಳ್ಳರಿಂದಾಗಲಿ, ಬೇರೆ ವಿಧದಿಂದಾಗಲಿ ಪದಾರ್ಥಗಳು ನಷ್ಟವಾಗಿ ಆ ವ್ಯಾಪಾರಿಗೆ ವಿಪತ್ತು ಸಂಭವಿಸಿದರೆ ಇದನ್ನು ವಿಮರ್ಶಿಸಿ ಶುಲ್ಕವನ್ನು ವಜಾಮಾಡಿಬಿಡಬೇಕು. ಚಿಕ್ಕಶಾಖೆಗಳಿಗೆ ನಷ್ಟಸಂಭವಿಸಿದರೆ ಇತರ ಶಾಖೆಗಳ ಆದಾಯದಿಂದ ಆ ನಷ್ಟವನ್ನು ಕಟ್ಟಿಕೊಡಬೇಕು.

೬೧. ಸಾವೆ, ನವಣೆ, ಹಾರಕ ಮುಂತಾದ ಧಾನ್ಯಗಳು ಬೆಳೆದರೆ ರಾಜಪಾಲಿಗೋಸ್ಕರ ರೂಪಾಯಿನಲ್ಲಿ ಆರಾಣೆಪಾಲನ್ನು ಕೊಡಬೇಕು. ಹೆಸರು, ಕಡಲೆ, ಉದ್ದು ಮುಂತಾದ ಧಾನ್ಯಗಳಿಗೆ ಎಂಟಾಣೆಪಾಲು ಕೊಡಬೇಕು.

ಗಂಧೌಷಧಿರಸಾನಾಂ ಚ ಪುಷ್ಪಮೂಲಫಲಸ್ಯ ಚ ।
ಪತ್ರಶಾಕತೃಣಾನಾಂ ಚ ವತ್ಸರೇಣ ಚ ಚರ್ಮಣಾಂ ॥ ೬೨ ॥

ವೈದಲಾನಾಂ ಚ ಭಾಂಡಾನಾಂ ಸರ್ವಸ್ಯಾಶ್ಮಮಯಸ್ಯ ಚ ।
ಷಡ್ಭಾಗಮೇವ ಚಾದದ್ಯಾದ್ಬ್ರಾಹ್ಮಣೇಭ್ಯಸ್ತಥಾ ಕರಂ ॥ ೬೩ ॥

ತೇಭ್ಯಸ್ತದ್ಧರ್ಮಲಾಭೇನ ರಾಜ್ಞೋಲಾಭಃ ಪರಂ ಭವೇತ್ ।
ನ ಚ ಕ್ಷುಧ್ಯಾವಸೀದೇತ ಶ್ರೋತ್ರಿಯೋ ವಿಷಯೇ ವಸನ್ ॥ ೬೪ ॥

---

೬೨-೬೩. ಒಂದು ವೇಳೆ ಮಳೆಯಾಗದೆ ಬೆಳೆಹೋಗಿ ನಷ್ಟಸಂಭವಿಸುವುದಾದರೆ ದೇಶಕಾಲವರ್ತಮಾನವನ್ನನುಸರಿಸಿ ಕಂದಾಯವನ್ನು ನಾಣ್ಯರೂಪವಾಗಿ ತೆಗೆದುಕೊಳ್ಳಬಹುದು, ಅಥವಾ ಬಿಟ್ಟುಬಿಡಬಹುದು. ಬ್ರಾಹ್ಮಣನು ವರ್ಣಾಶ್ರಮ ಧರ್ಮವನ್ನು ಮೀರಿ ಯಾವ ವಿಧವಾದ ವ್ಯಾಪಾರವನ್ನೂ ಮಾಡಕೂಡದು. ಹೀಗಿದ್ದಾಗ್ಯೂ ಧರ್ಮವನ್ನು ಮೀರಿ ಗಂಧ, ಔಷಧಿ, ರಸಪದಾರ್ಥಗಳು (ಎಣ್ಣೆ, ಬೆಣ್ಣೆ, ತುಪ್ಪ, ಇತ್ಯಾದಿ), ಹೂವು, ಹಣ್ಣು, ಗೆಡ್ಡೆಗೆಣಸು, ಎಲೆ, ತರಕಾರಿ, ಹುಲ್ಲು, ಚಕ್ಕಳ, ಮಡಿಕೆ, ಕಲ್ಲುಮರಿಗೆಗಳೇ ಮುಂತಾದ ವ್ಯಾಪಾರದಲ್ಲಿ ನಿರತನಾದರೆ ಅಂಥ ಬ್ರಾಹ್ಮಣನಿಂದ ಆರಾಣೆಪಾಲು ಕಂದಾಯವನ್ನು ವಸೂಲುಮಾಡಬಹುದು.

೬೪. ಆದರೆ ಆ ರೀತಿಯಾಗಿ ಧರ್ಮಬಾಹಿರರಾದ ಬ್ರಾಹ್ಮಣರಿಂದ ವಸೂಲು ಮಾಡುವ ಕಂದಾಯ, ತೆರಿಗೆ ಮುಂತಾದುವುಗಳನ್ನು ದೇಶಕ್ಕೊಂದು ಲಾಭವೆಂದು ತಿಳಿಯಲಾಗದು. ಇಂತಹ ಲಾಭಕ್ಕಿಂತ ಧರ್ಮನಿರತನಾದ ಬ್ರಾಹ್ಮಣನಿಂದಾಗುವ ಆಶೀರ್ವಾದಲಾಭವು ಮಹಾರಾಜನಿಗೆ ಪರಮಲಾಭವೆಂದು ತಿಳಿಯಬೇಕು. (ಇಲ್ಲಿ ವರ್ಣಾಶ್ರಮಧರ್ಮವನ್ನು ಪರಿಪಾಲನೆಮಾಡುವ ಜನರಿಗೆ ಬಹು ಗೌರವವಿತ್ತು ಈ ಮಾತನ್ನು ಬರೆದಿದಾರೆ). ಆದ್ದರಿಂದ ಶ್ರೋತ್ರಿಯ ಬ್ರಾಹ್ಮಣರಾದವರು ಲೋಕದ ಶಾಂತಿಸುಭಿಕ್ಷೆಗಳಿಗೆ ಮುಖ್ಯಕಾರಣರೆಂದು ಚೆನ್ನಾಗಿ ತಿಳಿದುಕೊಂಡು, ಅವರ ಅಶನ ವಸನಗಳಿಗೆ ತಕ್ಕ ಸೌಕರ್ಯವನ್ನು ರಾಜನು ಕಲ್ಪಿಸಬೇಕು. ಯಾವ ಶ್ರೋತ್ರಿಯ ಬ್ರಾಹ್ಮಣನಾದರೂ ಧರ್ಮನಿರತನಾದ ರಾಜನ ರಾಜ್ಯದ ಎಲ್ಲೆಯಲ್ಲೆಲ್ಲಿಯೂ ಹೊಟ್ಟೆ ಹಸಿವಿನಿಂದ ಸಂಕಟಪಡಕೂಡದು.

ಯಸ್ಯ ರಾಜ್ಞಸ್ತು ವಿಷಯೇ ಶ್ರೋತ್ರಿಯಃ ಸೀದತಿ ಕ್ಷುಧಾ ।
ತಸ್ಯ ಸೀದತಿ ತದ್ರಾಷ್ಟ್ರಂ ದುರ್ಭಿಕ್ಷವ್ಯಾಧಿ ತಸ್ಕರೈಃ ॥ ೬೫ ॥

ಶ್ರುತವೃತ್ತೇ ತು ವಿಜ್ಞಾಯ ವೃತ್ತಿಂ ತಸ್ಯ ಪ್ರಕಲ್ಪಯೇತ್ ।
ರಕ್ಷೇಚ್ಚ ಸರ್ವತಸ್ತ್ವೇನಂ ಪಿತಾ ಪುತ್ರಮಿವೌರಸಂ ॥ ೬೬ ॥

ಸಂರಕ್ಷ್ಯಮಾಣೋ ರಾಜ್ಞಾ ಯಃ ಕುರುತೇ ಧರ್ಮಸಂಗ್ರಹಂ ।
ತೇನಾಯುರ್ವರ್ಧತೇ ರಾಜ್ಞೋ ದ್ರವಿಣಂ ರಾಷ್ಟ್ರಮೇವ ಚ ॥ ೬೭ ॥

ಕರ್ಮ ಕುರ್ಯುರ್ನರೇಂದ್ರಸ್ಯ ಮಾಸೇನೈಕಂ ಚ ಶಿಲ್ಪಿನಃ ।
ಭಕ್ತಮಾತ್ರೇಣ ಯೇ ಚಾನ್ಯೇ ಸ್ವಶರೀರೋಪಜೀವಿನಃ ॥ ೬೮ ॥

---

೬೫. ಯಾವ ಮಹಾರಾಜನ ರಾಜ್ಯದಲ್ಲಿ ಶ್ರೋತ್ರಿಯಬ್ರಾಹ್ಮಣನಾದವನು ಹೊಟ್ಟೆಹಸಿವಿನಿಂದ ಸಂಕಟಪಡುತ್ತಿರುವನೋ, ಆ ರಾಜ್ಯವು ದುರ್ಭಿಕ್ಷದಿಂದಲೂ, ರೋಗಾದ್ಯುಪದ್ರವಗಳಿಂದಲೂ, ಕಳ್ಳರ ಕಾಟಗಳಿಂದಲೂ ಕ್ಷೀಣಸ್ಥಿತಿಗೆ ಬಂದು ಬಿಡುತ್ತದೆ.

೬೬. ಮಹಾರಾಜನಾದವನು ತನ್ನ ರಾಜ್ಯದಲ್ಲಿದ್ದ ಯೋಗ್ಯರಾದ ವೇದಶಾಸ್ತ್ರಗಳನ್ನರಿತ ಪಂಡಿತರೆಷ್ಟು ಮಂದಿ ಇದ್ದರೂ, ಅವರೆಲ್ಲಿದ್ದರೂ ಹುಡುಕಿಸಿ ಅವರನ್ನು ಕರೆಯಿಸಿ ಅವರಿಗೆಲ್ಲಾ ಜೀವನೋಪಾಯವನ್ನು ಕಲ್ಪಿಸಿ, ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಕಾಪಾಡಿಕೊಂಡು ಬರುವಂತೆಯೇ ಅವರನ್ನು ಸಂರಕ್ಷಿಸಿಕೊಂಡು ಬರಬೇಕು.

೬೭. ಮಹಾರಾಜನಿಂದ ಸಂರಕ್ಷಿತರಾದ ಬ್ರಾಹ್ಮಣರು ತಾವು ಗಳಿಸುವ ಮತ್ತು ಆಚರಿಸುವ ಧರ್ಮಕಾರ್ಯಗಳಿಂದ ಮಹಾರಾಜನಿಗೆ ಆಯುಷ್ಯಾಭಿವೃದ್ಧಿಯೂ, ರಾಜ್ಯಕ್ಕೆ ಕ್ಷೇಮವೂ, ರಾಜ್ಯಸಂಪತ್ತೂ ಸಹ ಹೆಚ್ಚುತ್ತಾ ಬರುವುದು.

೬೮. ಶಿಲ್ಪಿಗಳಾದವರು ಮಹಾರಾಜನು ಹೇಳಿದ ಕೆಲಸವನ್ನು ಒಂದೇ ತಿಂಗಳಲ್ಲಿ ಮುಗಿಸಿಕೊಡಬೇಕು. ರಾಜಸೇವೆಯನ್ನೂ ಮಾಡದೆ ಇನ್ನಾವ ಕಾರ್ಯವನ್ನೂ ಚಟುವಟಿಕೆಯಾಗಿ ಮಾಡದೆ ಬರೀ ಹೊಟ್ಟೆ ಹೊರೆಯುವ (ಯೇಚಾನ್ಯೆಗಳಾದ) ಜನರನ್ನು ಅನ್ನದಂಡದವರೆಂದು ಹೇಳಬೇಕು.

**ಸ್ನಾತಾನುಲಿಪ್ತಾಶ್ಚ ವಿಭೂಷಿತಾಶ್ಚ**
**ವೇಶ್ಯಾಂಗನಾವಾರವಿನರ್ತಿತೇನ।**
**ಸಂವೀತಗಾತ್ರಾಃ ಪೃಥಿವೀಶ್ವರಸ್ಯ**
**ಸದಾಭ್ಯುಪಾಸಾಂ ಪರಿತಸ್ತ್ರಿಕುರ್ಯುಃ ॥೬೯॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ರಾಜಧರ್ಮ ವರ್ಣನೋನಾಮೈಕಷಷ್ಟಿತಮೋಽಧ್ಯಾಯಃ**



೬೯. ಪ್ರತಿದಿನವೂ ಆನಂದದಿಂದ ಸ್ನಾನಮಾಡಿ ಮೈಗೆ ಪರಿಮಳಗಂಧಗಳನ್ನು ಲೇಪಿಸಿಕೊಂಡು ರತ್ನಾಭರಣಗಳಿಂದ ಭೂಷಿತರಾಗಿ ಆರಾಮಾಸನಗಳಲ್ಲಿ ಹಾಯಾಗಿ ಕುಳಿತುಕೊಂಡು ವೇಶ್ಯಾಂಗನೆಯರ ನರ್ತನವನ್ನು ನೋಡುತ್ತಾ ಸೊಗಸಾದ ಸಂಗೀತಗಳನ್ನು ಕೇಳುತ್ತಾ ಇರುವ ಮಹಾರಾಜರ ಸೇವೆಯನ್ನು ಮಾಡುವವರೇ ಪುಣ್ಯವಂತರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆ ಖಂಡದಲ್ಲಿ ರಾಜಧರ್ಮವರ್ಣನೆಯೆಂಬ ಹೆಸರಿನ
ಅರವತ್ತೊಂದನೆ ಅಧ್ಯಾಯ ಮುಗಿಯಿತು.



॥ ಶ್ರೀಃ ॥

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ದ್ವಿಷಷ್ಟಿತಮೋಽಧ್ಯಾಯಃ

ಪುಷ್ಕರ ಉವಾಚ

**ಧರ್ಮಶ್ಚಾರ್ಥಶ್ಚ ಕಾಮಶ್ಚ ಪುರುಷಾರ್ಥಃ ಪರಃ ಸ್ಮೃತಃ ।**
**ಅನ್ಯೋನ್ಯರಕ್ಷಣಾತ್ತೇಷಾಂ ಸೇವಾ ಕಾರ್ಯಾ ಮಹೀಕ್ಷಿತಾ ॥ ೧ ॥**

**ಧರ್ಮಮೂಲೋಽರ್ಥವಿಟಪಸ್ತಥಾ ಕಾಮಫಲೋ ಮಹಾನ್ ।**
**ತ್ರಿವರ್ಗಪಾದಪಸ್ತಸ್ಯ ರಕ್ಷಣಾತ್ಫಲಭಾಗ್ಭವೇತ್ ॥ ೨ ॥**

---

## ಅರವತ್ತೆರಡನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಎಲೈ ಪರಶುರಾಮನೇ, ಕೇಳು. ಧರ್ಮಾರ್ಥ ಕಾಮಗಳೆಂಬ ಈ ಮೂರೂ ಪರಮಪುರುಷಾರ್ಥವೆಂದೆನಿಸಿಕೊಳ್ಳುವುವು. ಇವು ಒಂದ ರಿಂದೊಂದು ಅನ್ಯೋನ್ಯವಾಗಿ ಸಂರಕ್ಷಿಸಿಕೊಳ್ಳಲ್ಪಡತಕ್ಕವುಗಳಾದ್ದರಿಂದ ಈ ಮೂರರ ಸೇವೆಯನ್ನೂ ಮಹಾರಾಜನು ಮಾಡುತ್ತಲಿರಬೇಕು.

೨. ಅರ್ಥ (ಹಣ)ವೆಂಬ ಮರಕ್ಕೆ ಧರ್ಮವೇ ಬುಡವು (ಬೇರು). ಈ ಅರ್ಥ ವೆಂಬ ಮರದಲ್ಲಿ ಮಹತ್ತರವಾದ ಕಾಮಫಲಗಳು ಯಥೇಚ್ಛವಾಗಿ ಬಿಡುವುವು. ಈ ಅರ್ಥವೃಕ್ಷಕ್ಕೆ ತ್ರಿವರ್ಗಪಾದಪ (ಮೂರು ಗುಂಪಿನ ಮರ) ವೆಂಬ ಹೆಸರು ಸಲ್ಲುವು ದಾದ್ದರಿಂದ ಈ ವೃಕ್ಷವನ್ನು ಚೆನ್ನಾಗಿ ಕಾಪಾಡಿಕೊಂಡರೆ ಎಷ್ಟೋ ಕಾಮಾರ್ಥ ಫಲಗಳು ದೊರೆಯುವುವು.

ಧರ್ಮಾವಿರೋಧಿನೀ ಕಾರ್ಯಾ ಕಾಮಸೇವಾ ಸದೈವ ತು ।
ಮೂಲಚ್ಛೇದೇ ಭವೇನ್ನಾಶೋ ವಿಟಪಸ್ಯ ಫಲಸ್ಯಚ ॥ ೩ ॥

ಕಾಮಸೇವಾವಿಹೀನಸ್ಯ ಧರ್ಮಾರ್ಥಾವಪಿ ನಿಷ್ಫಲೌ ।
ಓಷಧೀನಾಂ ಫಲಾರ್ಥಾಯ ಕೀನಾಶೋ ಯತ್ನವಾಂಸ್ತಥಾ ॥ ೪ ॥

ಕಾಮಾರ್ಥೀ ಯತ್ನವಾನೇವಂ ಲೋಭೋ ಧರ್ಮಾರ್ಥಯೋರ್ದ್ವಿಜ ।
ಕಾಮಸ್ಯಾಪಿ ಪರಂ ನಾರ್ಯೋ ಧರ್ಮರಾಗ ಮದೋತ್ಕಟಾಃ ॥ ೫ ॥

ತದರ್ಥಂ ರತ್ನನಿಧಯೋ ವಿಭವಾಶ್ಚ ತಥಾ ಪರೇ ।
ಗೀತಂ ವಾದ್ಯಂ ಸುಮಧುರಂ ಭೋಜ್ಯಂ ಪಾನಂ ಸ್ರಜಸ್ತಥಾ ॥ ೬ ॥

---

೩. ಯಾವಾಗಲೂ ಕಾಮೋಪಭೋಗವನ್ನು ಧರ್ಮಕ್ಕೆ ವಿರೋಧವಿಲ್ಲದ ರೀತಿಯಲ್ಲಿ ಮಾಡಿಕೊಂಡು ಬರಬೇಕು. ಹೀಗೆ ಮಾಡದೆ ಧರ್ಮವನ್ನುಲ್ಲಂಘಿಸಿ ಕಾಮಸೇವಾತತ್ಪರನಾಗುವ ಮನುಷ್ಯನು ಧರ್ಮದ ಬೇರನ್ನು ಕೊಯ್ದಂತಾಗುವುದು. ಯಾವಾಗ ಗಿಡದ ಬೇರು ನಾಶವಾಗುವುದೋ ಆಗ ಒಣಗಿದ ಮರದಲ್ಲಿ ಫಲವಿಲ್ಲದಂತೆ, ಧರ್ಮಭ್ರಷ್ಟನು ತನ್ನ ಸೌಖ್ಯ (ಕಾಮ) ಫಲವನ್ನೆಲ್ಲಾ ಕಳೆದುಕೊಳ್ಳುವನು.

೪. ಕಾಮೋಪಭೋಗವನ್ನನುಭವಿಸದವನ ಧರ್ಮಾರ್ಥಗಳೆರಡೂ ಸಹ ಉತ್ತು ಬಿತ್ತು ಪೈರು ಬೆಳೆದ ಬಡರೈತನು, ಅದರ ಫಲವನ್ನು ಅನುಭವಿಸದೆ ವಂಚಿತನಾದಂತೆ ನಿಷ್ಫಲವಾಗಿ ಹೋಗುವುವು. (ಕೀನಾಶ--ಉಳುವ ರೈತ ಮತ್ತು ಯಮ.)

೫. ಕಾಮಾರ್ಥಿಯಾದವನು ಧರ್ಮಾರ್ಥಗಳಲ್ಲಾಶೆಯಿಟ್ಟು ಅದನ್ನು ಪ್ರಯತ್ನದಿಂದ ಸಾಧಿಸಬೇಕು. ಧರ್ಮ ಮತ್ತು ಅನುರಾಗಗಳಿಂದಲೂ, ಮದದಿಂದಲೂ ಉತ್ಕಟರಾದ ನಾರಿಯರೇ ಕಾಮಸುಖಕ್ಕೆ ಉಪಭೋಗಾರ್ಹರಾದವರು.

೬. ಈ ರೀತಿ ನಾರಿಯರು ಭೋಗಾರ್ಹರಾಗಿರುವಂತೆ, ರತ್ನಗಳೂ, ನಿಧಿಗಳೂ, ದ್ರವ್ಯಗಳೂ ಸಕಲ ವಿಧವಾದ ಇತರ ವೈಭವಗಳೂ, ಗೀತವಾದ್ಯ ನೃತ್ಯಗಳೂ, ರುಚಿಕರವಾದ ಭಕ್ಷ್ಯಭೋಜ್ಯಗಳಿಂದೊಡಗೂಡಿದ ಭೋಜನವೂ, ಪಾನಕ (ಈಗಿನ ಕಾಲಕ್ಕೆ ಕಾಫಿ-ಟೀ) ಮೊದಲಾದ ಪಾನದ್ರವ್ಯಗಳೂ, ಘಮಘಮಾಯಿಸುವ ಪರಿಮಳ ಪುಷ್ಪಗಳೂ ಸಹ ಭೋಗ್ಯವಸ್ತುಗಳೆನಿಸಿಕೊಳ್ಳುವುವು.

**ಭೂಷಣಾನಿ ಸುಗಂಧೀನಿ ತದರ್ಥಂ ಸರ್ವಮೇವಹಿ ।**
**ತಪಶ್ಚಾಪಿ ತಪಸ್ಯಂತಿ ದುಃಖಂ ಪರಮುಪಾಶ್ರಿತಾಃ** ॥ ೭ ॥

**ದುರ್ಗಮಾಣಿ ಚ ತೀರ್ಥಾನಿ ವ್ರಜಂತಿ ಪುರುಷಾಸ್ತಥಾ ।**
**ತ್ಯಜಂತಿ ಸಮರೇ ಪ್ರಣಾನ್ಪ್ರಾಣೇಭ್ಯೋಽಪ್ಯಧಿಕಂ ಧನಂ** ॥ ೮ ॥

**ತ್ಯಜಂತಿ ಬ್ರಾಹ್ಮಣಾದಿಭ್ಯಸ್ತಥಾ ಸ್ವರ್ಗೇಪ್ಸವೋ ಜನಾಃ ।**
**ಸ್ವರ್ಗಸ್ಯಾಪಿ ಧನಂ ರಾಮ ಕಾರಣಂ ವಿದ್ಧಿ ಭಾರ್ಗವ** ॥ ೯ ॥

**ತಾ ಏವ ಚಪಲಾಪಾಂಗವಿಕ್ಷೇಪವಿಜಿತಾಃ ಪ್ರಜಾಃ ।**
**ಕ್ಷಯಮೇವ ಕ್ಷಯಂ ತಸ್ಯ ಯಸ್ಯ ನಾಧ್ಯಸಿತಂ ಸದಾ** ॥ ೧೦ ॥

---

೭. ಒಡವೆಗಳು ಇರುವುದೂ ಅವುಗಳನ್ನಿಟ್ಟುಕೊಂಡು ಭೋಗಪಡುವುದಕ್ಕಾಗಿಯೇ. ಸುಗಂಧದ್ರವ್ಯಗಳಿರುವುದು ಮೈಗೆ ಲೇಪಿಸಿಕೊಳ್ಳುವುದಕ್ಕಾಗಿಯೇ. ಇತರ ಭೋಗ್ಯವಸ್ತುಗಳೇನೇಸಿವೆಯೋ ಅವೆಲ್ಲವೂ ಮನುಷ್ಯರ ಉಪಭೋಗಕ್ಕಾಗಿಯೇ. ಇಂತಹ ಭೋಗ್ಯವಸ್ತುಗಳ ಪ್ರಾಪ್ತಿಗೋಸ್ಕರವೇ ದುಃಖ (ದಾರಿದ್ರ್ಯ) ದ ಪರಮಾವಧಿಗೆ ಮುಟ್ಟಿರುವ ಜನರೆಲ್ಲರೂ ಇಂತು ಮೇಲೆ ವಿವರಿಸಿದ ಭೋಗ್ಯವಸ್ತುಗಳ ಸಂಪ್ರಾಪ್ತಿಗೋಸ್ಕರವೇ ಜಪತಪಗಳನ್ನು ನಿಯಮದಿಂದ ಮಾಡುತ್ತಾರೆ.

೮. ಭೋಗೈಶ್ವರ್ಯ ಪ್ರಾಪ್ತಿಗೋಸ್ಕರವೇ ಬೆಟ್ಟಗಳನ್ನು (ತಿರುಪತಿ ಬೆಟ್ಟ-ಬಿಳಿಗಿರಿರಂಗನ ಬೆಟ್ಟ-ದೇವರಾಯನ ದುರ್ಗ-ನಂದೀ ದುರ್ಗ ಇತ್ಯಾದಿ) ಹತ್ತಿಹೋಗಿ ದೇವರ ಸೇವೆ ಮಾಡುತ್ತಾರೆ. ಮತ್ತು ಶೂರರು ವೀರಸ್ವರ್ಗ ಭೋಗಪ್ರಾಪ್ತಿಗಾಗಿ ಸಮರಾಂಗಣದಲ್ಲಿ ನಿಂತು ಯುದ್ಧಮಾಡಿ ಪ್ರಾಣಗಳನ್ನು ಬಿಡುತ್ತಾರೆ. ಏಕೆಂದರೆ ಹಣವೆಂಬುವುದು ಪ್ರಾಣಗಳಿಗಿಂತ ದೊಡ್ಡದೆನಿಸಿಕೊಂಡಿದೆ.

೯. ಸ್ವರ್ಗಭೋಗವನ್ನು ಹೊಂದಲಪೇಕ್ಷಿಸುವ ಜನರು ಬಾಹ್ಮಣರಿಗೆ ಬಹಳ ದಾನಧರ್ಮಗಳನ್ನು ಮಾಡುತ್ತಾರೆ. ಆದ್ದರಿಂದ ಸ್ವರ್ಗ ಪ್ರಾಪ್ತಿಗೂ ನಹ ಹಣವೇ ಮುಖ್ಯಕಾರಣವೆಂದು ತಿಳಿದುಕೊಳ್ಳಯ್ಯಾ! ಪರಶುರಾಮ!

೧೦. ವಿಷಯಾಭಿಲಾಷಿಗಳಾದ ಜನರು ಸುಂದರಾಂಗಿಯರ ಚಂಚಲವಾದ ಕಡೆಗಣ್ಣೋಟದ ಥಳುಕಿಗೆ ಮನಸೋತು ಅವರ ವಾಸಸ್ಥಳದಲ್ಲೇ ಸರ್ವದಾ ವಾಸ ಮಾಡಲಪೇಕ್ಷಿಸುತ್ತಾರೆ. ಅವರ ವಾಸಸ್ಥಾನವೇ ಯುವಕರಿಗೆ ಸ್ವರ್ಗವಾಸ.

**ಅಧಃ ಕೃತ್ವೇಂದು ಬಿಂಬಾಗ್ರವದನಾಭಿಃ ಪುರಂಧ್ರಿಭಿಃ ।**
**ತಸ್ಯೈಕಂ ಸಫಲಂ ಜನ್ಮ ಸಂಪದಶ್ಚ ಮನೋರಥಾಃ ॥ ೧೧ ॥**

**ಯಸ್ಯೈತಾಶ್ಚಂಚಲಾಪಾಂಗ್ಯಸ್ತರುಣ್ಯೋ ವಶಮಾಗತಾಃ ।**
**ಸೇವ್ಯಾಸ್ತಾ ನಾತಿಸೇವ್ಯಾಶ್ಚ ಭೂಭುಜಾ ವಿಜಿಗೀಷುಣಾ ॥ ೧೨ ॥**

**ಅಸೇವನಾದ್ವೃಥಾ ಜನ್ಮ ದೋಷಗ್ರಾಮೋಽತಿಸೇವನಾತ್ ।**
**ಊರುಸ್ತಂಭತ್ರಯಂ ಪ್ರೋಕ್ತಂ ಶರೀರೇಷು ಶರೀರಿಣಾಂ ॥ ೧೩ ॥**

**ಆಹಾರಂ ಮೈಥುನಂ ನಿದ್ರಾ ಯೈರ್ವೃತಂ ಸಕಲಂ ಜಗತ್ ।**
**ಅಸೇವನಾದಥೈತಸ್ಯ ತಥೈವಾತ್ಯಂತಸೇವನಾತ್ ॥ ೧೪ ॥**

---

೧೧. ಚಂದ್ರಬಿಂಬದಂತೆ ಮುಖವುಳ್ಳ ಸ್ತ್ರೀಯರೊಡನೆ ತಾವೂ ಸಹ ಮಲಗಿಕೊಂಡು ಯಾವ ಮನುಷ್ಯರು ಭೋಗಪಡುವರೋ, ಅಂತಹ ಮನುಷ್ಯರು ಹುಟ್ಟಿದ್ದಕ್ಕೆ ಸಾರ್ಥಕವಾದಂತೆಯೇ ಸರಿ. ಅವರ ಸಂಪತ್ತು ಆಗ ಸಾರ್ಥಕವಾಗುವುದು. ಅವರ ಕೋರಿಕೆಗಳೂ ಸಹ ಸಾರ್ಥಕವಯ್ಯಾ! ಪರಶುರಾಮ!

೧೨. ಜಯಾಭಿಲಾಷಿಯಾದ ಮಹಾರಾಜನಾದವನಿಗೆ ಚಪಲಾಕ್ಷಿಯರಾದ ಸುಂದರಿಯರು ಸ್ವಾಧೀನರಾದ ಬಳಿಕ ಅವರೊಡನೆ ಮಿತವಾಗಿ ವಿಹರಿಸಬೇಕೇ ಹೊರತು ಮಿತಿಮೀರಿ ಸಂಭೋಗಮಾಡಬಾರದು.

೧೩. ತರುಣಿಯರೊಡನೆ ಭೋಗಪಡದೆ ಹೋಗುವವನ ಜನ್ಮವು ವ್ಯರ್ಥವಾದಂತೆಯೇ ಸರಿ. ಹೀಗೆ ಸಿಕ್ಕಿದರೆಂದು ತಿಳಿದು ಆ ನಾರಿಯರೊಡನೆ ವ್ಯವಸ್ಥೆಯಿಲ್ಲದೆ ಕಾಲದೇಶವಿಲ್ಲದೆ ವಿಪರೀತ ಭೋಗಪಡುವುದಕ್ಕಾರಂಭಿಸಿದವನು ರೋಗಕ್ಕೆ ಗುರಿಯಾಗುತ್ತಾನೆ.

೧೪. ಶರೀರವನ್ನು ಹೊಂದಿದ ಜೀವರುಗಳ ದೇಹವು ಮೂರು ಮುಖ್ಯವಾದ ದೃಢಸ್ತಂಭಗಳ ಮೇಲೆ ನಿಂತಿರುವುದು. ಆ ಸ್ತಂಭಗಳಾವುವೆಂದರೆ,— ಆಹಾರ, ಮೈಥುನ, ನಿದ್ರಾ, ಈ ಮೂರರಿಂದಲೇ ಸಕಲ ಪ್ರಪಂಚವೂ ಆವೃತವಾಗಿರುವುದು. ಈ ಮೂರನ್ನೂ ಸೇವನೆ ಮಾಡದೆಹೋದರೆ ಜೀವಿಸುವುದೇ ಕಷ್ಟವಾಗುವುದು. ವಿಪರೀತವಾಗಿ ಸೇವಿಸಿಬಿಟ್ಟರೆ ಕಂಭವು ಸಡಿಲವಾದಂತಾಗಿ ಮನುಷ್ಯರ ದೇಹವು ಭಯಂಕರವಾದ ರೋಗಕ್ಕೆ ಗುರಿಯಾಗುವುದು.

ರೋಗಗ್ರಾಮೋ ನೃಣಾಂ ದೇಹೇ ಸಂಭವತ್ಯತಿದಾರುಣಃ ।
ವಿಶ್ವಾಸಮತಿಸಕ್ತಿಂ ಚ ತೀಕ್ಷ್ಣತಾಂ ಸ್ತ್ರೀಷು ವರ್ಜಯೇತ್ ॥ ೧೫ ॥

ನ ಚಾಧಿಕಾರೇ ಕರ್ತವ್ಯಾ ಭೂಷಣಾಚ್ಛಾದನಾಶನೈಃ ।
ಸುವಿಭಕ್ತಾಶ್ಚ ಕರ್ತವ್ಯಾ ಲಾಲನೀಯಾಸ್ತಥೈವ ಚ ॥ ೧೬ ॥

ಜ್ಞೇಯೌ ರಾಗಾಪರಾಗೌ ಚ ತಥಾ ತಾಸಾಂ ವಿಶೇಷತಃ ।
ನಾರೀ ರಾಗವತೇ ಲೋಕೇ ನಾನ್ಯತೇನ ವಿಶಿಷ್ಯತೇ ॥ ೧೭ ॥

ವಿರಕ್ತಾಭಿರ್ಮಹೀಪಾಲ ಛದ್ಮನಾ ಬಹವೋ ಹತಾಃ ।
ದ್ವಿಷ್ಟಾನ್ಯಾಚರತೇ ಯಾತು ನಾಭಿನಂದತಿ ತತ್ಕಥಾಂ ॥ ೧೮ ॥

ಐಕ್ಯಂ ದ್ವಿಷದ್ಭಿರ್ವ್ರಜತಿ ಗರ್ವಂ ವಹತಿ ಚೋದ್ಧತಾ ।
ಚುಂಬಿತಾ ಮಾರ್ಷ್ಟಿ ವದನಂ ದತ್ತಂ ನ ಬಹುಮನ್ಯತೇ ॥ ೧೯ ॥

---

೧೫. ಹೆಂಗಸರ ವಿಷಯದಲ್ಲಿ ವಿಶ್ವಾಸವನ್ನೂ ಅತ್ಯಾಸಕ್ತಿಯನ್ನೂ ಅತ್ಯಂತ ಕಾಠಿನ್ಯವನ್ನೂ ತೋರಿಸಬಾರದು. ಹೆಂಗಸರು ತಮ್ಮ ತಮ್ಮ ಒಡವೆವಸ್ತ್ರಗಳನ್ನೂ ತಮ್ಮ ಅನ್ನವನ್ನೂ, ಸಂಪಾದಿಸಿಕೊಳ್ಳಲು ಅಧಿಕಾರಿಗಳಲ್ಲ. ಗಂಡನಾದವನು ಹೆಂಡತಿಗಾಗಿ ವಸ್ತ್ರಾಭರಣಗಳನ್ನು ಸಂಪಾದಿಸಿ ಅದನ್ನು ಅವಳಿಗೆ ಕೊಡಬೇಕು. ಹಾಗೂ ಅವಳ ಪೋಷಣೆಯ ಕಾರ್ಯವನ್ನು ಚೆನ್ನಾಗಿ ನೋಡಿಕೊಳ್ಳಬೇಕು.

೧೬-೧೭. ಹೆಂಗಸಾದವಳಿಗೆ ತನ್ನಲ್ಲಿ ಅನುರಾಗವುಂಟೋ ಅಥವಾ ತನ್ನ ವಿಷಯದಲ್ಲಿ ವಿರಕ್ತಳಾಗಿರುವಳೋ ಎಂಬುದನ್ನು ತಿಳಿದುಕೊಳ್ಳಬೇಕು. ಯಾವ ಹೆಂಗಸೇ ಆದರೂ ತನಗೆ ಇಷ್ಟನಾದ ಮೆಚ್ಚಿಗೆಯ ಪುರುಷನಲ್ಲಿ ನಿರ್ವಂಚನೆಯಿಂದ ನಡೆದುಕೊಳ್ಳುವಳು.

೧೮. ಅನುರಾಗವಿಲ್ಲದವನ ವಿಷಯದಲ್ಲಿ ಹೆಂಗಸರು ಬಹಳ ಕಪಟವನ್ನಾಚರಿಸುತ್ತಾರೆ. ಈ ವಿಧವಾದ ಹೆಂಗಸರ ಮೋಸವನ್ನರಿಯದೆ ಇವರ ವಂಚನೆಯಿಂದ ಅನೇಕ ಮಂದಿ ಹಾಳಾಗಿಹೋಗಿರುತ್ತಾರೆ.

೧೯. ಯಾವ ಹೆಂಗಸು ಯಾವ ಮನುಷ್ಯನನ್ನು ದ್ವೇಷಿಸುತ್ತಾಳೋ ಅವನ ವಿಚಾರವಾದ ಮಾತುಕಥೆಗಳನ್ನು ಕೇಳಲು ಅಸಮಾಧಾನಪಡುತ್ತಾಳೆ. ಈ ರೀತಿ ದ್ವೇಷಕ್ಕೆ ಪಾತ್ರನಾದ ಗಂಡನ ವಿಷಯದಲ್ಲಿ ಅವನೊಡನೆ ಬೆರೆಯಲು ಇಚ್ಛೆಪಡುವುದಿಲ್ಲ. ಕೇವಲ ಔದ್ಧತ್ಯದಿಂದ ಗರ್ವಪಡುತ್ತಾಳೆ.

ಸ್ವಪಿತ್ಯಾದೌ ಪ್ರಸುಪ್ತಾಪಿ ತಥಾ ಪಶ್ಚಾದ್ವಿಬುಧ್ಯತಿ ।
ಸ್ಪೃಷ್ಟ್ವಾ ಧುನೋತಿ ಗಾತ್ರಾಣಿ ಕಾಂತಂ ಚೈವ ರುಣದ್ಧಿ ಯಾ ॥ ೨೦ ॥

ಈಷತ್ಸ್ಮಿತೇನ ವಾಕ್ಯಾನಿ ಪ್ರಿಯಾಣ್ಯಪಿ ಪರಾಙ್ಮುಖೀ ।
ನಯುತ್ಯಶ್ರುತವದ್ಯಾ ತು ಜಘನಂ ಚ ವಿಗೂಹತಿ ॥ ೨೧ ॥

ದೃಷ್ಟೇ ವಿವರ್ಣವದನಾ ಮಿತ್ರೇಷ್ವಪಿ ಪರಾಙ್ಮುಖೀ ।
ತತ್ಕಾಮಿತಾಸು ಚ ಸ್ತ್ರೀಷು ಮಧ್ಯಸ್ಥೈವ ಚ ಲಕ್ಷ್ಯತೇ ॥ ೨೨ ॥

---

೨೦. ಗಂಡನಿಗಿಂತ ಮೊದಲೇ ತಾನು ಮಲಗಿಕೊಂಡು ನಿದ್ದೆಮಾಡಿಬಿಟ್ಟು ಅವನು ಬಂದು ತನ್ನ ಜತೆಯಲ್ಲಿ ಮಲಗಿಕೊಂಡಾಗ ಬೇಗ ಎದ್ದುಬಿಡುತ್ತಾಳೆ. ತನ್ನ ಮೈಯನ್ನೇನಾದರೂ ಅವನು ಮುಟ್ಟುವುದಕ್ಕೆ ಬಂದರೆ ಮೈಕೊಡವಿಕೊಂಡು ದೂರ ಸರಿಯುತ್ತಾಳೆ ಮತ್ತು ಅವನ ಮೇಲೆ ರೇಗಿ ರೇಗಿ ಬೀಳುತ್ತಾಳೆ.

೨೧. ಅವನು ಸ್ವಲ್ಪ ಹುಸಿನಗುವಿನಿಂದ ಕೂಡಿ ತನ್ನ ಬಳಿಗೆ ಬಂದುದನ್ನು ನೋಡಿದೊಡನೆಯೇ ಮತ್ತು ಉಪಾಯವಾದ ಹಿತವಾದ ಮಾತುಗಳನ್ನಾಡಲು ಆರಂಭ ಮಾಡಿದೊಡನೆಯೇ ಮುಖವನ್ನು ಹಿಂತಿರುಗಿಸಿಕೊಳ್ಳುತ್ತಾಳೆ. ಮತ್ತು ಅವನಾಡಿದ ಮಾತು ತನಗೆ ಕೇಳಿಸಿದಾಗ್ಯೂ ಕೇಳದೆ ಇದ್ದವಳಂತೆ ನಟಿಸುತ್ತಾಳೆ. ಮತ್ತು ಸೀರೆಯ ನೆರಿಯನ್ನು ಸರಿಮಾಡಿಕೊಂಡು ಜಘನ ಸ್ಥಳವನ್ನು ಬಲವಾಗಿ ಮುಚ್ಚಿಕೊಳ್ಳುತ್ತಾಳೆ.

೨೨. ತನ್ನ ಗಂಡನ ಸ್ನೇಹಿತರ ವಿಷಯದಲ್ಲೂ (ಇವರಿವರಿಗೆ ಅನ್ಯೋನ್ಯ ಪ್ರೀತಿಯುಂಟಾಗುವಂತೆ ಮಾಡಬೇಕೆಂದು ಬಂದವರ ವಿಷಯದಲ್ಲಿ) ಮುಖವನ್ನು ಕಪ್ಪಗೆ ಮಾಡಿಕೊಂಡು ಹಿಂದಕ್ಕೆ ಹೊರಟುಹೋಗುತ್ತಾಳೆ. ಒಂದು ವೇಳೆ ತನ್ನ ಗಂಡನು ಬೇರೆ ಸ್ತ್ರೀಯರನ್ನು ಕಾಮಿಸುತ್ತಿದ್ದ ಸಂದರ್ಭದಲ್ಲಿ ಅವರ ವಿಷಯದಲ್ಲಿ ಮಧ್ಯಸ್ಥಳಂತೆ ಕಾಣಿಸಿಕೊಳ್ಳುತ್ತಾಳೆ.

ಜ್ಞಾತವಮಂಗಲಕಾಲ್ಯಾಽಪಿ ನ ಕರೋತಿ ಚ ಮಂಡನಂ ।
ಯಾ ಸಾ ವಿರಕ್ತಾ ರಕ್ತಾ ಚ ನಿಬೋಧ ಗದತೋ ಮಮ ॥ ೨೩ ॥

ದೃಷ್ಟ್ವೈವಹೃಷ್ಟಾ ಭವತಿ ವೀಕ್ಷತೇ ಚ ಪರಾಙ್ಮುಖಂ ।
ದೃಶ್ಯಮಾನಾ ತಥಾಽನ್ಯತ್ರ ದೃಷ್ಟಿಂ ಕ್ಷಿಪತಿ ಚಂಚಲಾಂ ॥ ೨೪ ॥

ತಥಾಽಸ್ಯಪಾವರ್ತಯತಿ ನೈವ ಶಕ್ನೋತ್ಯಶೇಷತಃ ।
ವಿವೃಣೋತಿ ತಥಾಂಗಾನಿ ಸುಗುಹ್ಯಾನ್ಯಪಿ ಭಾರ್ಗವ ॥ ೨೫ ॥

ಗರ್ಹಿತಂ ಚ ತಥೈವಾಂಗಂ ಪ್ರಯತ್ನೇನ ವಿಗೂಹತೇ ।
ತದ್ದರ್ಶನೇನ ಕುರುತೇ ಬಾಲಾಲಿಂಗನಚುಂಬನಂ ॥ ೨೬ ॥

---

೨೩. ಮನೆಯಲ್ಲಿ ಶುಭಶೋಭನಾದಿ ಮಂಗಳಕಾರ್ಯಗಳು ನಡೆಯುತ್ತಿರುವ ಸಂದರ್ಭದಲ್ಲಿಯೂ ಸಹ ಉತ್ಸಾಹದಿಂದ ಅಲಂಕಾರಾದಿಗಳನ್ನು ಮಾಡಿಕೊಳ್ಳದೆ ಉದಾಸೀನದಿಂದಿರುತ್ತಾಳೆ. ಇದುವರೆಗೆ ಹೇಳಿದ ಸಂಗತಿಗಳೆಲ್ಲವೂ ಪುರುಷರ ವಿಷಯದಲ್ಲಿ ಅನುರಾಗವಿಲ್ಲದೆ ವಿರಕ್ತರಾದ ಹೆಂಗಸರ ಮಾತಾಯಿತು. ಇನ್ನು ಮುಂದೆ ಪುರುಷರ ವಿಷಯದಲ್ಲಿ ಅನುರಕ್ತರಾದ ಹೆಂಗಸರ ಲಕ್ಷಣವನ್ನು ಹೇಳುತ್ತೇನೆ, ಕೇಳು.

೨೪. ಗಂಡನು ತನ್ನ ಮುಖವನ್ನು ನೋಡಿದೊಡನೆಯೇ ನಾಚಿಕೆಯಿಂದ, ಹುಸಿನಗು ನಗುತ್ತಾಳೆ. ಮತ್ತು ಸಂತೋಷಪಡುತ್ತಾಳೆ. ನಾಚಿಕೆಯಿಂದ ನೆಲವನ್ನು ನೋಡುತ್ತಾ ನಿಲ್ಲುತ್ತಾಳೆ. ತನ್ನ ಗಂಡನು ತನ್ನ ಮುಖವನ್ನೇ ದೃಷ್ಟಿಸಿ ನೋಡುತ್ತಿದ್ದರೆ, ತನ್ನ ದೃಷ್ಟಿಯನ್ನು ಚಂಚಲಗತಿಯಿಂದ ಬೇರೆಕಡೆಗೆ ತಿರುಗಿಸುನೋಡುತ್ತಾಳೆ.

೨೫. ಹಾಗೂ ಮತ್ತೊಮ್ಮೆ ಗಂಡನ ಕಡೆ ದೃಷ್ಟಿಯನ್ನು ಬೀರುತ್ತಾಳೆ. ಆದರೆ ಅವನನ್ನೇ ಬಿಟ್ಟಕಣ್ಣಿನಿಂದ ನೋಡಲು ಸಾಹಸಮಾಡುವುದಿಲ್ಲ. ತನ್ನ ಅವಯವ ವಿಶೇಷಗಳನ್ನೂ, ಗುಹ್ಯಪ್ರದೇಶವನ್ನೂ ಅವನು ಚೆನ್ನಾಗಿ ನೋಡುವಂತೆ ವಿವರವಾಗಿ ತೋರಿಸಲು ಪ್ರಯತ್ನಪಡುತ್ತಾಳೆ.

೨೬. ಹೀಗೆ ಮಾಡುತ್ತಿದ್ದಾಗಲೇ ಗರ್ಹಿತವಾದ ಅಂಗಗಳನ್ನು ಪ್ರಯತ್ನಪಟ್ಟು ಮುಚ್ಚಿಕೊಳ್ಳುತ್ತಾಳೆ. ತನ್ನ ಗಂಡನು ತನ್ನನ್ನು ನೋಡುತ್ತಿದ್ದ ಸಮಯದಲ್ಲಿ ಮಗುವನ್ನೆತ್ತಿಕೊಂಡು ಅದನ್ನು ಬಲವಾಗಿ ತಬ್ಬಿಕೊಳ್ಳುತ್ತಾ ವಿಧವಿಧವಾಗಿ ಮುತ್ತು ಕೊಡುತ್ತಾ ಗೂಢಭಾವದಿಂದ ಆ ಮಗುವನ್ನು ನಾನಾ ವಿಧವಾಗಿ ಆಡಿಸುತ್ತಾಳೆ.

ಅಭಾಷ್ಯಮಾಣಾ ಭವತಿ ಸನ್ನವಾಕ್ಯಾ ತಥೈವ ಚ ।
ಸ್ಪೃಷ್ಟ್ವಾ ಪುಲಕಿತೈರಂಗೈಃ ಸಖೇದೈರ್ವಾಽಪಿ ಭಜ್ಯತೇ ॥ ೨೭ ॥

ಕರೋತಿ ಚ ತಥಾ ರಾಮು ಸುಲಭದ್ರವ್ಯಯಾಚನಂ ।
ತತಃ ಸ್ವಲ್ಪಮಪಿ ಪ್ರಾಪ್ಯ ಪ್ರಯಾತಿ ಪರಮಾಂ ಮುದಂ ॥ ೨೮ ॥

ನಾಮ ಸಂಕೀರ್ತನಾದೇವ ಮುದಿತಾ ಬಹು ಮನ್ಯತೇ ।
ಕರಜಾಂಕಾಂಕಿತಾನ್ಯಸ್ಯ ಫಲಾನಿ ಪ್ರೇಷಯತ್ಯಪಿ ॥ ೨೯ ॥

ತತ್ಪ್ರೇಷಿತಾನಿ ಹೃದಯೇ ವಿನ್ಯಸ್ಯತ್ಯಪಿ ಚಾದರಾತ್ ।
ಆಲಿಂಗನೈಶ್ಚ ಗಾತ್ರಾಣಿ ಲಿಂಪಂತೀವಾಮೃತೇನ ಚ ॥ ೩೦ ॥

---

೨೭. ತನ್ನ ಗಂಡನೊಡನೆ ಒಳ್ಳೆಯ ಮಾತನಾಡುತ್ತಾ ನಿಂತುಕೊಳ್ಳುತ್ತಾಳೆ. ಅವನೇನಾದರೂ ಸ್ವಲ್ಪ ಹತ್ತಿರ ಬಂದು ಮೈ ಸೋಕಿಸಿಕೊಂಡರೆ ಪುಲಕಾಂಕಿತಗಾತ್ರಳಾಗಿ ಬೆಚ್ಚಿಬಿದ್ದು ದೂರ ಸರಿದು ನಿಲ್ಲುತ್ತಾಳೆ.

೨೮. ಮತ್ತು ಗಂಡನನ್ನು ತನಗೆ ಸ್ವಲ್ಪ ದುಡ್ಡುಬೇಕೆಂದು ಕೇಳುತ್ತಾಳೆ. ಅವನೇನಾದರೂ ಸ್ವಲ್ಪವಾದ ದ್ರವ್ಯವನ್ನು ಕೊಟ್ಟಾಗ್ಯೂ ಅದರಿಂದ ಬಹಳ ಸಂತೋಷ ಪಡುತ್ತಾಳೆ.

೨೯. ತನ್ನ ಗಂಡನ ಹೆಸರನ್ನು ಇನ್ನಾರಾದರೂ ಹೇಳಿ ಅವನ ವಿಷಯವಾಗಿ ಮಾತನಾಡುತ್ತಿದ್ದರೆ ಬಹಳ ಸಂತೋಷಪಡುತ್ತಾಳೆ. ತನ್ನ ಗಂಡನು ತನಗೇನಾದರೂ ಕಾಗದ ಬರೆದರೆ ಅಥವಾ ಹಣ್ಣು ಹೂವುಗಳನ್ನು ಕಳಿಸಿದರೆ ಬಹು ಸಂತೋಷ ಪಡುತ್ತಾಳೆ.

೩೦. ಈ ರೀತಿ ಅವನು ಹೊರಗಿನಿಂದ ಕಳುಹಿಸಿದ ಪದಾರ್ಥಗಳು ತನಗೆ ತಲಪಿದೊಡನೆಯೇ ಅದನ್ನು ಎದೆಯಲ್ಲಿಟ್ಟು ಬಚ್ಚಿಟ್ಟುಕೊಳ್ಳುತ್ತಾಳೆ. ಮತ್ತೊಮ್ಮೆ ಈಚೆಗೆ ತೆಗೆಯುತ್ತಾಳೆ. ಆದರದಿಂದ ಅದನ್ನು ಆಲಂಗಿಸಿಕೊಳ್ಳುತ್ತಾಳೆ. ಅಮೃತವೇ ತನಗೆ ಸಿಕ್ಕಿದಂತೆ ಭಾವಿಸಿ ವಿವಿಧವಾಗಿ ಅದನ್ನು ಮುದ್ದಾಡುತ್ತಾಳೆ.

**ಸುಪ್ತೇ ಸ್ವಪಿತ್ಯಥಾದೌ ತು ತಥಾ ತಸ್ಯ ವಿಬುಧ್ಯತೇ ।**
**ಊರೂ ಸ್ಪೃಶತಿ ಚಾತ್ಯರ್ಥಂ ಸುಪ್ತಂ ಚೈನಂ ವಿಚುಂಬತೇ ॥ ೩೧ ॥**

**ಏವಂ ರಕ್ತಾಂ ತು ವಿಜ್ಞಾಯ ಕಾಮಯೇತಾತ್ಮವಾನ್ನರಃ ।**
**ಕಾಮಂ ಚ ಭೋಜನಂ ಸಖ್ಯಂ ಜ್ಞೇಯಾಃ ಕೃತ್ರಿಮಪುತ್ರಿಕಾಃ ॥ ೩೨ ॥**

**ಸ್ವೀಕರ್ತುಮಿಚ್ಛನ್ಬಾಲಾಯಾಃ ಕ್ರೀಡನಾದಿಸ್ತಥೈವಚ ।**
**ಗಂಧಮಾಲ್ಯಪ್ರದಾನೇನ ಯೌವನಸ್ಥಾಂ ವಶಂ ನಯೇತ್ ॥ ೩೩ ॥**

**ವಸ್ತ್ರಭೂಷಣದಾನೇನ ತಥಾ ಯೌವನವಿಚ್ಯುತಾಂ ।**
**ಕ್ರೀಡಾಸಾಧುಪ್ರಿಯಾ ಬಾಲಾ ತಥಾ ಯೌವನವಿಚ್ಯುತಾ ॥ ೩೪ ॥**

---

೩೧. ಗಂಡನು ಮಲಗಿದ್ದಾಗ ಅವನ ಹತ್ತಿರಕ್ಕೆ ತಾನೂ ಹೋಗಿ ಮಲಗಿಕೊಳ್ಳುತ್ತಾಳೆ, ಅವನು ನಿದ್ದೆಮಾಡುತಲಿದ್ದರೆ ಅವನನ್ನೆಚ್ಚರಗೊಳಿಸಲು ಪ್ರಯತ್ನಪಡುತ್ತಾಳೆ. ಅವನ ತೊಡೆಗಳನ್ನು ಮುಟ್ಟಿ ಔಕುತ್ತಾಳೆ. ಮಲಗಿದ್ದಾಗಲೇ ಅವನಿಗೆ ಮುತ್ತುಕೊಡುತ್ತಾಳೆ.

೩೨. ಈ ರೀತಿ ಮೇಲೆ ಹೇಳಿದ ಚೇಷ್ಟೆಗಳನ್ನರಿತು ಪುರುಷನಾದವನು ತನ್ನನ್ನು ಅಕೃತ್ರಿಮ ರೀತಿಯಿಂದ ಪ್ರೀತಿಸುತ್ತಿರುವ ಇಂತಹ ಹೆಂಗಸನ್ನು ಕಾಮಿಸಿ ಅವಳೊಡನೆ ತೃಪ್ತಿಯಾಗುವಂತೆ ಸಂಭೋಗಮಾಡಬೇಕು. ಸ್ನೇಹ, ಕಾಮ, ಭೋಗಗಳನ್ನು ಅವರು ಬಯಸುತ್ತಿರುವರೆಂದು ತಿಳಿದು ಅದರಿಂದ ಅವರನ್ನು ತೃಪ್ತಿಪಡಿಸಬೇಕು.

೩೩. ಇನ್ನೂ ಆಗತಾನೆ ಮೈನೆರದು ಅನುಭವವಿಲ್ಲದ ಹುಡುಗಿಯೊಡನೆ ಭೋಗಮಾಡಬೇಕಾದರೆ, ಅವಳನ್ನು ಮುದ್ದಿಸಿ ಆಟವಾಡಿಸುವಂತೆ ತೋರಿಸಿ ಅವಳೊಡನೆ ಕ್ರೀಡಿಸಬೇಕು. ಚೆನ್ನಾಗಿ ಪ್ರಾಯಕ್ಕೆ ಬಂದ ಹೆಂಗಸನ್ನು ಸ್ವಾಧೀನಮಾಡಿಕೊಳ್ಳಬೇಕಾದರೆ ಗಂಧ, ಹೂವು ಮುಂತಾದ ಕಾಮೋತ್ತೇಜಕ ದ್ರವ್ಯಗಳಿಂದ ಅವಳ ಅನುರಾಗವನ್ನು ಹೆಚ್ಚಿಸಿಕೊಳ್ಳಬೇಕು.

೩೪. ಪ್ರಾಯ ಕಳೆದು ವಯಸ್ಸಾಗಿದ್ದಾಗ್ಯೂ ಭೋಗವನ್ನಪೇಕ್ಷಿಸುವ ಹೆಂಗಸರನ್ನು ಒಳ್ಳೇ ಸೀರೆ, ಒಳ್ಳೇ ಒಡವೆಗಳಿಂದ ಸ್ವಾಧೀನಮಾಡಿಕೊಂಡು ಅವರೊಡನೆ

**ರತಿಪ್ರಿಯಾ ತು ವಿಜ್ಞೇಯಾ ತರುಣೀ ಚೋಭಯಪ್ರಿಯಾ ।**
**ಆತ್ಮಸಂಭಾವನಾ ಸ್ತ್ರೀಷು ನ ಕರ್ತವ್ಯಾ ಕಥಂಚನ ॥ ೩೫ ॥**

**ಅಸೂಯಾ ಜಾಯತೇತ್ಯರ್ಥಮಾತ್ಮಸಂಭಾವಿತೇ ನರೇ ।**
**ನಚಾಸಾಂ ದರ್ಶನಂ ದೇಯಂ ನ ಚಾತ್ಯಂತಮದರ್ಶನಂ ॥ ೩೬ ॥**

---

ವಿಹರಿಸಬೇಕು. ಎಳೇ ಪ್ರಾಯದ ಹುಡುಗಿ (ಬಾಲೆ) ಯರು ಸ್ವಲ್ಪ ಸ್ವಲ್ಪ ರತಿಕ್ರೀಡೆಯಿಂದಲೇ ತೃಪ್ತಿಹೊಂದುವರು. ಹೀಗೆ ಸ್ವಲ್ಪ ಸ್ವಲ್ಪವಾದ ಕಾಮಕೇಳಿಯಿಂದಲೇ ಇವರು ಸಾಧುವಾಗುವರು. ಇದೇ ರೀತಿ ಯೌವನವನ್ನತಿಕ್ರಮಿಸಿದ ಪ್ರೌಢಾಂಗನೆಯರೂ ಸಹ ಸ್ವಲ್ಪ ಸಂಭೋಗದಲ್ಲೇ ತೃಪ್ತಿಹೊಂದುವರು.

೩೫. ತರುಣಿಯಾದವಳಿಗೆ ಯಾವಾಗಲೂ ಮೈಥುನಾಭಿಲಾಷೆ ಇದ್ದೇ ಇರುತ್ತದೆ. ಇವಳು ಉಭಯಸಂದರ್ಭಗಳಲ್ಲಿಯೂ ಪ್ರಿಯಳಾದವಳು. ಗಂಡಸಾದವನು ಹೆಂಗಸರ ವಿಷಯದಲ್ಲಿ ಯಾವಾಗಲೂ ಆತ್ಮಸಂಭಾವನೆಮಾಡಿಕೊಳ್ಳಬಾರದು. (ಅಂದರೆ ರತಿಕೇಳಿಯಲ್ಲಿ ಹೆಂಗಸರನ್ನು ಜಯಿಸುವೆನೆಂದು ಗರ್ವದಿಂದ ಹೇಳಕೂಡದೆಂದು ಇಲ್ಲಿ ಭಾವಾರ್ಥ.) ಹೆಂಗಸರಿಗೆ ಗಂಡಸರಿಗಿಂತ ಕಾಮವು ಎಂಟು ಪಾಲು ಹೆಚ್ಚಾದುದರಿಂದ ಅವರನ್ನು ಕಾಮಕ್ರೀಡೆಯಲ್ಲಿ ಸೋಲಿಸುವುದು ಸುಲಭವಾದ ಕೆಲಸವಲ್ಲ.

ಟಿಪ್ಪಣಿ: ಇಲ್ಲಿ ಬಾಲಾ, ಯೌವನಸ್ಥಾ (ಯುವತಿ), ಯೌವನವಿಚ್ಯುತಾ ಎಂದು ಮೂರುವಿಧದ ಹೆಂಗಸರನ್ನುದಾಹರಿಸಿದಾರೆ. ಇವರುಗಳ ವಯಸ್ಸನ್ನು ಇಲ್ಲಿ ತಿಳಿಸುವುದು ಅವಶ್ಯಕವಾಗಿದೆ. ಅಮರದಲ್ಲಿ ಬಾಲೆಯೆಂದರೆ ಗೌರೀ-ನಗ್ನಿಕಾ ಅನಾಗತಾರ್ತವಾ ಎಂಬುದಾಗಿ ಮೈನೆರೆಯದೆ ಇದ್ದ ಹುಡುಗಿಯರನ್ನು ಹೇಳುತ್ತಾರೆ, ತರುಣೀ ಯುವತೀ (ಯೌವನಸ್ಥಾ), ಇವರುಗಳು ಮೂವತ್ತು ವಯಸ್ಸಿನೊಳಗೆ ಇರತಕ್ಕವರು. ಯೌವನವಿಚ್ಯುತೆಯೆಂದರೆ ಮೂವತ್ತರಮೇಲೆ ಋಷಿಪಂಚಮಿಗೆ ಅರ್ಹವಾದ ವಯಸ್ಸು ಬರುವವರಿಗಿನ ಹೆಂಗಸರೆಂದು ಅರ್ಥ.

೩೬. ಮೇಲೆ ವಿವರಿಸಿದಂತೆ ಆತ್ಮಸಂಭಾವಿತನಾದ ನರನಿಗೆ ಹೆಂಗಸರ ವಿಷಯದಲ್ಲಿ ಅಸೂಯೆ ಹುಟ್ಟುವುದಾದ್ದರಿಂದ ಆತ್ಮಸಂಭಾವನೆಕೂಡದು. ಮತ್ತು ಹೆಂಗಸರಿಗೆ ಯಾವಾಗಲೂ ಮುಖ ತೋರಿಸದೆ ಇರಕೂಡದು. ಅಥವಾ ಮೂರುಹೊತ್ತೂ ಅವರ ಮುಂದೆಯೇ ಕುಳಿತಿರಲೂ ಬಾರದು.

**ಉಭಯೇನಾಪ್ಯಥೈತಾಸಾಮುತ್ಕಂಠಾ ತು ವಿಹನ್ಯತೇ ।
ಹೃದ್ಯೈಃ ಸುವಿಹಿತೈರ್ಭಾಗ್ಯೈರ್ಗಂಧಯುಕ್ತೈಶ್ಚ ಕೌಶಲೈಃ ।
ಕಾರ್ಯಮಾರಾಧನಂ ಸ್ತ್ರೀಣಾಂ ರತಿಕಾಮ್ಯೈಃ ಸದೈವ ತು ॥ ೩೭ ॥**

**ಏವಂ ಸದಾ ಯಸ್ತು ಕರೋತಿ ರಾಮ
ಸ್ತ್ರೀಚೇತಸಾಂ ಸ್ವೀಕರಣಂ ಮನುಷ್ಯಃ ।
ತಸ್ಯಾನ್ತರಾಯಾ ನ ಭವಂತಿ ಕಿಂಚಿತ್
ಸ್ತ್ರೀದ್ವಾರಮಾಸಾದ್ಯ ಸದಾ ಸಪತ್ನಃ ॥ ೩೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಅಂತಃಪುರ ಚಿಂತಾನಾಮ ದ್ವಿಷಷ್ಟಿತಮೋಽಧ್ಯಾಯಃ**

೩೭. ಹೀಗೆ ಮೇಲಿನ ನಿಯಮದಂತೆ ಮಾಡದೆ ಇದ್ದರೆ ಅಂತಹ ಪುರುಷನ ವಿಷಯದಲ್ಲಿ ಹೆಂಗಸರಿಗೆ ಪ್ರೀತಿ ಕಡಿಮೆಯಾಗಿ ಹೋಗುವುದು. ಹೆಂಗಸರ ಜತೆಯಲ್ಲಿ ಭೋಗಿಸಲಪೇಕ್ಷೆಯುಳ್ಳವರು ಯಾವಾಗಲೂ ಒಳ್ಳೇ ಉತ್ತಮವಾದ ಮತ್ತು ಮನೋಹರವಾದ ಭೋಗ್ಯವಸ್ತುಗಳನ್ನೂ ಗಂಧಾದ್ಯನುಲೇಪನಸಾಮಗ್ರಿಗಳನ್ನೂ ತಂದುಕೊಡಬೇಕು. ಮತ್ತು ಕಾಮಿಸಿಯರೊಡನೆ ಚಾತುರ್ಯವಾದ ಮಾತುಗಳನ್ನಾಡುತ್ತಿರಬೇಕು. ಈ ರೀತಿಯಾಗಿ ಹೆಂಗಸರಿಗೆ ಬೇಕುಬೇಕಾದ ಭೋಗಸಾಮಗ್ರಿಗಳನ್ನೊದಗಿಸಿ ಅವರನ್ನಾರಾಧಿಸುತ್ತಿರಬೇಕು.

೩೮. ಎಲೈ ಪರಶುರಾಮನೇ, ಕೇಳು. ಈಗ ನಾನು ಇದುವರೆಗೆ ವಿವರಿಸಿದ ಕ್ರಮದಂತೆ ಆವ ಪುರುಷನಾದವನು ಹೆಂಗಸರ ಮನೋಭಾವವನ್ನರಿತು ಅವರನ್ನು ಸ್ವಾಧೀನಮಾಡಿಕೊಂಡು ಭೋಗಮಾಡುವನೋ, ಅವನಿಗೆ ಯಾವ ವಿಘ್ನಗಳೂ ಸಂಭವಿಸುವುದಿಲ್ಲ. ಹೆಂಗಸರ ಮೂಲಕ ಈ ರೀತಿ ಭೋಗಪಡುವ ಮನುಷ್ಯನಿಗೆ ಎಲ್ಲ ಸಿದ್ಧಿಗಳೂ ದೊರಕುವುವು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಎರಡನೇ ಖಂಡದಲ್ಲಿ ಪುಷ್ಕರೋಪಾಖ್ಯಾನಗಳ ಪೈಕಿ ಅಂತಃಪುರ ಚಿಂತೆಯೆಂಬ ಹೆಸರಿನ ಅರವತ್ತೆರಡನೇ ಅಧ್ಯಾಯ ಮುಗಿಯಿತು.

॥ ಶ್ರೀಃ ॥

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ತ್ರಿಷಷ್ಟಿತಮೋಽಧ್ಯಾಯಃ

ಪುಷ್ಕರ ಉವಾಚ

ಕಲ್ಪನಾ ಭೋಜನೀಯಾನಾಂ ಗಂಧಾನಾಂ ಯಾ ಚ ಕಲ್ಪನಾ ।
ತಾನಹಂ ಶ್ರೋತುಮಿಚ್ಛಾಮಿ ತ್ವತ್ತೋ ಧರ್ಮಭೃತಾಂ ವರ ॥ ೧ ॥

ಪುಷ್ಕರ ಉವಾಚ

ಭೋಜ್ಯಂ ಭಕ್ಷ್ಯಂ ತಥಾ ಲೇಹ್ಯಂ ಚೋಷ್ಯಂ ಪಾನಂ ತಥೈವ ಚ ।
ಕಲ್ಪನಾ ಪಂಚಧಾ ರಾಮ ಭೋಜ್ಯಸ್ಯೈಷಾ ಪ್ರಕೀರ್ತಿತಾ ॥ ೨ ॥

ಅಭ್ಯಾಸಗಮ್ಯಾ ಚಾಪ್ಯೇಷಾ ವಕ್ತವ್ಯಂ ತತ್ರ ಮೇ ಶೃಣು ।
ಕಟುತೋಯೋದಕಂ ಕ್ವಾಥಂ ಶೋಧಿತಾನಾಮಸಂಶಯಂ ॥ ೩ ॥

---

## ಅರವತ್ತಮೂರನೆಯ ಅಧ್ಯಾಯವು

೧. ಪರಶುರಾಮನು ಪ್ರಶ್ನೆ ಮಾಡುತ್ತಾನೆ:— ಎಲೈ ಪುಷ್ಕರನೇ, ಭೋಜನ ಪದಾರ್ಥಗಳು ಬಹು ರುಚಿಯಾಗಿರುವಂತೆ ಮಾಡಬೇಕಾದರೆ ಯಾವ ವಿಧಾನವನ್ನನು ಸರಿಸಬೇಕೆಂಬುದನ್ನು ನನಗೋಸ್ಕರ ದಯವಿಟ್ಟು ತಿಳಿಸಬೇಕು.

೨. ಪುಷ್ಕರನು ಅದಕ್ಕೆ ಉತ್ತರ ಹೇಳುತ್ತಾನೆ:— ಭೋಜನಪದಾರ್ಥಗಳು ಐದುವಿಧ. ಭೋಜ್ಯ-ಭಕ್ಷ್ಯ-ಲೇಹ್ಯ-ಚೋಷ್ಯ-ಪಾನೀಯವೆಂದು ಅವೈದಕ್ಕೂ ಹೆಸರುಂಟು.

೩. ಈ ಐದುವಿಧ ಭೋಜನಪದಾರ್ಥಗಳನ್ನೂ ಅಭ್ಯಾಸದಿಂದ ಕಲಿಯಬೇಕು. ಇದಕ್ಕೆ ಕನ್ನಡದಲ್ಲಿ ಅಡಿಗೆಮಾಡುವುದೆಂದರ್ಥ. ಅಡಿಗೆಯ ಕ್ರಮವನ್ನೀಗ ನಿನ್ನೊಡನೆ ವಿವರಿಸುತ್ತೇನೆ, ಕೇಳು. ಇದರಲ್ಲಿ ಸಾರು ಊಟಕ್ಕೆ ಮುಖ್ಯವಾದ್ದರಿಂದ ಅದರ ವಿಧಾನ ವನ್ನು ಮೊದಲು ಹೇಳುತ್ತೇನೆ, ಕೇಳು. ಕಲ್ಲು ಮಣ್ಣು ಮಾಡಿಸಿ ಆರಿಸಿದ ಒಳ್ಳೇ ಬೇಯುವ ಬೇಳೆಯನ್ನು ಕುದಿಯುವ ನೀರಿನಲ್ಲಿ ಬೇಯಿಸಿ, ಅದು ಬೆಂದಮೇಲೆ ಮೆಣಸಿನಪುಡಿಯನ್ನು ಹಾಕಬೇಕು.

**ಪುರಾಣಧಾನ್ಯಜಾತೀನಾಂ ಗಂಧಮಾಶು ವಿನಶ್ಯತಿ ।**
**ಶ್ರೇಷ್ಠಂ ಸಾರ್ಷಪಕಂ ತೈಲಂ ಶಾಕಾನಾಂ ಪರಿಶೋಧನೇ ॥ ೪ ॥**

**ಮಾಂಸಂ ಕಾಠಿನ್ಯಮಾಯಾತಿ ಕೌಮಲ್ಯಂ ಚಾರ್ದ್ರಕಾಂಬುನಾ ।**
**ವರುಣಕ್ಷಾರ ಸಂಯೋಗಾನ್ಮತ್ಸ್ಯಸ್ಯಾಸ್ಥಿ ವಿಲೀಯತೇ ॥ ೫ ॥**

---

೪. ಹಳೇ ಭತ್ತವನ್ನು ಕುಟ್ಟಿ ಅಕ್ಕಿಮಾಡಿ ಅನ್ನಮಾಡಿದರೆ ಅದು ಬಹು ಮೃದುವಾಗಿರುತ್ತದೆ. ಸಾರಿಗೆ ಮೆಣಸಿನಪುಡಿ ಹಾಕಿ ಚೆನ್ನಾಗಿ ಕುದಿದ ಬಳಿಕ ಹಳೇ ಕೊತ್ತಂಬರಿಯನ್ನು ಹುರಿದು ಅದರ ಪುಡಿಯನ್ನು ಹಾಕಬೇಕು. (ಇಲ್ಲಿ ಪುರಾಣಧಾನ್ಯ ಜಾತೀನಾಂ ಎಂದು ಬರೆದಿರುವುದರಿಂದ, ಅನ್ನಕ್ಕೆ ಹಳೇ ಅಕ್ಕಿಯನ್ನು ಉಪಯೋಗಿಸ ಬೇಕೆಂದೂ, ಸಾರಿಗೆ ಹಳೇ ಕೊತ್ತಂಬರಿಪುಡಿಯನ್ನು ಹಾಕಬೇಕೆಂದೂ ಅರ್ಥವಾಗು ತ್ತದೆ.) ಧಾನ್ಯವೆಂದರೆ ಹಳೇ ಭತ್ತವೆಂದೂ, ಧಾನ್ಯಕ (ಕೊತ್ತಂಬರಿ) ಎಂದೂ ಬರೆದಿರುವ ಎರಡು ಅರ್ಥಗಳನ್ನನುಸರಿಸಿ ಇಲ್ಲಿ ನಾನು ಅನ್ನಸಾರುಗಳನ್ನು ಮಾಡುವ ಕ್ರಮದಲ್ಲಿ ಉಪಯೋಗಿಸಿರುತ್ತೇನೆ. ಮತ್ತು ಸಾಸುವೆ ಎಣ್ಣೆಯನ್ನು (ಸಾಸುವೆ ಒಗ್ಗರಣೆಯನ್ನು) ಸಾರಿಗೆ ಹಾಕಬೇಕು. ಯಾವುದಾದರೂ ತರಕಾರಿಗಳನ್ನು ಬೇಯಿಸಿ ಅದಕ್ಕೂ ಸಾಸುವೆ ಒಗ್ಗರಣೆಯನ್ನು ಹಾಕಬೇಕು.

೫. ಕಠಿಣವಾದ ಮಾಂಸಕ್ಕೆ ಹಸೀ ಶುಂಠೀರಸವನ್ನು ಹಾಕಿ ಬೇಯಿಸಿದರೆ ಬಹು ಮೃದುವಾಗುತ್ತದೆ. ಸಮುದ್ರದ ಉಪ್ಪನ್ನು ಮೀನಿನ ಮಾಂಸಕ್ಕೆ ಸೇರಿಸಿ ಬೇಯಿಸಿದರೆ ಮೀನಿನ ಸಣ್ಣ ಮೂಳೆಯು ಕರಗಿಹೋಗುತ್ತದೆ.

ಟಿಪ್ಪಣಿ:— ಇದು ಯುಗಾಂತರದ ಮಾತೆಂದೂ, ಮಾಂಸಾಹಾರಿಗಳ ಮಾತೆಂದೂ ತಿಳಿಯಬೇಕು. ದಕ್ಷಿಣದೇಶದಲ್ಲಿ ಕೊಂಕಣಿಗಳು (ಮತ್ಸ್ಯ ಬ್ರಾಹ್ಮಣರು) ಘಟ್ಟದ ತಗ್ಗಿನವರು ಮತ್ಸ್ಯವನ್ನು ತಿನ್ನುವರೆಂದೂ, ಕೇಳಿಬಲ್ಲೆವು. ಅದರ ಯಥಾರ್ಥ್ಯ ತಿಳಿಯದು. ಹಿಂದೆ ಶ್ರಾದ್ಧದಲ್ಲಿ ಮಾಂಸವನ್ನು ಉಪಯೋಗಿಸಬೇಕೆಂಬ ವಿಷಯ ಬಂದ ಸಂದರ್ಭದಲ್ಲಿ ಒಂದು ಟಿಪ್ಪಣಿಯನ್ನು ಬರೆದಿದ್ದೇನೆ. ಈಗ ಮತ್ಸ್ಯಾಹಾರ ವಿಷಯದಲ್ಲಿ ಪುನಃ ಬರೆಯಬೇಕಾಯಿತು. ಔತ್ತರೇಯ ಬ್ರಾಹ್ಮಣರಿಗೂ, ದಾಕ್ಷಿಣಾತ್ಯ ಬ್ರಾಹ್ಮಣರಿಗೂ ಆಚಾರ ವ್ಯವಹಾರಗಳಲ್ಲೂ, ಆಹಾರ ಪಾನಗಳಲ್ಲೂ ಇರುವ ವಿಧಾನ ಗಳನ್ನು ಬರೆದಿರುವುದರಿಂದ ಅದನ್ನು ನಾವೇಕೆ ಮಾಡಬಾರದೆಂದು ಊಹಿಸಿ ಆ ರೀತಿ ಪರೀಕ್ಷೆಗೆ ಹೋಗಬಾರದು. ಕಲಿವರ್ಜ್ಯ ಪ್ರಕರಣದಲ್ಲಿ ಪರಾಶರರು ಪಲಾಹಾರ

ಗಂಡಿಕಾಭಿಃ ಪಲಾಶಸ್ಯ ಕ್ಷೀರಮಾಯಾತಿ ಪಕ್ವತಾಂ ।
ಕಪಿತ್ಥಚೂರ್ಣಯೋಗೇನ ತಥಾ ಚೈವ ಸುಜಾತಕೈಃ ॥ ೬ ॥

ಘೃತೈಃ ಸುಗಂಧೀ ಭವತೀ ದಗ್ಧೈಃ ಕ್ಷಿಪ್ತೈಸ್ತಥಾ ಯವೈಃ ।
ಪದ್ಮವಾರಿಣಿ ಯೋಗೇನ ಕಾಂಜಿಕಸ್ಯಾಮ್ಲತಾ ಭವೇತ್ ॥ ೭ ॥

ಗುಡಾದ್ಯಂ ಶುದ್ಧಿಮಾಪ್ನೋತಿ ಕ್ಷೀರೇಣ ಚ ತಥಾ ಯುತಂ ।
ಪದ್ಮರಾಗಸಮಂ ವರ್ಣಂ ಚಾಂಶುಮತ್ಯಾಃ ಪ್ರಜಾಯತೇ ॥ ೮ ॥

---

(ಮಾಂಸ ಸೇವನೆ) ವನ್ನು ನಿಷೇಧಿಸಿರುವರು. ಪಲಾಹಾರ, ಫಲಾಹಾರಗಳಿಗೆ ಬಹಳ ವ್ಯತ್ಯಾಸವಿದೆ. ಅರ್ಥ ತಿಳಿಯದ ಅವ್ಯುತ್ಪನ್ನಮತಿಗಳು "ಫಲಾಹಾರ ಮಂದಿರಂ" ಎಂದು ಬರೆಯುವುದಕ್ಕೆ ಬದಲಾಗಿ "ಪಲಾಹಾರ ಮಂದಿರಂ" ಎಂದು ಬರೆದು ಹೋಟಲುಗಳ ಮುಂದೆ ಬೋರ್ಡನ್ನು ತಗಲಿಹಾಕುತ್ತಾರೆ, ಇದು ತಪ್ಪು.

೬-೭. ಸಾಸುವೆ ಒಗ್ಗರಣೆಗೆ ತುಪ್ಪವನ್ನು ಉಪಯೋಗಿಸುವುದರಿಂದ ಸಾರು ಬಹು ಸುವಾಸನೆಯಿಂದ ಕೂಡಿರುತ್ತದೆ. ಸಾಸುವೆ ಚಟಚಟನೆಂದು ಸಿಡಿಯುವವರೆಗೂ ಒಗ್ಗರಣೆ ಹಾಕಬಾರದು. ಅನ್ನವು ಕುದಿಯುತ್ತಿರುವಾಗ ಚೆನ್ನಾಗಿ ಬೆಂದಿದೆಯೆಂದು ತಿಳಿದೊಡನೆ ಗಂಜಿಯನ್ನು ಬಸಿದುಬಿಡಬೇಕು. ಬಸಿದ ಗಂಜಿಗೆ ತಾವರೇ ನೀರು (ಕೆಸವಿನ ದಂಟನ್ನು ಬೇಯಿಸಿದ ನೀರು) ಬೆರಸಿದರೆ ಹುಳಿಯಾಗುತ್ತದೆ. ಅದನ್ನು ಕೆಲವರು ಉಪಯೋಗಿಸುತ್ತಾರೆ. ಬಸಿದ ಗಂಜಿಗೆ ಸ್ವಲ್ಪ ಉಪ್ಪುಹಾಕಿ ಒಗ್ಗರಣೆ ಕೊಟ್ಟು ಗಂಜೀಪಳದ್ಯವನ್ನು ಮಾಡುತ್ತಾರೆ. ದೇವರು ಕೊಟ್ಟ ಅಂಬಲಿಯನ್ನೋ ಗಂಜಿಯನ್ನೋ ಕುಡಿದುಕೊಂಡು ಬದುಕಿರುತ್ತೇವೆಂದು ಅನೇಕರು ಹೇಳುತ್ತಿರುವರಷ್ಟೆ. ಬಡವರು ಇಂದಿಗೂ ಅಕ್ಕಿಯ ಅನ್ನದ ಗಂಜಿಯಿಂದ ಬದುಕುತ್ತಿದ್ದಾರೆ. ದೊಡ್ಡವರು ಮಾತ್ರ ಅಲಕ್ಷ್ಯದಿಂದ ಗಂಜಿಯನ್ನು ಬಸಿದುಬಿಡುತ್ತಾರೆ. ಈ ಗಂಜಿಯನ್ನು ಬಸಿದು ದನಗಳಿಗೂ ಎಮ್ಮೆಗಳಿಗೂ ಇಟ್ಟರೆ ಬಹು ಸಂತೋಷವಾಗಿ ಕುಡಿಯುತ್ತವೆ. ಆದುದರಿಂದ ಇಂತಹ ಗಂಜಿಯನ್ನು ವ್ಯರ್ಥಗೊಳಿಸದೆ ಹಸಿದಿರುವ ಬಡವರಿಗೆ ಕೊಟ್ಟು ಧನಿಕರು ಪುಣ್ಯವನ್ನು ಅನಾಯಾಸವಾಗಿ ಕಟ್ಟಿಕೊಳ್ಳಲಿ.

೮. ಈ ಶ್ಲೋಕದಲ್ಲಿ ಅಂಶುಮತ್ಯಾಃ ಪದ್ಮರಾಗ ಸಮಂ ವರ್ಣಂ ಜಾಯತೆ ಎಂದು ಹೇಳಿರುವುದರಿಂದಲೂ, ಅಂಶುಮತೀ ಎಂದರೇ ಕೋಶದಲ್ಲಿ:—ಅಂಶುಮತೀ ಭಾಸ್ಕರೇ ಸಾಲಪರ್ಣ್ಯಾಮಂಶುಮತೀಮತಾ" ಎಂದಿರುವುದರಿಂದಲೂ, ಅಂಶುಮತೀ

**ಪಾನಕಾನಾಂ ಮಹಾಭಾಗಾ ಯಸ್ಯಾಪ್ಯನ್ಯಸ್ಯ ಚೇಚ್ಛತಿ ।**
**ಕ್ಷಾರಯೋಗೇನ ಚಾಮ್ಲಸ್ಯ ತಥಾಮ್ಲತ್ವಂ ವಿನಶ್ಯತಿ ॥ ೯ ॥**

**ಲವಣಾಧಿಕವಿಕ್ಷೇಪಂ ಸಂಜಾತವಿರಸಂ ಧ್ರುವಂ ।**
**ಸಿಕತಾಪಿಂಡಿಕಾಕ್ಷೇಪೈಃ ಸುರಸತ್ವಮವಾಪ್ನುಯಾತ್ ॥ ೧೦ ॥**

**ಚಣಕಕ್ಷಾರಯೋಗೇನ ಪುಷ್ಪಾಣಿ ಚ ಫಲಾನಿ ಚ ।**
**ಸರ್ವಾಣಿ ದ್ರುತಿಮಾಯಾಂತಿ ದ್ರುತಾನಾಂ ಕಲ್ಪನಾ ಭವೇತ್ ॥ ೧೧ ॥**

---

ಶಬ್ದಕ್ಕೆ ಮೊರೆಲೆಹೊನ್ನೆ (ಹೊನಗೊನೆಸಪ್ಪು) ಯೆಂದು ಅರ್ಥವಾಗುವುದರಿಂದಲೂ, ಹೊನಗನೆ ಸಪ್ಪಿನ ಸಾರನ್ನು ಮಾಡುವ ಕ್ರಮವನ್ನು ಇದರಲ್ಲಿ ಹೇಳಿರುವಂತೆ ತಿಳಿದುಕೊಂಡು ಇದಕ್ಕೆ ಅರ್ಥ ಬರೆದಿದ್ದೇನೆ. ಈಗಲೂ ಅನೇಕರು ಬೆರಕೆಸಪ್ಪು, ಹೊನಗನೆ ಸಪ್ಪುಗಳನ್ನು ಬೇಯಿಸಿ ಬೆಂದ ಬೇಳೆಗೆ ಬೆರಸಿ, ಅದರ ಸಾರನ್ನು ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ಹೊನಗನೆ ಸಪ್ಪು ಬೆಂದಮೇಲೆ ಸ್ವಲ್ಪ ಬೆಲ್ಲ, ಹಾಲು ಬೆರಸಿ ಶುದ್ಧಿಮಾಡಿದರೆ ಪದ್ಮರಾಗಮಣಿಯ ವರ್ಣ (ಬಣ್ಣ) ಬರುತ್ತದೆ. ಈಗಲೂ ನಾವು ಸಾರಿನ ರುಚಿಯನ್ನು ಸಾರಿನ ಬಣ್ಣವೇ ಹೇಳುತ್ತದೆಯೆಂದು ರೂಢಿಯಾಗಿ ಹೇಳುತ್ತಿರುವ ಮಾತನ್ನು ಇಲ್ಲಿ ಅನುಸಂಧಾನ ಮಾಡಬೇಕು.

೯. ಪಾನಕಗಳನ್ನು ಮಾಡುವ ಕ್ರಮ :— ಪಾನಕಗಳಿಗೆ ಹುಳಿಯಾದ ರಸಗಳನ್ನು ಸೇರಿಸಬೇಕು. ಅತೀ ಹುಳಿಯಾಗಿದ್ದರೆ ಅದಕ್ಕೆ ಸ್ವಲ್ಪ ಉಪ್ಪನ್ನು ಬೆರಸಿದರೆ ಹುಳಿಮುರಿದು ಹಿತವಾಗುವುದು. ನಿಂಬೇಹುಳಿ, ಪುಲ್ಲಂಪರಚೇ ಸಪ್ಪು, ಹುಣಿಸೇ ಹಣ್ಣಿನ ಹುಳಿ ಇತ್ಯಾದಿಗಳು ಹುಳಿಪದಾರ್ಥಗಳು.

೧೦. ಯಾವ ಪದಾರ್ಥಕ್ಕೂ ಉಪ್ಪು ಮುಂದಾಗಿದ್ದರೆ ಪದಾರ್ಥದ ರುಚಿಯೇ ಕೆಟ್ಟುಹೋಗುವುದು. ಉಪ್ಪು ಸ್ವಲ್ಪ ಹಾಕಿ ನಿಂಬೇಹುಳಿಗೆ ಕಲ್ಲುಸಕ್ಕರೆ (ಸಿಕತಾ ಪಿಂಡಿಕಾ) ಹಾಕಿ ಕರಗಿದ ಆ ಕಲ್ಸಕ್ಕರೆ ಪಾನಕವನ್ನು ಕುಡಿದರೆ ಹಿತವಾಗುವುದು.

೧೧. ಚಣಕಕ್ಷಾರ ಪ್ರಯೋಗದಿಂದ ಎಂತಹ ಹಣ್ಣಾಗಲೀ ಹೂವಾಗಲೀ ಬಲುಬೇಗ ಕರಗಿಹೋಗುವುದು. (ಅಥವಾ ಬೆಂದುಹೋಗುವುದು.) ಬೆಂದ ಪದಾರ್ಥಗಳನ್ನು ಊಟಕ್ಕೆ ತಕ್ಕಂತೆ ಹದಪಡಿಸಿಕೊಳ್ಳಬೇಕು.

**ಗಂಧವರ್ಣರಸಾಧಾನಂ ಪಾನಕಾದಿಷು ಸರ್ವತಃ ।**
**ಯಥಾಕಾಲಂ ಯಥಾದೇಶಂ ಯಥಾಸಾತ್ಮ್ಯಂ ಚ ಕಾರಯೇತ್ ॥ ೧೨ ॥**

**ನಾತ್ಯರ್ಥದೀಪ್ತೇನ ಹುತಾಶನೇನ ನಾತ್ಯಂತಮಂದೇನ ಚ ಸಾಧ್ಯಮನ್ನಂ ।**
**ರಸಂ ನ ಚಾಪ್ಯತ್ರ ಭವೇತ್ಪ್ರಭೂತಂ ನಾತ್ಯಲ್ಪಮೇತತ್ಕಥಿತಂ ಮಯಾ ತೇ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಶ್ರೀ ಪರಶುರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಭೋಜ್ಯಕಲ್ಪನೋ ನಾಮ ತ್ರಿಷಷ್ಟಿತಮೋಽಧ್ಯಾಯಃ**

---

೧೨. ಯಾವ ವಿಧವಾದ ಪಾನಕವನ್ನು ಮಾಡಿದಾಗ್ಯೂ ಅದರ ಸುವಾಸನೆ, ಬಣ್ಣ, ರುಚಿಗಳು ಕೆಡದಿರುವಂತೆ ಮಾಡಬೇಕು. ಈ ಪಾನಕಗಳನ್ನು ದೇಶಾನುಸಾರ ವಾಗಿಯೂ ಕಾಲಾನುಸಾರವಾಗಿಯೂ ಹಿತವಾಗಿರುವಂತೆ ತಯಾರುಮಾಡಬೇಕು.

೧೩. ಇದುವರಿಗೆ ಪಾನಕಮಾಡುವ ಕ್ರಮುವನ್ನು ಹೇಳಿಯಾಯಿತು. ಮುಖ್ಯ ವಾಗಿ ಊಟಕ್ಕೆ ಅನ್ನ, ಸಾರು ಇವೆರಡೇ ಬಹು ಮುಖ್ಯವಾದುವುಗಳಾದ್ದರಿಂದ ಅನ್ನವನ್ನು ಬಹು ಉದುರಾಗಿರುವಂತೆ ಮಾಡಬೇಕು. ಒಲೆ ಉರಿ ಬಹು ಜೋರಾಗಿಯೂ ಇರಬಾರದು. ಬಲು ಸಣ್ಣದಾಗಿಯೂ ಇರಬಾರದು. ಹದವಾಗಿ ಒಲೆ ಉರಿಯನ್ನು ನೋಡಿಕೊಂಡು ಅನ್ನವನ್ನು ಮಾಡಬೇಕು. ಸಾರಿಗೂ ಸಹ ಹದವಾಗಿ ಉಪ್ಪು, ಹುಳಿ, ಖಾರಗಳನ್ನು ನೋಡಿಕೊಂಡು ಹಾಕಬೇಕು. ಮುಖ್ಯವಾದ ಭೋಜನ ಪದಾರ್ಥಗಳ ಕ್ರಮುವನ್ನು ಮಾತ್ರ ಹೇಳಿದೇನೆ. ಇನ್ನೂ ಹೆಚ್ಚಾಗಿ ಹೇಳ ಬೇಕಾದುದೇನೂ ಇಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ಎರಡನೆಯ ಖಂಡದಲ್ಲಿ ಭೋಜ್ಯಕಲ್ಪನವೆಂಬ ಹೆಸರಿನ ಅರವತ್ತಮೂರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಚತುಷ್ಷಷ್ಟಿತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಶೋಧನಂ ವಸನಂ ಚೈವ ತಥೈವ ಚ ವಿರೇಚನಂ ।**
**ಭಾವನಾ ಚೈವ ಪಾಕಶ್ಚ ಬೋಧನಂ ಧೂಪನಂ ತಥಾ ॥ ೧ ॥**

**ವಾಸನಂ ಚೈವ ನಿರ್ದಿಷ್ಟಂ ಕರ್ಮಾಷ್ಟಕಮಿದಂ ಶುಭಂ ।**
**ಕಪಿತ್ಥಬಿಲ್ವಜಂಬ್ವಾಮ್ರಬೀಜಪೂರಕಪಲ್ಲವೈಃ ॥ ೨ ॥**

---

## ಅರವತ್ತನಾಲ್ಕನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಎಲೈ ಪರಶುರಾಮನೇ! ಇದುವರಿವಿಗೆ ನಾನು ನಿನ್ನೊಡನೆ ಭೋಜ್ಯಕಲ್ಪನೆ ವಿಚಾರವಾಗಿ ಕೆಲವು ಸಂಗತಿಗಳನ್ನು ಹೇಳಿದ್ದೇನೆ. ಇನ್ನು ಗಂಧಕಲ್ಪನೆಯ ಕ್ರಮವನ್ನು ತಿಳಿಸುತ್ತೇನೆ. ಈ ಗಂಧಕಲ್ಪನೆಯು ಎಂಟು ವಿಧ. ಆ ವಿಧಾನಗಳಾವುವೆಂದರೆ:-ಶೋಧನ, ವಸನ, ವಿರೇಚನ, ಭಾವನಾ, ಪಾಕ, ಬೋಧನ, ಧೂಪನ ಮತ್ತು,

೨. ವಾಸನಾ:— ಈ ಎಂಟು ವಿಧಕರ್ಮಗಳಿಗೆ ಕರ್ಮಾಷ್ಟಕವೆಂದು ಹೆಸರು. ಬೇಲದ ಚಿಗುರು, ಬಿಲ್ವಪತ್ರೆ ಚಿಗುರು, ನೇರಳೆ, ಸೀಮಾವು, ಸೀಬೇಗಿಡಗಳ ಚಿಗುರುಗಳು ಈ ಐದು ಚಿಗುರುಗಳಿಗೆ ಪಂಚಪಲ್ಲವಗಳೆಂದು ನಾಮಧೇಯವು.

ಕೃತ್ವೋದಕಂ ತು ಯದ್ದ್ರವ್ಯಂ ಶೋಧಿತಂ ಶೌಚಿತಂ ತು ತತ್ ।
ತೇಷಾಮಭಾವೇ ಶೌಚಂ ತು ಮೃತದರ್ಶಾಂಭಸಾ ಭವೇತ್ ॥ ೩ ॥

ತದಭಾವೇ ತು ಕರ್ತವ್ಯಂ ತದಾ ಮುಸ್ತಾಂಭಸಾ ದ್ವಿಜ ।
ಶುಷ್ಕಂ ಶುಷ್ಕಂ ಪುನರ್ದ್ರವ್ಯಂ ಪಂಚಪಲ್ಲವವಾರಿಣಾ ॥ ೪ ॥

ಪ್ರಕ್ಷಾಲಿತಂ ಚಾಪ್ಯಸಕೃದ್ವಮಿತಂ ತತ್ಪ್ರಕೀರ್ತಿತಂ ।
ಪಂಚಪಲ್ಲವತೋಯೇನ ಕ್ವಾಥಯಿತ್ವಾ ಪುನಃಪುನಃ ॥ ೫ ॥

ದ್ರವ್ಯಂ ಸಂಶೋಷಿತಂ ಕೃತ್ವಾ ಚೂರ್ಣಂ ತಸ್ಯ ತು ಕಾರಯೇತ್ ।
ಹರೀತಕೀಂ ತತಃ ಪಿಷ್ಟ್ವಾ ಪಂಚಪಲ್ಲವವಾರಿಣಾ ॥ ೬ ॥

ತೇನ ಪಥ್ಯಾಕಷಾಯೇಣ ತಚ್ಚೂರ್ಣಂ ಭಾವಯೇತ್ಸಕೃತ್ ।
ಶೋಷಿತಂ ಶೋಧಯೇದೇತದ್ವಿರೇಕಂ ತತ್ಪ್ರಕೀರ್ತಿತಂ ॥ ೭ ॥

---

೩. ಈ ಪಂಚಪಲ್ಲವಗಳನ್ನು ಒಂದು ಪಾತ್ರೆಗೆ ಹಾಕಿ ಅದರಲ್ಲಿ ನೀರು ತುಂಬಿ, ಅದನ್ನು ಚೆನ್ನಾಗಿ ಶೋಧಿಸಿಕೊಂಡರೆ ಅದು ಶೌಚಿತ (ನಿರ್ಮಲ) ವಾಗುವುದು. ಈ ನೀರಿನ ಸ್ನಾನವು ಬಹಳ ಪರಿಶುದ್ಧವಾದುದು. ಈ ಐದು ಚಿಗುರುಗಳನ್ನೂ ತಂದು ಈ ರೀತಿ ಸಿದ್ಧಮಾಡದೆ ಇದ್ದಾಗ್ಯೂ ನೀರು ತುಂಬಿದ ಪಾತ್ರೆಗೆ ಕಸ್ತೂರಿಯನ್ನು ಕದರಿ ಸ್ನಾನಮಾಡಿದರೆ ಬಹಳ ಶ್ರೇಷ್ಠವೆನಿಸುವುದು.

೪. ಈ ಮೇರೆ ಕಸ್ತೂರಿಜಲವನ್ನು ಸಿದ್ಧಪಡಿಸಲಾಗದೆ ಇದ್ದರೆ ತುಂಗಮುಸ್ತಿ ಸಪ್ಪನ್ನು ನೀರಿಗೆ ಕದರಿ, ಅದನ್ನು ಚೆನ್ನಾಗಿ ಬಟ್ಟೆಯಲ್ಲಿ ಶೋಧಿಸಿ ಪಂಚಪಲ್ಲವ ಜಲದೊಳಗೆ ಬೆರಸಿದರೆ ಇದೂ ಸಹ ಪವಿತ್ರಸ್ನಾನೋದಕವಾಗುವುದು.

೫-೬. ಇದೇ ನೀರನ್ನು ಪಂಚಪಲ್ಲವದೊಡನೆ ಬೆರಸಿ ಚೆನ್ನಾಗಿ ಮರಳಿಸಿ ಪುನಃ ಪುನಃ ಸೋಸುತ್ತಾ ಬಂದರೆ ಪ್ರಕ್ಷಾಳಿತವೆನಿಸುತ್ತದೆ. ಈ ಕ್ಷಾಲಿತ ಜಲಕ್ಕೆ ಅಳಲೇಕಾಯನ್ನು ಚೆನ್ನಾಗಿ ಅರೆದು ಅದರ ಚೂರ್ಣವನ್ನು ಬೆರಸಿ, ಕದರಿ ಚೆನ್ನಾಗಿ ಬೆಂಕಿಯಲ್ಲಿ ಕುದಿಸಿ ಕಷಾಯದಂತೆ ಮಾಡಿಕೊಳ್ಳಬೇಕು.

೭. ಈ ರೀತಿ ಸಿದ್ಧವಾದ ಅಳಲೆಯಕಾಯಿ ಕಷಾಯಕ್ಕೆ ಅದರ ಪುಡಿಯನ್ನು ಬೆರಸಿ ಭಾವನೆಗೊಳಿಸಬೇಕು (ವಾಸನೆ ಕಟ್ಟಬೇಕು). ಅಂದರೆ ಚೆನ್ನಾಗಿ ನೀರನ್ನು ಇಂಗಿಸಿ, ಅದರ ಹಿಂಡಿಯನ್ನು ಒಣಗಿಸಿ, ಆ ಒಣಗಿದ ಪುಡಿಯನ್ನು ನುಣ್ಣಗೆ ಸೋಸಿದರೆ ಇದಕ್ಕೆ ವೀರಕ್ರಿಯೆಯೆಂದು ಹೆಸರಾಗುವುದು.

ತತಸ್ತು ಗಂಧದ್ರವ್ಯೇಣ ಯಥೇಷ್ಟಂ ಕುಂಕುಮಾದಿನಾ ।
ಭಾವಯೇತ್ತೇನ ತದ್ದ್ರವ್ಯಂ ಭಾವನಾ ಸಾ ಪ್ರಕೀರ್ತಿತಾ । ॥ ೮ ॥

ತೇನೈವ ಭಾವಯೇದ್ರವ್ಯಂ ಪಂಚಪಲ್ಲವವಾರಿಣಾ ।
ಆಶ್ವತ್ಥೇನೈವ ತೇನಾಥ ದ್ರವ್ಯಂ ರಾಮ ತಥಾಽಸ್ತು ತತ್ ॥ ೯ ॥

ಮೃದಾಪಿಹಿತಸತ್ವಾ ತು ಮೃಣ್ಮಯೇ ಭಾಜನದ್ವಯೇ ।
ವಿಪಚೇತ್ತು ವಿಧೂಮಾಗ್ನಾವರ್ತಧೂಮಃ ಪುನಃಪುನಃ ॥ ೧೦ ॥

ತಾವೇವ ಕ್ವಾಥಯೇತ್ತಾವತ್ತತ್ರೈವಾನುಗತೋ ರಸಃ ।
ಏತತ್ಪಾಕವಿಧಾನಂ ತೇ ಪಂಚಮಂ ಪರಿಕೀರ್ತಿತಂ ॥ ೧೧ ॥

ತತಸ್ತು ಭಾವನಾದ್ರವ್ಯಂ ಕಲ್ಕಪಿಷ್ಟಂ ನಿಯೋಜಯೇತ್ ।
ಕಲ್ಕಪಿಷ್ಟೇ ತಥಾ ದ್ರವ್ಯೇ ಭೋಧನಂ ಪರಿಕೀರ್ತಿತಂ । ॥ ೧೨ ॥

---

೮. ಹೀಗೆ ಮಾಡಿಕೊಂಡ ಆ ಚೂರ್ಣಕ್ಕೆ ಕುಂಕುಮಕೇಸರಿಯೇ ಮುಂತಾದ ಸುಗಂಧದ್ರವ್ಯಗಳನ್ನು ಬೆರಸಿ ವಾಸನೆ ಕಟ್ಟಬೇಕು. ಈ ರೀತಿ ಮಾಡಿದ ಚೂರ್ಣವು ಭಾವಿತವೆನಿಸಿಕೊಳ್ಳುವುದು.

೯. ಇಂತು ಭಾವಿತವಾದ ಸುಗಂಧ ಚೂರ್ಣವನ್ನು ಪಂಚಪಲ್ಲವದೊಡನೆಯೂ, ಅಶ್ವತ್ಥಪಲ್ಲವದೊಡನೆಯೂ ಬೆರೆತ ಜಲಕ್ಕೆ ಕದರಿ ಸಿದ್ಧಪಡಿಸಿಕೊಂಡಿರಬೇಕು.

೧೦. ಈ ರೀತಿ ಸಿದ್ಧವಾದ ಪರಿಮಳಜಲವನ್ನು ಒಂದು ಮಣ್ಣಿನ ಗಡಿಗೆಯಲ್ಲಿ ಸುರಿದು, ಅದರ ಮೇಲೆ ಮಣ್ಣಿನ ಮುಚ್ಚಳವನ್ನು ಮುಚ್ಚಿ, ಆ ಗಡಿಗೆಯನ್ನು ಒಲೆಯ ಮೇಲಿಟ್ಟು ಚೆನ್ನಾಗಿ ಕಾಯಿಸಬೇಕು. ಒಲೆಯು ಉರಿಯುತ್ತಿರುವಾಗ ಹೊಗೆಯಾಗದಂತೆ ಮಾಡಿಕೊಳ್ಳುತ್ತಿರಬೇಕು.

೧೧. ಗಡಿಗೆಯೊಳಗಿನ ಸುಗಂಧಜಲವು ಚೆನ್ನಾಗಿ ಕುದಿದು ಪಾಕರಸವಾಗುವವರಿಗೂ ಸುಮ್ಮನಿದ್ದು, ಅದು ಕಾದಮೇಲೆ ಅದನ್ನು ಕೆಳಕ್ಕೆ ಇಳಿಸಿಕೊಳ್ಳಬೇಕು. ಇದೇ ಗಂಧಪಾಕವಿಧಾನವೆನಿಸುವುದು.

೧೨. ಸುವಾಸನಾದ್ರವ್ಯಗಳನ್ನು ಚೆನ್ನಾಗಿ ಅರೆದು ಕಲ್ಕಪಿಷ್ಟ (ಬುಕ್ಕಿಹಿಟ್ಟು) ದೊಡನೆ ಸೇರಿಸಿ ಉಂಡೆಯಂತೆ ಕಲಸಿದರೆ ಬೋಧನವೆನಿಸುವುದು.

ತತಸ್ತು ಪೂಜಯೇದ್ದ್ರವ್ಯಂ ಪೂರ್ವಮೇವ ತು ಪಥ್ಯಯಾ ।
ತತಸ್ತು ಗುರುಶುಕ್ತಿಭ್ಯಾಂ ಚಂದನಾಗರುಭಿಸ್ತತಃ ॥ ೧೩ ॥

ಕರ್ಪೂರಮೃಗದರ್ಪಾಭ್ಯಾಂ ತತಶ್ಚೈನಂ ಪ್ರಧೂಪಯೇತ್ ।
ಇತ್ಯೇತದ್ವಾಸನಂ ರಾಮ ಕರ್ಮ ತೇಽಭಿಹಿತಂ ಮಯಾ ॥ ೧೪ ॥

ತತಸ್ತು ಗುಲಿಕಾಂ ಕೃತ್ವಾ ಯಥಾಕಾಮಮತಂದ್ರಿತಃ ।
ಪುಷ್ಪೈರ್ವಕುಲಜಾತೀನಾಂ ತಥಾಽನ್ಯೇಷಾಂ ಸುಗಂಧಿಭಿಃ ॥ ೧೫ ॥

ಛಾಯಾಸು ಶೋಷ್ಯಮಾಣಸ್ಯ ವಾಸನಾ ಕ್ರಿಯತೇ ತು ಯಾ ।
ವಾಸನಾ ಸಾ ವಿನಿರ್ದಿಷ್ಟಾ ಕರ್ಮೈತಚ್ಚಾಷ್ಟಮಂ ಶುಭಂ ॥ ೧೬ ॥

---

೧೩. ಮೊದಲು ಹೇಳಿರುವಂತೆ ಪುನಃ ಅಳಲೆಕಾಯನ್ನು ಜಜ್ಜಿ ಪುಡಿಮಾಡಿ, ಅದಕ್ಕೆ ಚಂದನ, ಅಗರುಗಳನ್ನು ಬೆರಸಿ ದಪ್ಪ ಕಪ್ಪೆಚಿಪ್ಪಿನಲ್ಲಿ; ಅದನ್ನು ತುಂಬಿ ಒಲೆಯ ಮೇಲಿಟ್ಟು, ಅದರ ಮೇಲೆ ಇನ್ನೊಂದು ಅಳತೆಯಾದ ಕಪ್ಪೆಚಿಪ್ಪನ್ನು ಮುಚ್ಚಬೇಕು.

೧೪. ಈ ರೀತಿ ಸಿದ್ಧವಾದ ಆ ಶುಕ್ತಿಯೊಳಗಣ ಧೂಪದ್ರವ್ಯಕ್ಕೆ ಪಚ್ಚಕರ್ಪೂರ, ಕಸ್ತೂರಿ ಮುಂತಾದ ಸುಗಂಧದ್ರವ್ಯವನ್ನು ತುಂಬಿ ಮುಚ್ಚಿಟ್ಟರೆ ವಾಸಿತವೆನಿಸಿಕೊಳ್ಳುವುದು. ಈ ಪದಾರ್ಥಗಳನ್ನು ಮುದ್ದೆಮಾಡಿ ಇಟ್ಟುಕೊಳ್ಳಬೇಕು.

೧೫. ಆ ಮುದ್ದೆಯನ್ನು ಸಣ್ಣದಾಗಿಯಾಗಲಿ ದಪ್ಪನಾಗಿಯಾಗಲಿ ಮಾತ್ರೆಯಂತೆ (ಗುಳಿಗೆ) ಮಾಡಿಕೊಳ್ಳಬೇಕು. ಆ ಗುಳಿಗೆಗಳಿಗೆ ಪಗಡೆಹೂವಿನ ಸಾರವೇ ಮುಂತಾದುವುಗಳನ್ನು ಚುಮುಕಿಸಬೇಕು.

೧೬. ಪುಷ್ಪರಸಗಳನ್ನು ಚುಮುಕಿಸಿದ ಬಳಿಕ ಆ ಗುಳಿಗೆಗಳನ್ನು ನೆರಳಿನಲ್ಲಿ ಚೆನ್ನಾಗಿ ಒಣಗಿಸಬೇಕು. ಬಳಿಕ ವಾಸನೆಕಟ್ಟಿದರೆ ಇದು ವಾಸನಾಸಂಸರ್ಗವೆನಿಸಿಕೊಳ್ಳುವುದು. ಇದುವರಿಗೆ ಹೇಳಿದುದೇ ಕರ್ಮಾಷ್ಟಕವೆನಿಸುವುದು.

ಕರ್ಮಾಷ್ಟಕಮಿದಂ ಕೃತ್ವಾ ವಚಾಂ ಪಿಂಡನಿಭಾಂ ತಥಾ ।
ಮುಸ್ತಂ ಶೈಲೇಯುಕಂ ವಾऽಪಿ ಸೇವ್ಯಂ ವಾ ದ್ವಿಜಸತ್ತಮ ॥ ೧೭ ॥

ಶೋಧಯೇದ್ಗಾಂಧಿಕೋ ವಿದ್ವಾದ್ಯಥಾऽನ್ಯತ್ಕರ್ಮ ಸೇತ್ಸ್ಯತಿ ।
ನಿರ್ಯಾಸಾನಾಂ ಚ ಪುಷ್ಪಾಣಾಂ ಕರ್ಮಾಷ್ಟಕಮಿದಂ ಶುಭಂ ॥ ೧೮ ॥

ವಿದುಷಾ ನೈವ ಕರ್ತವ್ಯಂ ಕಾರ್ಯಮನ್ಯತ್ರ ಭಾರ್ಗವ ।
ಅಶೋಧಿತೈಸ್ತಥಾ ಧೂಪಾಃ ಕಾರ್ಯಾ ದ್ರವ್ಯೈರ್ಯಥಾವಿಧಿ ॥ ೧೯ ॥

ಅತಃಪರಂ ತು ತೇ ಯೋಗಾನ್ಕಾಂಶ್ಚಿದ್ವಕ್ಷ್ಯಾಮಿ ತಾಂಚ್ಛೃಣು ।
ನಖಂ ಕುಷ್ಟಂ ಘನಂ ಮಾಂಸೀಸ್ಪೃಕ್ತ್ವ ಶೈಲೇಯುಕಂ ಜಲಂ ॥ ೨೦ ॥

---

೧೭-೧೮. ಈ ರೀತಿ ಎಂಟುವಿಧ ಕರ್ಮಗಳಿಂದ ಸುಗಂಧದ್ರವ್ಯವನ್ನು ಸಿದ್ಧಿಪಡಿಸಿಕೊಂಡ ಬಳಿಕ ಬಜೆಯನ್ನು ತೇದು ಒಣಗಿಸಿ, ತುಂಗಮುಸ್ತೆಯನ್ನೂ ಶೈಲೇಯುಕವನ್ನೂ ಪುಡಿಮಾಡಿ, ಆ ಮಾತ್ರೆಗಳನ್ನದರಲ್ಲಿ ಹೊರಳಿಸಿ, ಅದಕ್ಕೆ ಲಾಮಂಚದ ನೀರನ್ನು ಚುಮುಕಿಸಿ, ವಿವಿಧ ಪುಷ್ಪಗಳ ಗಂಧವನ್ನು ಭಾವಿಸಿದರೆ, ಆಯಾ ಮಾತ್ರೆಗಳು ಆಯಾ ಹೂವಾಸನೆಯನ್ನು ತಳೆಯುವುವು. ಇವೂ ಅಷ್ಟಕ ಕರ್ಮಗಳಿಗೇ ಸೇರಿದುವುಗಳು.

೧೯. ಈ ರೀತಿ ಮೇಲೆ ಹೇಳಿದ ಕರ್ಮಾಷ್ಟಕಗಳನ್ನು ಬುದ್ಧಿಶಾಲಿಯಾದವನು ತಾನೇ ಸ್ವಂತವಾಗಿ ಮಾಡುವುದಕ್ಕೆ ಹೊರಡಬಾರದು. ಇತರರಿಗೆ ಹೇಳಿ ತಾನು ಎದುರಿಗೆ ನಿಂತು ಮಾಡಿಸಬೇಕು. ಶೋಧಿಸದೆ ಇದ್ದ ದ್ರವ್ಯಗಳಿಂದ ಧೂಪದ ಕುಡಿಗಳನ್ನು ಮಾಡಿಕೊಂಡು ದೇವರಧೂಪಕ್ಕೆ ಉಪಯೋಗಿಸಬಹುದು. ಇದೇ ಹಾಲು ಮಡ್ಡಿ ಮುಂತಾದ ಧೂಪದ್ರವ್ಯಗಳು.

೨೦. ಪರಶುರಾಮ! ಇನ್ನು ಕೆಲವು ಗಂಧಕಲ್ಪನಾ ಪ್ರಯೋಗಗಳನ್ನು ನಿನಗೆ ತಿಳಿಸುತ್ತೇನೆ, ಕೇಳು. ಈ ಸಂದರ್ಭದಲ್ಲಿ ಇಪ್ಪತ್ತೊಂದು ವಿಧ ಧೂಪದ್ರವ್ಯದ ಹೆಸರುಗಳು ಎಲ್ಲರಿಗೂ ಗೊತ್ತಿದ್ದರೆ ಅನುಕೂಲ. ಆ ಹೆಸರುಗಳೇನೆಂದರೆ;— ನಖ, ಚಂಗಲಕೋಷ್ಠ, ಘನ, ಜಟಾಮಾಂಸೀ, ಸ್ಪೃಕ್, ಶೈಲೇಯುಕ, ಲಾಮಂಚ.

ತಥೈವ ಕುಂಕುಮಂ ಲಾಕ್ಷಾ ಚಂದನಾಗುರುಣೀನತಂ ।
ಸರಲಾ ದೇವಕಾಷ್ಠಂ ಚ ಕರ್ಪೂರಂ ಕಾರ್ತಯಾ ಸಹ ॥ ೨೦ ॥

ಬೋಲಂ ಕಂದುರಕಶ್ಚೈವ ಗುಗ್ಗುಲಃ ಶ್ರೀನಿವಾಸಕಃ
ಸಹ ಸರ್ಜರಸೇನೇಯಂ ಧೂಪದ್ರವ್ಯೈಕವಿಂಶತಿಃ ॥ ೨೨ ॥

ಧೂಪದ್ರವ್ಯಗಣಾದಸ್ಮಾದೇಕವಿಂಶಾದ್ಯಥೇಚ್ಛಯಾ ।
ದ್ವೇ ದ್ವೇ ದ್ರವ್ಯೇ ಸಮಾದಾಯ ಸರ್ಜಭಾಗೇ ನಿಯೋಜಯೇತ್ ॥ ೨೩ ॥

ನವೇ ಪಿಣ್ಯಾಕವಲಯ್ಯೋಃ ಸಂಯೋಜ್ಯ ಮಧುನಾ ತಥಾ ।
ಧೂಪಯೋಗ್ಯಾ ಭವಂತೀಹ ಯಥಾವತ್ಸ್ವೇಚ್ಛಯಾಕೃತಾಃ ॥ ೨೪ ॥

ತ್ವಚಂ ಜಾತೀಫಲಂ ತೈಲಂ ಕುಂಕುಮಂ ಗ್ರಂಥಿಪರ್ಣಕಂ ।
ಶೈಲೇಯಂ ತಗರಂ ಕಾಷ್ಠಂ ತಾಂಬೂಲಂ ತಗರಂ ತಥಾ ॥ ೨೫ ॥

---

೨೦-೨೩. ಕುಂಕುಮಕೇಸರಿ, ಅರಗು, ಚಂದನ, ಅಗರು, ನತ, ಸರಳ, ದೇವದಾರುಚಕ್ಕೆ, ಕರ್ಪೂರ, ಚಿನ್ನ, ಗಂಧರಸ, (ಬೋಳ) ಕಂದುರ, ಗುಗ್ಗುಳ, ಶ್ರೀವಾಸ(ವೃಕ್ಷಧೂಪ-ಸಾಮ್ರಾಣಿ,) ಸರ್ಜರಸ, ಅಂತೂ ಒಟ್ಟು ಇಪ್ಪತ್ತೊಂದು ವಿಧ ಧೂಪದ್ರವ್ಯಗಳ ಹೆಸರುಗಳೇ ಇವು. ಈ ರೀತಿ ಹೇಳಿರುವ ಈ ೨೧ ವಿಧ ಧೂಪದ್ರವ್ಯ ಗಣಗಳಿಂದ ತಮ್ಮ ತಮ್ಮ ಮನಸ್ಸಿಗೆ ತೋಚಿದ ಎರಡೆರಡು ದ್ರವ್ಯಗಳನ್ನು ಆರಿಸಿ ಕೊಂಡು ಸರ್ಜಭಾಗಕ್ಕೆ ಸೇರಿಸಬೇಕು.

೨೪. ಮೂರನ್ನೂ ಸಮಸಮನಾಗಿ ಬೆರಸಿ ಅರೆದು ಹಿಂಡಿಯ ಹಾಗೆ ಮಾಡಿ ಅದನ್ನು ಜೇನುತುಪ್ಪದಲ್ಲಿ ಕಲಸಿ ಇಡಬೇಕು. ಅದು ಹಾಗೇ ಕಚ್ಚಿ ಹೀರಿ ಹಾಲುಮಡ್ಡಿ ಯಾಗುತ್ತದೆ. ಈ ರೀತಿ ಸಿದ್ಧಪಡಿಸಿದ ಹಾಲುಮಡ್ಡಿಯ ಧೂಪವೇ ದೇವತಾಯೋಗ್ಯ ವಾದುದು.

೨೫-೨೬. ಜಾಯಿಕಾಯಿ, ಜಾಯಿಪತ್ರೆ, ಅಚ್ಚಳ್ಳೆಣ್ಣೆ, ಕುಂಕುಮಕೇಸರಿ, ಮಾಚೀಪತ್ರೆ, ಶೈಲೇಯ, ತಗರ, ಕಾಷ್ಠ, ತಾಂಬೂಲ, ಜಟಾಮಾಂಸೀ, ಚಂಗಲ

ಮಾಂಸೀಸರಕುಷ್ಠಂವಾ ಚ ನವ ದ್ರವ್ಯಾಣಿ ನಿರ್ದಿಶೇತ್ ।
ಏತೇಭ್ಯಸ್ತು ಸಮಾದಾಯ ದ್ರವ್ಯಂ ತತ್ರ ಯಥೇಚ್ಛಯಾ ॥ ೨೬ ॥

ಮೃಗದರ್ಪಯುತಂ ಸ್ನಾನಂ ಕಾರ್ಯಂ ಕಂದರ್ಪವರ್ಧನಂ ।
ದ್ರುಕಸ್ಸಿರಾನಲದ್ಯೈಸ್ತುಲ್ಯೈರ್ವಾನ್ಯಕಾರಸಮಾಯುತೈಃ ॥ ೨೭ ॥

ಸ್ನಾನಮುತ್ಪಲಗಂಧಿಸ್ಯಾತ್ಸತೈಲಂ ಕುಂಕುಮೈರ್ಯುತಂ ।
ಜಾತಿಪುಷ್ಪಸುಗಂಧಿಸ್ಯಾತ್ತಗರಾರ್ಧೇನ ಯೋಜಿತಂ ॥ ೨೮ ॥

ಬಾಲಕಾಂಚನಸಂಯುಕ್ತಂ ಪಾಟಲಾಕುಸುಮಾಯತೇ ।
ಸವ್ಯಾಪಕಂ ಸ್ಯಾದ್ವಕುಲೈಸ್ತುಲ್ಯಗಂಧಿ ಮನೋಹರಂ ॥ ೨೯ ॥

ನಾಲಿಕಾವಂಶಸಹಿತಂ ಕುಟ್ಟಿಪಾದೇನ ಚಾರ್ಯಕಂ ।
ದ್ವಿಕೇಸರಂ ವೇಣುಪಾದಂ ಕುಂದಪುಷ್ಪಾಯತೇ ತಥಾ ॥ ೩೦ ॥

ಶೈಲಪಾದರ್ಧಸಂಯುಕ್ತಂ ವ್ಯಕ್ತಂ ಮದನಕಂ ಭವೇತ್ ।
ಮಂಜಿಷ್ಠಾ ತಗರಂ ಬಾಲಂ ದ್ವಯಂ ವ್ಯಾಘ್ರನಖಂ ನಖಂ ॥ ೩೧ ॥

ಗಂಧಪತ್ರಂ ಚ ವಿನ್ಯಸ್ಯ ಗಂಧತೈಲಂ ಭವೇಚ್ಛುಭಂ ।
ತೈಲಂ ನಿಷ್ಪೀಡಿತಂ ರಾಮ ತಿಲೈಃ ಪುಷ್ಪಾಧಿವಾಸಿತೈಃ ॥ ೩೨ ॥

---

ಕೋಷ್ಠ, ಈ ಪದಾರ್ಥಗಳ ಸಾರ (ತೈಲ) ಕ್ಕೆ ಕಸ್ತೂರಿಯನ್ನು ಬೆರಸಿ ತಲೆಗೊತ್ತಿಕೊಂಡು ಅಭ್ಯಂಗನಸ್ನಾನಮಾಡಿದರೆ ಕಾಮೋತ್ತೇಜಕವಾಗುವುದು.

೨೭-೩೦. ದೇವದಾರುವಿನಚಕ್ಕೆ, ಲಾಮಂಚ, ತಾವರೇಗಂಧ, ಕೇಸರಿಬೆರಸಿದ ಅಚ್ಚೆಳ್ಳೆಣ್ಣೆ, ಜಾಜೀಹೂವಿನ ತೈಲ ಇವುಗಳನ್ನೆಲ್ಲಾ ಬೆರಸಿ ಅದಕ್ಕೆ ಚಿನ್ನದನೀರನ್ನೂ ಸೇರಿಸಿದರೆ ಪಾದರೀಹೂವಿನ ಆಕಾರ (ಬಣ್ಣ) ಬರುವುದಲ್ಲದೆ ಬಹು ಸುವಾಸನೆ ಯುಂಟಾಗುತ್ತದೆ. ಈ ಸುವಾಸನಾತೈಲವನ್ನು ತಲೆಗೆ ತಿಕ್ಕಿಕೊಂಡು ಅಭ್ಯಂಗನಸ್ನಾನ ಮಾಡಿದರೆ ಮದನೋದ್ರೇಕವಾಗುವುದು.

೩೧-೩೨. ಮಂಜಿಷ್ಠೆಹುಲ್ಲು, ತಗರ, ಚಮರೀಹುಲ್ಲು, ಹುಲಿ ಉಗುರಿನಗಂಧ, ಗಂಧದ ಚಕ್ಕೆಗಳನ್ನು ತೇದು ಗಂಧದೆಣ್ಣೆಗೆ ಬೆರಸಿ ಆ ತೈಲವನ್ನು ಉಜ್ಜಿಕೊಂಡು ಸ್ನಾನಮಾಡಿದರೆ ಬಹು ಶುಭಕರವು.

ವಾಸನಾಪುಷ್ಪಸದೃಶಂ ಗಂಧನೇ ತು ಭವೇದ್ಧೃತಂ ।
ಪೂರ್ವವಚ್ಛೋಧಯಿತ್ವಾ ತು ಮುಸ್ತಂ ಸೇವ್ಯಂ ವಚಾಂ ನಿಶಾಂ ॥ ೩೩ ॥

ಅಭೀಷ್ಟಮನ್ಯತ್ಕಲುಷಂ ಯಥಾವದನುಲೇಪಯೇತ್ ।
ಉದ್ಧೃತ್ಯ ಚಂದನಾದಿಂ ಚ ಶೋಧನಂ ವಮನಂ ತಥಾ ॥ ೩೪ ॥

ವರ್ಜಯಿತ್ವಾ ವಿರೇಕಂ ಚ ಶೇಷಕರ್ಮಾಣಿ ಕಾರಯೇತ್ ।
ತದ್ವಾ ಭವತಿ ಧರ್ಮಜ್ಞ ವರ್ಣಕಂ ತ್ರಿದಿವಪ್ರಿಯಂ ॥ ೩೫ ॥

ಪಟವಾಸಾಂಸಿ ಕಾರ್ಯಾಣಿ ವರ್ಣಕೈಃ ಶ್ಲಕ್ಷ್ಣಚೂರ್ಣಿತೈಃ ।
ಏಲಾಲವಂಗಕಕ್ಕೋಲ ಜಾತೀಫಲನಿಶಾಕರಾಃ ॥ ೩೬ ॥

---

೩೩-೩೪. ಪುಷ್ಪತೈಲಗಳನ್ನು ಗಂಧದೆಣ್ಣೆ, ಅಚ್ಚೆಳ್ಳೆಣ್ಣೆಗೆ ಬೆರಸಿ ಚೆನ್ನಾಗಿ ಶೋಧಿಸಿ, ಅವನ್ನು ಕೊನ್ನಾರೆಗೆಡ್ಡೆ, ಲಾಮಂಚ, ಬಜೆ, ಅರಶಿನಗಳನ್ನರೆದ ಕಲ್ಕಕ್ಕೆ ಬೆರಸಿ ಮನಸ್ಸುಬಂದಂತೆ ಅಂಗಾಂಗಗಳಿಗೆಲ್ಲಾ ಚೆನ್ನಾಗಿ ತಿಕ್ಕಿಕೊಂಡು ಅಭ್ಯಂಗನ ಮಾಡಿದರೆ ಬಹಳ ಸುಖಕರವಾಗಿರುತ್ತದೆ.

೩೫. ಚಂದನಾದಿ ತೈಲವನ್ನು ಚೆನ್ನಾಗಿ ಶೋಧಿಸಿ ಅದನ್ನು ಲೇಪಿಸಿಕೊಂಡು ಅಭ್ಯಂಗನಮಾಡಿದರೆ ಅಂತಹ ಪುಣ್ಯವಂತನ ದೇಹಕಾಂತಿಯು ಮಿರುಮಿರುಗುವ ಚಿನ್ನದಂತೆ ಹೊಳೆಯುವುದು. ಅಂತಹ ದೇಹವರ್ಣವನ್ನು ಕಂಡರೆ ದೇವತೆಗಳೂ ಸಹ ಇಷ್ಟಪಡುತ್ತಾರೆ.

೩೬. ಹೊದಿಯುವ ಬಟ್ಟೆಗಳೂ, ಉಡುವಬಟ್ಟೆಗಳೂ, ಸುಗಂಧಪೂರಿತವಾಗಿ ಘಮಘಮಿಸಬೇಕಾದರೆ ಏಲಕ್ಕಿ, ಲವಂಗ, ತಕ್ಕೋಲ, ಜಾಯಿಕಾಯಿ, ಅರಿಶಿನಗಳನ್ನು ಚೆನ್ನಾಗಿ ಅರೆದು ಮುದ್ದೆಮಾಡಿ ಅದರಲ್ಲಿ ಬಟ್ಟೆಯನ್ನದ್ದಿ ಚೆನ್ನಾಗಿ ಹಿಂಡಿ ಒಣಗಿಸಿದರೆ ಬಟ್ಟೆಗಳ ಬಣ್ಣವೂ ಬದಲಾಯಿಸುವುದಲ್ಲದೆ ಬಹು ಸುವಾಸನೆಯಿಂದ ಕೂಡಿರುವುದು.

ಜಾತಿಪತ್ರಿಕಯಾ ಸಾರ್ದ್ಧಂ ಸ್ವತಂತ್ರಂ ಮುಖವಾಸಕಂ ।
ಕರ್ಪೂರಂ ಕುಂಕುಮಂ ಕಾಂತಂ ಮೃಗದರ್ಪಂ ಹರೇಣುಕಂ ॥ ೩೭ ॥

ಕಕ್ಕೋಲೈಲಾಲವಂಗಂ ಚ ಜಾತೀ ಕೋಶಕಮೇವಚ ।
ದ್ರುಕ್ಪತ್ರಂ ತ್ರುಟಿಮುಸ್ತಂ ಚ ಲತಾಕಸ್ತೂರಿಕಂ ತಥಾ ॥ ೩೮ ॥

ಕಂಟಿಕಾನಿ ಲವಂಗಸ್ಯ ಫಲಪತ್ರೈಶ್ಚ ಜಾತಿತಃ ।
ಕಟುಕಂ ಚ ಫಲಂ ರಾಮ ಕರ್ಷಿಕಾಂಡಾಂ ಪ್ರಕಲ್ಪಯೇತ್ ॥ ೩೯ ॥

ತಚ್ಚೂರ್ಣೇ ಖಾದಿರಂ ಸಾರಂ ದದ್ಯಾತ್ತುಲ್ಯತುಲಾರ್ಪಿತಂ ।
ಸಹ ಕಣ್ಯಾರಸೇನಾಸ್ಯ ಕರ್ತವ್ಯಾ ಗುಲಿಕಾಃ ಶುಭಾಃ ॥ ೪೦ ॥

ಮುಖೇ ನ್ಯಸ್ತಾಃ ಸುಗಂಧಾಸ್ತಾ ಮುಖರೋಗವಿನಾಶನಾಃ ।
ಪೂರ್ವಂ ಪ್ರಕ್ಷಾಲಿತಂ ಸಮ್ಯಕ್ಪದ್ಮಪಲ್ಲವವಾರಿಣಾ ॥ ೪೧ ॥

ಶಕ್ತ್ಯಾತು ಗುಲಿಕದ್ರವ್ಯೈರ್ವಾಸಿಕಂ ಮುಖವಾಸಕಂ ।
ಕಟುಕಂ ದಂತಕಾಷ್ಠಂ ಚ ಗೋಮೂತ್ರೇ ವಾಸಿತಂ ತ್ರ್ಯಹಂ ॥ ೪೨ ॥

---

೩೭-೪೧. ಜಾಯಿಪತ್ರೆ, ಪಚ್ಚಕರ್ಪೂರಗಳನ್ನು ಪುಡಿಮಾಡಿ, ಕಸ್ತೂರಿ, ಕೇಸರಿಗಳನ್ನು ಆ ಪುಡಿಗೆ ಬೆರಸಿ, ಏಲಕ್ಕಿ, ಲವಂಗ, ಜಾಯಿಕಾಯಿ, ಜಾಯಿಪತ್ರೆ, ಕಸ್ತೂರೀ ಹುಡಿಗಳೊಡನೆ ಸೇರಿಸಿ ಉಂಡೆಮಾಡಿ ಸಣ್ಣ ಸಣ್ಣ ಮಾತ್ರೆಗಳನ್ನು ಮಾಡಿಟ್ಟು ಒಣಗಿಸಿ ಆ ಮಾತ್ರೆಗಳನ್ನು ಬಾಯಲ್ಲಿ ಹಾಕಿಕೊಳ್ಳುತ್ತಿದ್ದರೆ ಬಾಯಿಯು ಬಹು ಸುವಾಸನೆಯಾಗಿರುವುದಲ್ಲದೆ ಎಂತಹ ಮುಖರೋಗವೂ ಗುಣವಾಗುವುದು.

೪೨-೪೪. ಮತ್ತು ಪೂರ್ವದಲ್ಲಿ ಹೇಳಿದ ದ್ರವ್ಯಗಳನ್ನು ತಾವರೇ ಎಲೆಯ ನೀರಿನಿಂದ ತೊಳೆದು ಸಣ್ಣ ಸಣ್ಣ ಗುಳಿಗೆಮಾಡಿ ಒಣಗಿಸಿ ಬಾಯಿಗೆ ಹಾಕಿಕೊಂಡರೆ ಅದೂ ಬಹು ರುಚಿಯಾಗಿಯೂ, ವಾಸನೆಯಾಗಿಯೂ ಇರುವುದು. ಇನ್ನೂ ಒಂದು ವಿಧವನ್ನು ತಿಳಿಸುವೆನು, ಕೇಳು. ಕಟುಕರೋಹಿಣಿ, ದೇವದಾರು ಚಕ್ಕೆಗಳನ್ನು

ಕೃತಂ ಚ ಪೂಗವದ್ರಾಸು ಮುಖಸೌಗಂಧ್ಯಕಾರಕಂ ।
ತ್ವಕ್ಪಥ್ಯಯೋಃ ಸಮಾವಂಶೌ ಸಿತಭಾಗಾರ್ಧಸಂಯುತೌ ॥ ೪೩ ॥

ನಾಗವಲ್ಲೀಸಮೋ ಭಾತಿ ಮುಖವಾಸೋ ಮನೋಹರಃ ॥ ೪೪ ॥

ಕಟುಕಫಲನತಾಂಬು ತ್ವಕ್ತ್ರುಟಿವ್ಯಾಧಿಪತ್ರೈ
ರ್ಗಲದನತಸುರಾಭಿಸ್ತುಲ್ಯಭಾಗಾನ್ವಿತಾನಿ ।
ದ್ವಿಗುಣಿತಕೃತಮಾತ್ರಾಪ್ರಾತಿಕಕ್ಕೋಲಸೈನ್ಯೈಃ
ಶಿಶಿರ ಸರಸಮೋಽಯಂ ಗಂಧಪತ್ರಂ ವಿದಧ್ಯಾತ್ ॥ ೪೫ ॥

ನಿಹಿತಮಿದಮನರ್ಘಂ ಕರ್ಣಪತ್ರಂಯುವತ್ಯಾಃ
ಶಮಯತಿ ವಿವಿಧಾನಿ ಶ್ರೋತ್ರಪಾಲೀಗದಾನಿ ।

---

ಚೂರ್ಣಮಾಡಿ, ಅದನ್ನು ಗಂಜಳದಲ್ಲಿ ನೆನೆಸಿ ಮೂರು ದಿವಸ ಹಾಗೆಯೇ ಇಟ್ಟಿದ್ದು, ಬಳಿಕ ಅದನ್ನು ಬಿಲ್ಲೆ ಬಿಲ್ಲೆಯಾಗಿ ಮಾಡಿ ಒಣಗಿಸಿ ಅದರ ಒಂದೊಂದು ಬಿಲ್ಲೆಯನ್ನೂ ಅಡಿಕೆಯಂತೆ ಬಾಯಿಗೆ ಹಾಕಿಕೊಂಡರೆ ಮುಖವು ಸುಗಂಧದಿಂದ ಕೂಡಿರುತ್ತದೆ. ಈ ಹುಡಿಗೆ ಜಾಯಿಪತ್ರೆ, ಅಳಲೆಕಾಯಿ, ಸಕ್ಕರೆಗಳನ್ನು ಸಮಸಮನಾಗಿ ಬೆರಸಿ ಬಿಲ್ಲೆ ಮಾಡಿ ಇಟ್ಟುಕೊಂಡು ಬಾಯಿಗೆ ಹಾಕಿಕೊಂಡರೆ, ತಾಂಬೂಲ ಹಾಕಿಕೊಂಡಂತೆ ಬಾಯಿಯು ಬಹು ಸುವಾಸನೆಯಿಂದ ಕೂಡಿರುತ್ತದೆ.

೪೫. ಶುಂಠಿ, ಮೆಣಸು, ಹಿಪ್ಪಲಿ, ಅಳಲೇಕಾಯಿ, ನೆಲ್ಲಿಕಾಯಿ, ಲಾಮಂಚ, ಚಂಗಲಕೋಷ್ಟ, ಜಾಯಿಪತ್ರೆಗಳನ್ನೆಲ್ಲಾ ಸರಿಸರಿಯಾಗಿ ಬೆರಸಿ ಪುಡಿಮಾಡಿ ಲಾಮಂಚದ ನೀರಿನಿಂದ ಕಲಸಿ ಉಂಡೆಮಾಡಿ ಒಣಗಿಸಿಟ್ಟುಕೊಂಡು ಮಾತ್ರೆಮಾಡಿ ತಿನ್ನುತ್ತ ಬಂದರೆ ಬಹಳ ತಂಪಾಗಿಯೂ ಹಿತವಾಗಿಯೂ ಇರುತ್ತದೆ.

೪೬. ಇಂತು ಸಿದ್ಧಗೊಳಿಸಲ್ಪಟ್ಟ ಗುಳಿಗೆಗಳನ್ನು ಹೆಂಗಸರು ತಮ್ಮ ಕಿವಿಗಳಲ್ಲಿ ಕರ್ಣಪತ್ರದಂತೆ ಇಟ್ಟುಕೊಂಡರೆ, ಎಂತಹ ಕರ್ಣರೋಗವಾಗಲೀ ಹೇಳಹೆಸರಿಲ್ಲದಂತೆ ಹುಟ್ಟಡಗಿಹೋಗುತ್ತದೆ. ಈ ಮಾತ್ರೆಗಳು ತಿನ್ನುವುದಕ್ಕೂ ಸಹ ಹಿತವಾಗಿಯೂ ತಂಪಾಗಿಯೂ ಇರುತ್ತದೆ. ಇಂತಹ ಮಾತ್ರೆಯನ್ನು ಸೇವಿಸಿದ ಕಾಮಿನಿಯು

**ಅಪರಮಪಿ ಚ ಯಾವತ್ಕಾಮ ಮಾನೋದಮುತ್ತುಂ**
**ಭ್ರಮದಲಿಪಟಲೇನ ವ್ಯಾಪ್ಯತೇ ವಕ್ತ್ರಭಾಗಃ** ॥ ೪೬ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯ ಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರೋಪಾಖ್ಯಾನೇ ಗಂಧಯುಕ್ತಿರ್ನಾಮ ಚತುಷ್ಷಷ್ಟಿತಮೋಽಧ್ಯಾಯಃ**

---

ಮುಖವಾದರೋ ಬಹಳ ಸುಗಂಧಪರಿಪೂರಿತವಾಗಿ ಘಮಿಘಮಿಸುತ್ತಾ ಸುತ್ತಿ ಸುತ್ತಿ ಬಂದು ಮುಖದಮೇಲೆ ಎರಗುತ್ತಿರುವ ಭ್ರಮರಗಳ ಗುಂಪಿನಿಂದ ವ್ಯಾಪ್ತವಾಗಿ ಹೋಗುವುದು, ಕೇಳಯ್ಯಾ ! ಪರಶುರಾಮ ! ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ
ದ್ವಿತೀಯ ಖಂಡದಲ್ಲಿ ಗಂಧಯುಕ್ತಿಯೆಂಬ ಹೆಸರಿನ
ಅರವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಪಂಚಷಷ್ಟಿತಮೋಽಧ್ಯಾಯಃ

### ಪುಷ್ಕರ ಉವಾಚ

ಏವಂ ಕುರ್ಯಾತ್ಸದಾ ಸ್ತ್ರೀಣಾಂ ರಕ್ಷಣಂ ಪೃಥಿವೀಪತಿಃ ।
ನ ಚೈಮಾಂ ವಿಶ್ವಸೇಜ್ಜಾತುಪುತ್ರಮಾತ್ರಾವಶೇಷತಃ ॥ ೧ ॥

ನ ಸ್ವಪೇತ್ಸ್ತ್ರೀಗೃಹೇ ರಾತ್ರೌ ವಿಶ್ವಾಸಂ ಕೃತ್ರಿಮಂ ಭಜೇತ್ ।
ರಾಜಪುತ್ರಸ್ಯ ರಕ್ಷಾ ಚ ಕರ್ತವ್ಯಾ ಪೃಥಿವೀಕ್ಷಿತಾ ॥ ೨ ॥

ಆಚಾರ್ಯೈಶ್ಚಾಸ್ಯ ಕರ್ತವ್ಯಂ ನಿತ್ಯಂ ಯುಕ್ತ್ಯೈವ ರಕ್ಷಣಂ ।
ಧರ್ಮಾರ್ಥಕಾಮಮೋಕ್ಷಾಣಾಂ ಧನುರ್ವೇದಂ ಚ ಶಿಕ್ಷಯೇತ್ ॥ ೩ ॥

### ಅರವತ್ತೈದನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಪರಶುರಾಮ ! ಕೇಳು. ಮೇಲೆ ಹೇಳಿದಂತೆ ಇದೇ ವಿಧವಾದ ಭೋಗ್ಯವಸ್ತುಗಳನ್ನು ಒದಗಿಸಿಕೊಡುತ್ತಾ ಸ್ತ್ರೀಯರನ್ನು ಮಹಾರಾಜನಾದವನು, ಪುತ್ರನಿರ್ವಿಶೇಷವಾಗಿ ಸಂರಕ್ಷಿಸಿಕೊಂಡಿರಬೇಕು. ಆದರೆ ಹೆಂಗಸರ ವಿಷಯದಲ್ಲಿ ಯಾವಾಗಲೂ ನಂಬಿಕೆಯನ್ನು ಖಂಡಿತವಾಗಿ ಇಡಬಾರದು.

೨. ರಾತ್ರಿ ವೇಳೆಯಲ್ಲಿ ಹೆಂಗಸರ ಮನೆಯಲ್ಲಿ ಮಲಗಬಾರದು. ಅವರ ವಿಷಯದಲ್ಲಿ ಕೃತ್ರಿಮವಾದ ವಿಶ್ವಾಸವನ್ನಿಡಬೇಕು. ಮಹಾರಾಜನಾದವನು ರಾಜಪುತ್ರರನ್ನು ಬಹಳ ಜಾಗರೂಕತೆಯಿಂದ ಕಾಪಾಡಿಕೊಂಡಿರಬೇಕು.

೩. ರಾಜಪುತ್ರನ ವಿಷಯದಲ್ಲಿ ಅನುಸರಿಸಬೇಕಾದ ನಿಯಮಗಳೇನೆಂದರೆ:- ರಾಜಪುತ್ರನನ್ನು ಉಪಾಧ್ಯಾಯರು ಸರ್ವದಾ ಸಂರಕ್ಷಿಸುತ್ತಾ ಬಹು ಯುಕ್ತಿಯಿಂದ ಅವನಿಗೆ ವಿದ್ಯೆಗಳನ್ನು ಕಲಿಸಬೇಕು. ಧರ್ಮಾರ್ಥಕಾಮಮೋಕ್ಷಹೇತುಗಳಾದ ವಿದ್ಯೆಗಳನ್ನೂ ಎಲ್ಲಕ್ಕಿಂತ ಮುಖ್ಯವಾಗಿ ಧನುರ್ವಿದ್ಯೆಯನ್ನೂ ಕಲಿಸಬೇಕು.

ರಥೇಽಶ್ವೇ ಕುಂಜರೇ ಚೈನಂ ವ್ಯಾಯಾಮಂ ಕಾರಯೇತ್ಸದಾ ।
ಶಿಲ್ಪಾನಿ ಶಿಕ್ಷಯೇಚ್ಚೈವಮಾಪ್ತೈರ್ಮಿಥ್ಯಾ ಪ್ರಿಯಂವದೈಃ ॥ ೪ ॥

ಶರೀರರಕ್ಷಾ ವ್ಯಾಜೇನ ರಕ್ಷಿಣೋಽಸ್ಯ ನಿಯೋಜಯೇತ್ ।
ನಚಾಸ್ಯ ಸಂಗೋ ದಾತವ್ಯಃ ಕ್ರುದ್ಧಲುಬ್ಧ ವಿಮಾನಿತೈಃ ॥ ೫ ॥

ತಥಾ ಚ ವಿನಯೇದೇನಂ ಯಥಾ ಯೌವನಗಂ ಸುಖೇ ।
ವಿಷಯೈರ್ಯೈರ್ನ ಕೃಷ್ಯೇತ ಸತಾಂ ಮಾರ್ಗಾತ್ಸುದುರ್ಗಮಾತ್ ॥ ೬ ॥

ಗುಣಧಾನಂ ನ ಶಕ್ಯಂ ತು ಯಸ್ಯ ಕರ್ತುಂ ಸ್ವಭಾವತಃ ।
ಬಂಧನಂ ತಸ್ಯ ಕರ್ತವ್ಯಂ ಗುಪ್ತದೇಶೇ ಸುಖಾನ್ವಿತಂ ॥ ೭ ॥

---

೪. ರಥಗಳಲ್ಲೂ, ಅಶ್ವಗಳಲ್ಲೂ, ಆನೆಗಳಲ್ಲೂ ವ್ಯಾಯಾಮ ಕ್ರೀಡೆ ಯಾಡುವುದನ್ನು ಕಲಿಸಬೇಕು. ಶಿಲ್ಪ ವಿದ್ಯೆಯನ್ನು ಕಲಿಸಬೇಕು. ಸುಳ್ಳುಸುಳ್ಳಾಗಿ ಪ್ರಿಯವಚನಗಳನ್ನಾಡುವ ಸ್ನೇಹಿತರ ಜತೆಗೆ ಸೇರಿಸಬೇಕು.

೫. ರಾಜಪುತ್ರನ ಶರೀರರಕ್ಷಣೆಯನ್ನು ನೆಪಮಾಡಿಕೊಂಡು ಅಂಗರಕ್ಷಕರನ್ನು ನೇಮಿಸಬೇಕು. ಆದರೆ ಆ ಅಂಗರಕ್ಷಕರು ಕ್ರೋಧ, ದರ್ಪ, ಲೋಭಾದಿಗಳಿಂದ ಕೂಡಿದವರಾಗಿದ್ದರೆ ಅಂತಹವರ ಸಹವಾಸದಿಂದ ರಾಜಪುತ್ರನನ್ನು ಬಿಡಿಸಿಬಿಡಬೇಕು.

೬. ರಾಜಪುತ್ರನ ಶಿಕ್ಷಕರಾದ ಉಪಾಧ್ಯಾಯರೆಲ್ಲರೂ ವಿನಯಭಾವದಿಂದಿದ್ದು ಕೊಂಡೇ ಪಾಠಪ್ರವಚನಗಳನ್ನು ನಡೆಸಬೇಕೇ ಹೊರತು ಅನ್ಯಥಾ ವರ್ತಿಸಕೂಡದು. ಈ ಪ್ರಕಾರವಾಗಿ ಬಾಲ್ಯ ಕಳೆದು ಪ್ರಾಯಸಮರ್ಥನಾಗುವವರಿವಿಗೂ ರಾಜಪುತ್ರನಿಗೆ ವಿದ್ಯಾಭ್ಯಾಸಮಾಡುವ ಕಾಲದಲ್ಲಿ ಯಾವ ವಿಧವಾದ ವಿಷಯಗಳ ಕಡೆಗೂ ರಾಜಪುತ್ರನ ಮನಸ್ಸು ತಿರುಗದಂತೆ ಎಚ್ಚರದಿಂದ ನೋಡಿಕೊಳ್ಳಬೇಕು. ಸನ್ಮಾರ್ಗಶಿಕ್ಷಣವೆಂಬುದು ಬಹು ದುರ್ಗಮವಾದುದಾದರೂ ಆ ಸನ್ಮಾರ್ಗದಾಯಕವಾದ ಶಿಕ್ಷೆಯನ್ನು ಕೊಡ ಬೇಕು.

೭. ಒಳ್ಳೇ ಗುಣಗಳನ್ನು ಮಕ್ಕಳಿಗೆ ಕಲಿಸಬೇಕಾದರೆ ಬಹಳ ಕಷ್ಟ. ಸ್ವಭಾವವಾಗಿ ಒಳ್ಳೇ ಗುಣ ಮಕ್ಕಳಿಗಿರುವುದಿಲ್ಲ. ಒಳ್ಳೇ ಗುಣವು ಇವನಲ್ಲಿಲ್ಲ, ಕೆಟ್ಟ ಚಾಳಿಯೇ ಹೆಚ್ಚಾಗಿದೆಯೆಂದು ತಿಳಿದುಬಂದೊಡನೆಯೇ ಆ ಮಗುವನ್ನು ಬಹು ರಹಸ್ಯವಾದ ಪ್ರದೇಶದಲ್ಲಿ ಸುಖಸಾಮಗ್ರಿಗಳಿಂದ ಏಕಾಕಿಯಾಗಿ ನಿರ್ಬಂಧದಲ್ಲಿಟ್ಟು ಶಿಕ್ಷೆಕೊಡಬೇಕು. ಯಾವ ಹುಡುಗರ ಜತೆಗೂ ಅವನನ್ನು ಸೇರಿಸಕೂಡದು.

**ಅವಿನೀತ ಕುಮಾರಂ ಹಿ ಕುಲಮಾಶು ವಿಶೀರ್ಯತೇ ।**
**ಅಧಿಕಾರೇಷು ಸರ್ವೇಷು ವಿನೀತಂ ವಿನಿಯೋಜಯೇತ್ ॥ ೮ ॥**

**ಆದೌ ಸ್ವಲ್ಪೇ ತತಃ ಪಶ್ಚಾತ್ಕ್ರಮೇಣಾಥ ಮಹತ್ಸ್ವಪಿ ।**
**ಮೃಗಯಾಪಾನಮಕ್ಷಾಂಶ್ಚ ವರ್ಜಯೇಚ್ಚ ಮಹೀಪತಿಃ ॥ ೯ ॥**

**ಏತಾನ್ಸಂಸೇವಮಾನಾಸ್ತು ವಿನಷ್ಟಾಃ ಪೃಥಿವೀಕ್ಷಿತಃ ।**
**ಬಹವೋ ಭೃಗುಶಾರ್ದೂಲ ಯೇಷಾಂ ಸಂಖ್ಯಾ ನ ವಿದ್ಯತೇ ॥ ೧೦ ॥**

**ದಿವಾಸ್ವಾಪಂ ವೃಥಾ ವಾದಂ ವಿಶೇಷೇಣ ವಿವರ್ಜಯೇತ್ ।**
**ವಾಕ್ಪಾರುಷ್ಯಂ ನ ಕರ್ತವ್ಯಂ ದಂಡಪಾರುಷ್ಯಮೇವ ಚ ॥ ೧೧ ॥**

---

೮. ಅವಿನೀತನಾದ ದುಷ್ಪುತ್ರನು ವಂಶದ ಮರ್ಯಾದೆಯನ್ನೇ ಹಾಳುಮಾಡಿ ಬಿಡುತ್ತಾನೆ. ಮಕ್ಕಳ ಮಾತು ಹಾಗಿರಲಿ. ರಾಜನಾದವನು ತನ್ನ ಬಳಿ ಕೆಲಸ ಮಾಡತಕ್ಕ ಅಧಿಕಾರಿಗಳನ್ನು ನೇಮಿಸುವಾಗಲೂ ಸಹ ವಿನಯಸಂಪತ್ತಿನಿಂದ ಕೂಡಿದ ಸಜ್ಜನರನ್ನೇ ಗೊತ್ತುಮಾಡಬೇಕು.

೯. ವೈಷಯಿಕ ವ್ಯಸನಗಳೇನಾದರೂ ಇದ್ದರೆ ಮೊದಲು ಮೊದಲು ಅದು ಸ್ವಲ್ಪವಾಗಿರುವಂತೆ ತೋರಿ, ಅದು ಕೊನೆಗೆ ಮಹತ್ತಾಗಿ ಬೆಳೆದುಹೋಗುವುದರಿಂದ ರಾಜನಾದವನು ಬೇಟೆ, ಕುಡಿತ, ಜೂಜುಗಳನ್ನು ಸಂಪೂರ್ಣವಾಗಿ ತ್ಯಾಗವೇ ಮಾಡಿ ಬಿಡಬೇಕು.

೧೦. ಆ ರೀತಿ ದುರ್ವ್ಯಸನಗಳನ್ನು ಬಿಡದೆ ಈ ವ್ಯಸನಗಳನ್ನು ವಿಶೇಷವಾಗಿ ಹತ್ತಿಸಿಕೊಂಡ ಅನೇಕ ಮಂದಿ ರಾಜರು ಹಾಳಾಗಿಹೋಗಿರುತ್ತಾರೆ. ಪರಶುರಾಮ! ಕೇಳು. ಈ ರೀತಿ ನಾಶವಾಗಿ ಹೋದ ರಾಜರ ಸಂಖ್ಯೆಯನ್ನು ಎಣಿಸುವುದೂ ಸಹ ಬಹು ಕಷ್ಟ.

೧೧. ಹಗಲು ಮಲಗಿಕೊಂಡು ನಿದ್ದೆ ಮಾಡಬಾರದು. ವ್ಯರ್ಥವಾಗಿ ಇನ್ನೊಬ್ಬರ ಸಂಗಡ ಜಗಳವಾಡಬಾರದು. ಕಠಿನವಾಗಿ ಯಾರೊಡನೆಯೂ ಮಾತನಾಡಬಾರದು. ದಂಡಪ್ರಯೋಗ ಮಾಡ (ಹೊಡೆಯ) ಬಾರದು.

**ಪರೋಕ್ಷನಿಂದಾಚ ತಥಾ ವರ್ಜನೀಯಾ ಮಹೀಕ್ಷಿತಾ ।**
**ಅರ್ಥಸ್ಯ ದೂಷಣಂ ರಾಮ ದ್ವಿಪ್ರಕಾರಂ ವಿವರ್ಜಯೇತ್ ॥ ೧೨ ॥**

**ಅರ್ಥಾನಾಂ ದೂಷಣಂ ಚೈಕಂ ತಥಾ ಚಾರ್ಥೇನ ದೂಷಣಂ ।**
**ಪ್ರಾಕಾರಾಣಾಂ ಸಮುಚ್ಛೇದೋ ದುರ್ಗಾದೀನಾಂ ಸಮುಕ್ರಿಯಾ ॥ ೧೩ ॥**

**ಅರ್ಥಾನಾಂ ದೂಷಣಂ ಪ್ರೋಕ್ತಂ ವಿಪ್ರಕೀರ್ಣತ್ವಮೇವ ಚ ।**
**ಅದೇಶಕಾಲೇ ಯದ್ದಾನಮಪಾತ್ರೇ ದಾನಮೇವ ಚ ॥ ೧೪ ॥**

**ಅರ್ಥೈಸ್ತು ದೂಷಣಂ ಪ್ರೋಕ್ತಮಸತ್ಕರ್ಮಪ್ರವರ್ತನಂ ।**
**ಕಾಮಃ ಕ್ರೋಧೋ ಮದೋ ಮಾನಂ ಲೋಭೋ ಹರ್ಷಸ್ತಥೈವ ॥ ೧೫ ॥**

---

೧೨. ಮಹಾರಾಜನಾದವನು ಯಾರನ್ನೂ ಪರೋಕ್ಷದಲ್ಲಿ (ಮರೆಯಲ್ಲಿ) ನಿಂದಿಸಬಾರದು. ಅರ್ಥವಿಷಯವಾದ ದೂಷಣವನ್ನು ಎರಡು ವಿಧದಿಂದಲೂ ಬಿಟ್ಟುಬಿಡಬೇಕು.

೧೩. ಆ ಎರಡು ಬಗೆಯ ವಿವರವೇನೆಂದರೆ ;—ಅರ್ಥವನ್ನು ನಾವು ದೂಷಣೆ ಮಾಡುವುದೊಂದು. ಅರ್ಥದಿಂದ ನಾವೇ ದೂಷಿಸಲ್ಪಡತಕ್ಕದ್ದೊಂದು. ಹೀಗೆ ಎರಡು ವಿಧ ದೂಷಣೆಯಿಂದಲೂ ದೂರವಾಗಿರಬೇಕು.

೧೪. ಈಗ ಇವೆರಡರ ವಿವರಣವನ್ನು ಹೇಳುತ್ತಾರೆ :—ಅರ್ಥವನ್ನು ನಾವು ದೂಷಣಮಾಡುವುದೆಂದರೆ, ಕೋಟೆಗಳನ್ನು ಕೆಡವಿಸಿಬಿಡುವುದು, ಕಂದಕಗಳನ್ನೂ ದುರ್ಗಗಳನ್ನೂ ನೆಲಸಮಮಾಡಿಬಿಡುವುದು, ಇತ್ಯಾದಿ ಕೆಲಸಗಳು ಅರ್ಥದ ದೂಷಣೆಯೆನಿಸಿಕೊಳ್ಳುವುದು.

೧೫. ಅರ್ಥದಿಂದ ದೂಷಿಸಲ್ಪಡುವ ಕಾರ್ಯಗಳಾವುವೆಂದರೆ ;—ದೇಶವನ್ನೂ, ಕಾಲವನ್ನೂ, ಪಾತ್ರವನ್ನೂ ವಿವೇಚಿಸದೆ ಅಪಾತ್ರ (ಅಯೋಗ್ಯ) ನಿಗೆ ದಾನವನ್ನು ಕೊಡೋಣವೇ ಮುಂತಾದುವು. ಅಸತ್ಕರ್ಮ ಪ್ರವರ್ತಕಗಳೆನಿಸಿಕೊಳ್ಳುವುದಾದುದರಿಂದ, ಇದನ್ನು ಅರ್ಥದಿಂದ ದೂಷಿತವಾದ ಕರ್ಮವೆಂದು ಹೇಳಲಾಗಿದೆ.

**ಜೇತವ್ಯಮರಿಷಡ್ವರ್ಗಮಾಹುಸ್ತು ಪೃಥಿವೀಕ್ಷಿತಾಂ ।**
**ಏತೇಷಾಂ ವಿಜಯಂ ಕೃತ್ವಾ ಕಾರ್ಯೋ ಭೃತ್ಯಜಯಸ್ತತಃ ॥ ೧೬ ॥**

**ಕೃತ್ವಾ ಭೃತ್ಯಜಯಂ ರಾಜಾ ಪೌರಜಾನಪದಾಂಜಯೇತ್ ।**
**ಕೃತ್ವಾ ಚ ವಿಜಯಂ ತೇಷಾಂ ಶತ್ರೂಂರ್ಬಾಹ್ಯಾಂಸ್ತತೋಜಯೇತ್ ॥ ೧೭ ॥**

**ಬಾಹ್ಯಾಶ್ಚ ತ್ರಿವಿಧಾ ಜ್ಞೇಯಾಸ್ತುಲ್ಯಾನನ್ತರಕೃತ್ರಿಮಾಃ ।**
**ಗುರವಸ್ತೇ ಯಥಾಪೂರ್ವಂ ತೇಷು ಯತ್ನಃ ಸದಾ ಭವೇತ್ ॥ ೧೮ ॥**

**ಪಿತೃಪೈತಾಮಹಂ ಮಿತ್ರಮಾಶ್ರಿತಂಚ ತಥಾ ರಿಪೋಃ ।**
**ಕೃತ್ರಿಮಂ ಚ ಮಹಾಭಾಗ ಮಿತ್ರಂ ತ್ರಿವಿಧಮುಚ್ಯತೇ ॥ ೧೯ ॥**

---

೧೬-೧೭. ಇನ್ನು ಅರಿಷಡ್ವರ್ಗಗಳ ವಿಚಾರ:—ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೂ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಆರು ವಿಧ ಅಂತಶ್ಶತ್ರುಗಳು ಸರ್ವದಾ ವಾಸಮಾಡಿಕೊಂಡಿರುತ್ತವೆ. ಈ ಅರಿಷಡ್ವರ್ಗಗಳನ್ನು ರಾಜನಾದವನು ಮೊದಲು ಜಯಿಸಬೇಕು. ಈ ರೀತಿ ಮೊಟ್ಟಮೊದಲು ಈ ಆರು ಮಂದಿ ಶತ್ರುಗಳನ್ನು ಗೆದ್ದ ಬಳಿಕ ಭೃತ್ಯರನ್ನು ಜಯಿಸಬೇಕು. ಭೃತ್ಯವರ್ಗವನ್ನು ಜಯಿಸಿ ಸ್ವಾಧೀನಪಡಿಸಿಕೊಂಡ ಬಳಿಕ ತನ್ನ ಊರಿನಲ್ಲೂ ತನ್ನ ದೇಶದಲ್ಲೂ ಇರುವ ಸಕಲ ಪ್ರಜೆಗಳನ್ನೂ ಸ್ವಾಧೀನಮಾಡಿಕೊಂಡು ಆ ಬಳಿಕ ತನ್ನ ರಾಜ್ಯದ ಹೊರಗಿರುವ ಶತ್ರುಗಳನ್ನು ಜಯಿಸಬೇಕು.

೧೮. ಈ ಹೊರಗಿನ ಶತ್ರುಗಳು ಮೂರು ವಿಧ. ಸಮಾನರೆಂದೂ, ಅಂತರರೆಂದೂ, ಕೃತ್ರಿಮರೆಂದೂ ಅವರನ್ನು ಹೇಳಬಹುದು. ಮೇಲೆ ಹೇಳಿದಂತೆ ಇವರನ್ನು ಜಯಿಸುವ ಪ್ರಯತ್ನವನ್ನು ಮಾಡಬೇಕು.

೧೯. ಇದೇ ಮೇರೆ ಮೂರು ವಿಧ ಮಿತ್ರರಿರುವರು. ತಂದೆ, ತಾತನ ಕಾಲದಿಂದ ಅವರನ್ನಾಶ್ರಯಿಸಿಕೊಂಡಿದ್ದ ಮಿತ್ರರ ಗುಂಪೊಂದು, ಶತ್ರುಪಕ್ಷವನ್ನಾಶ್ರಯಿಸಿಕೊಂಡು ಅವರ ಕಡೆಯಿಂದ ಜೀವಿಸುತ್ತಿದ್ದ ಮಿತ್ರರ ಗುಂಪೊಂದು, ಮಿತ್ರರೆಂದು ನಟಿಸುವ ಹೊಟ್ಟೆಹೊರಕ ಮಿತ್ರರ ಗುಂಪೊಂದು; ಇದೇ ತ್ರಿವಿಧ ಮಿತ್ರಲಕ್ಷಣವು.

**ತಥಾಽಪಿಚ ಗುರುಃ ಪೂರ್ವಂ ಭವೇತ್ತತ್ರಾಪಿ ಚಾಶ್ರಿತಂ ।**
**ಸ್ವಾಮ್ಯಮಾತ್ಯಜನಪದಾ ಬಲಂ ದುರ್ಗಂ ತಥೈವ ಚ ॥ ೨೦ ॥**

**ಕೋಶೋ ಮಿತ್ರಂ ಚ ಧರ್ಮಜ್ಞ ಸಪ್ತಾಂಗಂ ರಾಜ್ಯಮುಚ್ಯತೇ ।**
**ಸಪ್ತಾಂಗಸ್ಯಾಪಿ ರಾಜ್ಯಸ್ಯ ಮೂಲಂ ಸ್ವಾಮೀ ಪ್ರಕೀರ್ತಿತಃ ॥ ೨೧ ॥**

**ತನ್ಮೂಲತ್ವಾತ್ತಥಾಽಂಗಾನಾಂ ಸ ತು ರಕ್ಷ್ಯಃ ಪ್ರಯತ್ನತಃ ।**
**ಷಡಂಗರಕ್ಷಾ ಕರ್ತವ್ಯಾ ತೇನ ಚಾಪಿ ಪ್ರಯತ್ನತಃ ॥ ೨೨ ॥**

**ಅಂಗೇಭ್ಯೋ ಯಸ್ತ್ವಥೈಕಸ್ಯ ದ್ರೋಹಮಾಚರತೇಽಲ್ಪಧೀಃ ।**
**ವಧಸ್ತಸ್ಯ ತು ಕರ್ತವ್ಯಃ ಶೀಘ್ರಮೇವ ಮಹೀಕ್ಷಿತಾ ॥ ೨೩ ॥**

**ನ ರಾಜ್ಞಾ ಮೃದುನಾ ಭಾವ್ಯಂ ಮೃದುರ್ಹಿ ಪರಿಭೂಯತೇ ।**
**ನ ಭಾವ್ಯಂ ದಾರುಣೇನಾಪಿ ತೀಕ್ಷ್ಣಾದುದ್ವಿಜತೇ ಜನಃ ॥ ೨೪ ॥**

---

೨೦. ಇಷ್ಟಾದಾಗ್ಯೂ ಮೊದಲು ಗುರುವನ್ನು ಪ್ರಥಮಾಶ್ರಿತನನ್ನಾಗಿ ಭಾವಿಸಬೇಕು. ಇನ್ನು ರಾಜ್ಯದ ಸಪ್ತಾಂಗ (ಏಳು ಅವಯವ) ಯಾವುದೆಂಬುದನ್ನು ವಿವರಿಸುತ್ತೇನೆ. ಸ್ವಾಮಿ-ಅಮಾತ್ಯ-ಸುಹೃತ್-ಕೋಶ- ರಾಷ್ಟ್ರ-ದುರ್ಗ-ಬಲ, ಇವೇ ಸಪ್ತಾಂಗಗಳು.

೨೧-೨೨. ಈ ಸಪ್ತಾಂಗಯುಕ್ತವಾದ ರಾಜ್ಯಕ್ಕೆ ದೊರೆಯೇ ಮೂಲನೆಂದು (ಸ್ವಾಮಿ) ತಿಳಿಯಬೇಕು. ಎಲ್ಲ ಅಂಗಗಳಿಗಿಂತ ಸ್ವಾಮಿಯೇ ಮುಖ್ಯನಾದ್ದರಿಂದ ಈ ಸ್ವಾಮಿಯನ್ನು ಚೆನ್ನಾಗಿ ಕಾಪಾಡಿಕೊಳ್ಳಬೇಕು. ಈ ಸ್ವಾಮಿಯೂ ಸಹ ಇದೇ ಮೇರೆ ಉಳಿದ ಇನ್ನಾರು ಅಂಗ (ಷಡಂಗ) ಗಳನ್ನೂ ವಿಶೇಷಪ್ರಯತ್ನದಿಂದ ಕಾಪಾಡಿಕೊಳ್ಳಬೇಕು.

೨೩. ಈ ವಿಧವಾದ ರಾಜ್ಯಸಪ್ತಾಂಗಗಳೊಳಗೆ ಯಾವುದೊಂದಕ್ಕಾದರೂ ಯಾವನಾದರೂ ಅಲ್ಪಮನುಷ್ಯನು ದ್ರೋಹಮಾಡುತ್ತಿರುವನೆಂದು ತಿಳಿದುಬಂದೊಡನೆಯೇ ಮಹಾರಾಜನು ಅವನನ್ನು ಬಲುಬೇಗ ವಧೆ ಮಾಡಿಬಿಡಬೇಕು.

೨೪. ಮಹಾರಾಜನು ಯಾವಾಗಲೂ ಯಾವ ಜನರನ್ನಾದರೂ ಮೃದುವಾಗಿರುವವರೆಂದು ಭಾವಿಸಕೂಡದು. ಹಾಗೆ ಅವರನ್ನು ನಂಬಿಬಿಟ್ಟರೆ ತೊಂದರೆಗಳಿಗೊಳಗಾಗುವ ಸಂಭವವೂ ಉಂಟು. ಮರದ ದೊಣ್ಣೆಯು ಮುಟ್ಟುವುದಕ್ಕೆ ಮೆತ್ತಗಿರುತ್ತದೆ. ಅದರ ಏಟು ಮೈಮೇಲೆ ಬಿದ್ದರೆ ಆಗ ತಾನೇ ಅದರ ಕಾಠಿಣ್ಯವು ಹೊರಪಡುತ್ತದೆ.

ಕಾಲೇ ಮೃದುರ್ಯೋ ಭವತಿ ಕಾಲೇ ಭವತಿ ದಾರುಣಃ ।
ರಾಜಾಲೋಕದ್ವಯಾಪೇಕ್ಷೀ ತಸ್ಯ ಲೋಕದ್ವಯಂ ಭವೇತ್ ॥ ೨೫ ॥

ಭೃತ್ಯೈಃ ಸಹ ಮಹೀಪಾಲಃ ಪರಿಹಾಸಂ ವಿವರ್ಜಯೇತ್ ।
ಭೃತ್ಯಾಃ ಪರಿಭವನ್ತೀಹ ನೃಪಂ ಹರ್ಷಲಸತ್ಕಥಂ ॥ ೨೬ ॥

ವ್ಯಸನಾನಿ ಚ ಸರ್ವಾಣಿ ಭೂಪತಿಃ ಪರಿವರ್ಜಯೇತ್ ।
ಲೋಕಸಂಗ್ರಹಣಾರ್ಥಾಯ ಕೃತಕವ್ಯಸನೀ ಭವೇತ್ ॥ ೨೭ ॥

ಶೌಂಡೀರ್ಯಸ್ಯ ನರೇಂದ್ರಸ್ಯ ನಿತ್ಯಮುತ್ಕ್ಷಿಪ್ತಚೇತಸಃ ।
ಜನೋ ವಿರಾಗಮಾಯಾತಿ ಸದಾ ದುಃಸೇವ್ಯಭಾವತಃ ॥ ೨೮ ॥

---

೨೫. ಮೊದಲು ಮೊದಲು ಮೃದುವಾಗಿದ್ದ ಪದಾರ್ಥವು ಕಾಲಾನುಸಾರವಾಗಿ ದಾರುಣವಾಗಿ ಪರಿಣಮಿಸುತ್ತದೆ. ಲೋಕದ್ವಯವನ್ನು ಅಪೇಕ್ಷಿಸುವ ರಾಜನು ಲೋಕದ್ವಯಗಳ ಸುಖಗಳನ್ನೂ ಅನುಭವಿಸುವನು.

೨೬. ಮಹಾರಾಜನು ಭೃತ್ಯಜನದೊಡನೆ ಯಾವಾಗಲೂ ಪರಿಹಾಸ್ಯಕ್ಕೆ ಹೋಗಬಾರದು. ಹಾಗೆ ಅವರೊಡನೆ ಸಲಿಗೆ ಕೊಟ್ಟು ಪರಿಹಾಸ್ಯಕ್ಕಾರಂಭಿಸಿದರೆ ಅವರು, ಮಹಾರಾಜನು ಸಂತೋಷದಿಂದ ನಗುತ್ತಾ ಮಾತನಾಡುತ್ತಾ ಇದ್ದ ವೇಳೆಯಲ್ಲಿ ತಿರಸ್ಕಾರಸೂಚಕವಾದ ಮಾತುಗಳನ್ನಾಡಿಬಿಡುವರು.

೨೭. ಮಹಾರಾಜನು ಸಕಲ ವಿಧವಾದ ವ್ಯಸನಗಳನ್ನೂ ಬಿಟ್ಟುಬಿಡಬೇಕು. ಆದರೆ ಲೋಕಸಂಗ್ರಹಕ್ಕಾಗಿ (ಜನಮೆಚ್ಚಿಗೆ) ಕೃತಕ ವ್ಯಸನಿಯಾಗಿ ಕಾಣಿಸಿಕೊಳ್ಳಬೇಕು

೨೮. ಮಹಾಪರಾಕ್ರಮಶಾಲಿಯಾದ ಮಹಾರಾಜನು ಪ್ರತಿದಿನವೂ ಜನರನ್ನು ಕಂಡಾಗ ಸಿಡಿಗುಟ್ಟುತ್ತಾ ಹುಬ್ಬುಗಂಟುಹಾಕಿಕೊಳ್ಳುತ್ತಾ ಇದ್ದರೆ ಜನರಿಗೆ ಅಂತಹ ರಾಜನ ವಿಷಯದಲ್ಲಿ ಬಹಳ ವೈರಾಗ್ಯ (ಬೇಜಾರು) ವುಂಟಾಗುವುದು. ಜನರಾರೂ ಅವನ ಹತ್ತಿರ ಸೇರಲು ಹೆದರುವರು.

**ಸ್ಮಿತಪೂರ್ವಾಭಿಭಾಷೀ ಸ್ಯಾತ್ಸರ್ವಸ್ಯೈವ ಮಹೀಪತಿಃ ।**
**ಮಧ್ಯೇಷ್ವಪಿ ಮಹಾಭಾಗಃ ಭ್ರುಕುಟಿಂ ನ ಸಮಾಚರೇತ್ ॥ ೨೯ ॥**

**ಭಾವ್ಯಂ ಧರ್ಮಭೃತಾಂ ಶ್ರೇಷ್ಠ ಸ್ಥೂಲಲಕ್ಷ್ಯೇಣ ಭೂಭುಜಾ ।**
**ಸ್ಥೂಲಲಕ್ಷಸ್ಯ ವಶಗಾ ಸರ್ವಾಭವತಿ ಮೇದಿನೀ ॥ ೩೦ ॥**

**ಅದೀರ್ಘಸೂತ್ರಶ್ಚ ಭವೇತ್ಸರ್ವಕರ್ಮಸು ಪಾರ್ಥಿವಃ ।**
**ದೀರ್ಘಸೂತ್ರಸ್ಯ ನೃಪತೇಃ ಕರ್ಮಹಾನಿರ್ಧ್ರುವಂಭವೇತ್ ॥ ೩೧ ॥**

**ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇ ಚ ಕರ್ಮಣಿ ।**
**ಅಪ್ರಿಯೇ ಚೈವ ವಕ್ತವ್ಯೇ ದೀರ್ಘಸೂತ್ರಃ ಪ್ರಶಸ್ಯತೇ ॥ ೩೨ ॥**

---

೨೯. ಮಹಾರಾಜನು ಯಾವಾಗಲೂ ನಗುಮೊಗನಾಗಿ ಇರಬೇಕಲ್ಲದೆ ಯಾರನ್ನಾದರೂ ಮಾತನಾಡಿಸುವ ಸಂದರ್ಭಬಿದ್ದಾಗ ತಾನೇ ಮೊದಲು ನಗುನಗುತ್ತಾ ಮಾತಿಗೆ ಆರಂಭಿಸಬೇಕು. ಮಧ್ಯಸ್ಥರಾದ ಜನರಾರಾದರೂ ಬಂದಾಗ್ಯೂ ಸಹ ಅವರ ವಿಷಯದಲ್ಲಿ ಹುಬ್ಬುಗಂಟುಹಾಕಿಕೊಳ್ಳಬಾರದು. ಮಾತನಾಡುವಾಗ ಮಧ್ಯದಲ್ಲೂ ಹುಬ್ಬುಗಂಟು-ಹಾಕಿಕೊಳ್ಳಬಾರದು.

೩೦. ಮಹಾರಾಜನು ಒಬ್ಬ ಮನುಷ್ಯನ ಮುಖವನ್ನು ಒಂದಾವರ್ತಿ ನೋಡಿದೊಡನೆಯೇ ಆ ಸ್ಥೂಲಲಕ್ಷ್ಯದಿಂದಲೇ ಅವನ ಭಾವವನ್ನು ಕಂಡು ಹಿಡಿದುಬಿಡಬೇಕು. ಮಹಾರಾಜನ ಸ್ಥೂಲಲಕ್ಷ್ಯಕ್ಕೇ ಅಖಂಡಭೂಮಂಡಲವೂ ವಶವಾಗಿ ಹೋಗಿಬಿಡುವುದು.

೩೧. ಯಾವ ಕರ್ಮವನ್ನಾಗಲೀ ಮಹಾರಾಜನು ತೀಕ್ಷ್ಣವಾದ ಶೀಘ್ರ ಚಿಕಿತ್ಸಕ-ಬುದ್ಧಿಯಿಂದ ನೆರವೇರಿಸಿಬಿಡಬೇಕು. ಹಾಗೆ ಜಾಗ್ರತೆಮಾಡದೆ ಆದಾವ ಮಹಾರಾಜನು ದೀರ್ಘಸೂತ್ರನಾಗಿ ಸಾವಕಾಶವಾಗಿ (ನಿಧಾನವಾಗಿ) ಕಾರ್ಯ ಮಾಡುವನೋ ಅವನು ಮಾಡುವ ಕೆಲಸಗಳೆಲ್ಲಾ ಕೆಟ್ಟುಹೋಗುವುವು.

೩೨. ಹಾಗಾದರೆ ಈ ದೀರ್ಘ ಸೂತ್ರವನ್ನು ಯಾವ ಸಂದರ್ಭದಲ್ಲಿ ಉಪಯೋಗಿಸಬೇಕೆಂಬುದನ್ನೀಗ ಹೇಳುತ್ತೇನೆ;— ರಾಗ, ದರ್ಪ, ಮಾನ, ದ್ರೋಹ, ಪಾಪಕರ್ಮಾಚರಣೆ, ಅಪಕಾರಗಳನ್ನು ಮಾಡುವ ಸಂದರ್ಭದಲ್ಲಿ ಕಾಲಹರಣ ಮಾಡುತ್ತಾ ಈ ದೀರ್ಘಸೂತ್ರವನ್ನುಪಯೋಗಿಸಿಕೊಳ್ಳಬೇಕು.

ರಾಜ್ಞಾಸಂವೃತಮಂತ್ರೇಣ ಸಂಭಾವ್ಯಂ ದ್ವಿಜಸತ್ತಮ ।
ತಸ್ಯಾ ಸಂವೃತಮಂತ್ರಸ್ಯ ಜ್ಞೇಯಾಃ ಸರ್ವಾಪದೋ ಧ್ರುವಾಃ ॥ ೩೩ ॥

ಕೃತಾನ್ಯೇವ ಹಿ ಕರ್ಮಾಣಿ ಜ್ಞಾಯಂತೇ ಯಸ್ಯ ಭೂಪತೇಃ
ನಾರಬ್ಧಾನಿ ಮಹಾಭಾಗ ತಸ್ಯ ಸ್ಯಾದ್ವಸುಧಾ ವಶೇ ॥ ೩೪ ॥

ಮಂತ್ರಮೂಲಂ ಸದಾ ರಾಜ್ಯಂ ತಸ್ಮಾನ್ಮಂತ್ರಃ ಸುರಕ್ಷಿತಃ ।
ಕರ್ತವ್ಯಃ ಪೃಥಿವೀಪಾಲೈರ್ಮಂತ್ರಭೇದಭಯಾತ್ಸದಾ ॥ ೩೫॥

ಮಂತ್ರವಿತ್ಸಾಧಿತೋ ಮಂತ್ರಃ ಸಂಯುತಾನಾಂ ಸುಖಾವಹಃ ।
ಮಂತ್ರಭೇದೇನ ಬಹವೋ ವಿನಷ್ಟಾಃ ಪೃಥಿವೀಕ್ಷಿತಃ ॥ ೩೬ ॥

---

೩೩. ಮಹಾರಾಜನು ಯಾವ ಮಹತ್ಕಾರ್ಯವನ್ನು ಮಾಡಬೇಕಾದರೂ ಮಂತ್ರಿಗಳೊಡನೆ ಮಂತ್ರಾಲೋಚನೆ ಮಾಡಿಯೇ ಮಾಡಬೇಕು. ಆ ರೀತಿ ಮಂತ್ರಾಲೋಚನೆಯಿಲ್ಲದೆ ದುಡುಕಿ ಕೆಲಸಮಾಡಿಬಿಟ್ಟರೆ ಸಕಲ ವಿಧವಾದ ಆಪತ್ತುಗಳೂ ಹಿಂಬಾಲಿಸುವುವು.

೩೪. ಯಾವ ಕೆಲಸವು ಮಾಡಿಯಾಗಿದೆಯೆಂದು ಮಹಾರಾಜನು ಭಾವಿಸುವನೋ ಅಂತಹ ಕಾರ್ಯವನ್ನು ಮಹಾರಾಜನು ಪುನಃ ಆರಂಭಮಾಡುವುದೇ ಇಲ್ಲ ಅಂತಹ ಪೂರ್ಣಕಾಮನಾದ ರಾಜನಿಗೆ ಈ ಭೂಲೋಕವೇ ವಶವಾಗಿರುವುದು.

೩೫. ರಾಜ್ಯವು ಯಾವಾಗಲೂ ಮಂತ್ರಾಲೋಚನೆಯೇ ಮೂಲವಾಗುಳ್ಳದು. ಆದ್ದರಿಂದ ಮಂತ್ರವನ್ನು ಸುರಕ್ಷಿತವಾಗಿಟ್ಟುಕೊಂಡಿರಬೇಕು. ಯಾರಾದರೂ ಮಂತ್ರ. ಭೇದವನ್ನು ಮಾಡಿಯಾರೆಂಬ ಭೀತಿಯು ರಾಜನ ಮನಸ್ಸಿನಲ್ಲಿ ಸರ್ವದಾ ಇದ್ದೇ ತೀರಬೇಕು.

೩೬. ಮಂತ್ರಾಲೋಚನಾಸಮರ್ಥರಿಂದ ಸಾಧಿಸಲ್ಪಟ್ಟ ಮಂತ್ರವು ಸಕಲ ಲೋಕ ಸಂತತಿಗೂ ಸುಖದಾಯಕವಾದುದು. ಮಂತ್ರಭೇದದಿಂದ ಅನೇಕ ಮಂದಿ ರಾಜರು ನಷ್ಟವಾಗಿ ಹೋಗಿರುವರು.

ಆಕಾರೈರಿಂಗಿತೈರ್ಗತ್ಯಾ ಚೇಷ್ಟಯಾ ಭಾಷಿತೇನ ಚ ।
ನೇತ್ರವಕ್ತ್ರವಿಕಾರೈಶ್ಚ ಜ್ಞಾಯತೇಽಂತರ್ಗತಂ ಮನಃ ॥ ೩೭ ॥

ನ ಯಸ್ಯ ಕುಶಲೈಸ್ತಸ್ಯ ವಶೇ ಸರ್ವಾ ವಸುಂಧರಾ ।
ಭವತೀಹ ಮಹೀಭರ್ತುಃ ಸದಾ ಭಾರ್ಗವನಂದನ ॥ ೩೮ ॥

ನೈಕಸ್ತು ಮಂತ್ರಯೆನ್ಮಂತ್ರಂ ನ ರಾಜಾ ಬಹುಭಿಃ ಸಹ ।
ಬಹುಭಿರ್ಮಂತ್ರಯೇತ್ಕಾಮಂ ರಾಜಾ ಮಂತ್ರಾನ್ಪೃಥಕ್ಪೃಥಕ್ ॥ ೩೯ ॥

ಮಂತ್ರಿಣಾಮಪಿ ನೋ ಕುರ್ಯಾನ್ಮಂತ್ರೀ ಮಂತ್ರಪ್ರಕಾಶನಂ ।
ಕ್ವಚಿತ್ಕ್ವಚಿಚ್ಚ ವಿಶ್ವಾಸ್ಯೋ ಭವತೀಹ ಸದಾ ನೃಣಾಂ ॥ ೪೦ ॥

---

೩೭. ಒಬ್ಬ ಮನುಷ್ಯನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಈ ಕೆಳಗಿನ ಲಕ್ಷಣಗಳಿಂದ ಸುಲಭವಾಗಿ ಕಂಡು ಹಿಡಿಯಬಹುದು. ಅವನ ಆಕಾರ, ಇಂಗಿತ, ಗತಿ, ಚೇಷ್ಟೆ, ಮಾತು, ಕಣ್ಣು, ಮುಖವಿಕಾರಗಳೇ ಮನುಷ್ಯನ ಹೃದಯದಲ್ಲಿರುವ ಅಭಿಪ್ರಾಯವನ್ನು ಕಂಡು ಹಿಡಿಯುವ ಸುಲಭೋಪಾಯಗಳು.

೩೮. ಎಲೈ ಪರಶುರಾಮನೇ, ಮನಸ್ಸಿಟ್ಟು ಚೆನ್ನಾಗಿ ಕೇಳು. ಯಾವ ರಾಜನೇ ಆಗಲಿ ಕುಶಲೋಪಾಯದಿಂದ ಈ ಸಕಲ ಭೂಮಂಡಲವನ್ನೂ ಸ್ವಾಧೀನ ಮಾಡಿಕೊಳ್ಳಬೇಕೇ ಹೊರತು, ಕೌಶಲವಿಲ್ಲದೆ ಈ ಜಗತ್ತು ಸ್ವಾಧೀನವಾಗಲಾರದು.

೩೯. ಮಹಾರಾಜನು ಮಂತ್ರಾಲೋಚನೆ ಮಾಡುವಾಗ ಒಬ್ಬನೇ ಕುಳಿತು ಆಲೋಚಿಸಬಾರದು. ಬಹು ಜನಗಳನ್ನು ಸೇರಿಸಿ (ಗುಂಪು ಕೂಡಿಸಿ) ಕೊಂಡು ಆಲೋಚಿಸಲೂ ಬಾರದು. ತನ್ನ ಮನೋಭಿಪ್ರಾಯವನ್ನು ಬಹುಜನರ ಸಂಗಡ ಆಲೋಚನೆಯೇನೋ ಮಾಡಬೇಕು. ಆದರೆ ಒಬ್ಬರಿಗೆ ಅರಿಯದಂತೆ ಮತ್ತೊಬ್ಬ ರೊಡನೆ ಬೇರೆಬೇರೆಯಾಗಿ ಮಂತ್ರಾಲೋಚನೆ ಮಾಡಬೇಕು.

೪೦. ಬುದ್ಧಿವಂತನಾದ ಒಬ್ಬ ಮಂತ್ರಿಯು ತನ್ನ ಮನೋಭಿಪ್ರಾಯವನ್ನು ಇತರ ಮಂತ್ರಿಗಳಿಗೆ ತಿಳಿಸಬಾರದು. ಮತ್ತೊಬ್ಬನ ಆಲೋಚನೆಯನ್ನೂ ಕೇಳಬಾರದು. ಮನುಷ್ಯರಲ್ಲಿ ಕೆಲಕೆಲವರು ನಂಬುಗೆಗೆ ಅರ್ಹರಾದವರೂ ಉಂಟು. ಮತ್ತೆ ಕೆಲವರು ವಿಶ್ವಾಸದ್ರೋಹಿಗಳಾಗಿರುವುದೂ ಉಂಟು. ದಡ್ಡರೂ ಉಂಟು. ಆದುದರಿಂದ ಮಂತ್ರಿ ಮಂಡಲದವರು ಈ ಮಂತ್ರವನ್ನು ಗುಪ್ತವಾಗಿ ಮನಸ್ಸಿನಲ್ಲಿಟ್ಟುಕೊಂಡು ಕೆಲಸ ಮಾಡಬೇಕು.

ನಿಶ್ಚಯಶ್ಚ ತಥಾ ಮಂತ್ರೀ ಕಾರ್ಯ ಏಕೇನ ಸೂರಿಣಾ ।
ಭವೇದ್ವಾ ನಿಶ್ಚಯಾವಾಪ್ತಿಃ ಪರಬುದ್ಧ್ಯುಪಜೀವನಾತ್ ॥ ೪೧ ॥

ಏಕಸ್ಯೈವ ಮಹೀಭರ್ತುರ್ಭೂಯಃ ಕಾರ್ಯೇ ಸುನಿಶ್ಚಿತೇ ।
ಬ್ರಾಹ್ಮಣಾನ್ಪರ್ಯುಪಾಸೀತ ತ್ರಯ್ಯಾಂ ರಾಮ ಮುನೀಂಶ್ಚತಾನ್ ॥ ೪೨ ॥

ನಾಸಚ್ಛಾಸ್ತ್ರರತಾನ್ಮೂಢಾಂಸ್ತೇ ಹಿ ಲೋಕಸ್ಯ ಕಂಟಕಾಃ ।
ವೃದ್ಧಾಂಶ್ಚ ನಿತ್ಯಂ ಸೇವೇತ ವಿಪ್ರಾನ್ವೇದವಿದಃ ಶುಚೀನ್ ॥ ೪೩ ॥

ತೇಭ್ಯೋ ಹಿ ಶಿಕ್ಷೇದ್ವಿನಯಂ ವಿನೀತಾತ್ಮಾ ಹಿ ನಿತ್ಯಶಃ ।
ಸಮಗ್ರಾಂ ವಶಗಾಂ ಕುರ್ಯಾತ್ಪೃಥಿವೀಂ ನಾತ್ರ ಸಂಶಯಃ ॥ ೪೪ ॥

---

೪೧. ಮಹಾಬುದ್ಧಿಶಾಲಿಯೆಂದು ಹೆಸರುವಾಸಿಯನ್ನು ಹೊಂದಿರುವ ಅಮಾತ್ಯ ಶಿರೋಮಣಿಯ ಆಲೋಚನೆಯನ್ನು ಕೇಳಿಯೇ ಮತ್ತೊಬ್ಬ ಮಂತ್ರಿಯು ಕಾರ್ಯವನ್ನು ನಿಶ್ಚಯಿಸಬೇಕು. ಕೆಲವು ಬುದ್ಧಿಹೀನರಾದ ಮಂತ್ರಿಗಳೂ ಇರುವುದುಂಟು. ಇವರನ್ನು ಪರರ ಬುದ್ಧಿಯಿಂದ ಉಪಜೀವಿಸುವ ಮಂತ್ರಿಗಳೆಂದು ಹೇಳಬಹುದು. ಇವರು ಕಾರ್ಯನಿಶ್ಚಯವನ್ನು ಮತ್ತೊಬ್ಬ ಮಂತ್ರಿಯ ಆಲೋಚನೆಯಿಂದಲೇ ಮಾಡತಕ್ಕವರಾಗಿರುವರು.

೪೨. ಮಹಾರಾಜನು ಯಾವುದಾದರೊಂದು ಶಾಶ್ವತವಾದ ಮಹಾಕಾರ್ಯವನ್ನು ತಾನೊಬ್ಬನೇ ಆಲೋಚಿಸಿ ನಿಶ್ಚಯಿಸಬೇಕೆಂಬ ಭಾವನೆಯುಂಟಾದ ಸಂದರ್ಭದಲ್ಲಿ ಮೂರು ವೇದದಲ್ಲಿ, ಆರು ಶಾಸ್ತ್ರದಲ್ಲಿ ಪರಿಣತರಾದ ಮಹರ್ಷಿಗಳನ್ನು ಕರೆಯಿಸಿ ಅವರನ್ನಾರಾಧಿಸಿ ಅವರ ಅಭಿಪ್ರಾಯವನ್ನು ಪಡೆದು ಕಾರ್ಯಾರಂಭಮಾಡಬೇಕು.

೪೩. ಸಚ್ಛಾಸ್ತ್ರಾಭ್ಯಾಸವನ್ನು ಮಾಡದೆ ಮೂಢರಾದ ಗರ್ವಿಷ್ಠ ಬ್ರಾಹ್ಮಣರನ್ನು ಲೋಕಕಂಟಕರೆಂದೂ ತಿಳಿದುಕೊಳ್ಳಬೇಕು. ಆದ್ದರಿಂದ ಮಹಾರಾಜನಾದವನು ವೇದವೇತ್ತರಾದ, ವಯೋವೃದ್ಧರಾದ, ಸದಾಚಾರಸಂಪನ್ನರಾದ ಬ್ರಾಹ್ಮಣರನ್ನೇ ತನ್ನ ಆಸ್ಥಾನದಲ್ಲಿಟ್ಟುಕೊಂಡು ಅವರ ಸೇವೆಯನ್ನು ಮಾಡಬೇಕು.

೪೪. ಅಂತಹ ಮಹನೀಯರಿಂದ ವಿನಯದ ಸ್ವರೂಪವೆಂತಹುದೆಂಬುದನ್ನು ಮಹಾರಾಜನು ಕಲಿಯಬೇಕು. ಈ ರೀತಿ ವಿನಯಸಂಪತ್ತಿಯನ್ನು ಕಲಿತ ಮಹಾರಾಜನು ಈ ಸಕಲ ಭೂಮಂಡಲವನ್ನೂ ತನ್ನ ವಿನಯದಿಂದ ವಶಮಾಡಿಕೊಳ್ಳಬಲ್ಲನು.

ಬಹವೋಽವಿನಯಾನ್ನಷ್ಟಾ ರಾಜಾನಃ ಸಪರಿಚ್ಛದಾಃ ।
ವನಸ್ಥಾಶ್ಚೈವ ರಾಜ್ಯಾನಿ ವಿನಯಾತ್ಪ್ರತಿಪೇದಿರೇ ॥ ೪೫ ॥

ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾದ್ದಂಡನೀತಿಂ ಚ ಶಾಶ್ವತೀಂ ।
ಆನ್ವೀಕ್ಷಿಕೀಂ ಚಾತ್ಮವಿದ್ಯಾಂ ವಾರ್ತಾರಂಭಂ ಚ ಲೋಕತಃ ॥ ೪೬ ॥

ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾ ನಿಶಂ ।
ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ॥ ೪೭ ॥

ಯಜೇತ ರಾಜಾ ಕ್ರತುಭಿರ್ಬಹುಭಿಶ್ಚಾಪ್ತದಕ್ಷಿಣೈಃ ।
ಧರ್ಮಾರ್ಥಂ ಚೈವ ವಿಪ್ರೇಭ್ಯೋ ದದ್ಯಾದ್ಭೋಗಾರ್ಧನಾನಿ ಚ ॥ ೪೮ ॥

---

೪೫. ವಿನಯವನ್ನರಿಯದ ಅನೇಕ ಮಂದಿ ಉದ್ಧತರಾದ ರಾಜರು ಸಪರಿವಾರರಾಗಿ ನಾಶಹೊಂದಿದ ಉದಾಹರಣೆಗಳನ್ನೆಷ್ಟೋ ನೋಡಬಹುದು. ತಮ್ಮ ತಮ್ಮ ವಿನಯಸಂಪತ್ತಿನಿಂದ ಕಾಡಿನಲ್ಲಿ ವಾಸವಾಗಿದ್ದ ಅನೇಕ ರಾಜರು ರಾಜ್ಯವನ್ನು ಸಂಪಾದಿಸಿದ ಉದಾಹರಣೆಗಳು ಎಷ್ಟೋ ಇವೆ.

೪೬, ಮೂರುವೇದಗಳ ಸಾರರೂಪವಾದ ಮೂರುವಿದ್ಯೆಗಳನ್ನು ಚೆನ್ನಾಗಿ ಕಲಿಯಬೇಕು. ಅವಾವುವೆಂದರೆ;— ದಂಡನೀತಿಶಾಸ್ತ್ರ, ಶಾಶ್ವತವಾದ ಆನ್ವೀಕ್ಷಕೀ ವಿದ್ಯಾ, ಆತ್ಮವಿದ್ಯಾ, (ವೇದಾಂತ) ಇವೇ ಆ ಮೂರು ವಿದ್ಯೆಗಳು. ಲೋಕವ್ಯವಹಾರ ಜ್ಞಾನದಿಂದ ಮಾತನಾಡುವುದನ್ನು ಕಲಿಯಬೇಕು.

೪೭. ಇಂದ್ರಿಯಗಳನ್ನು ಜಯಿಸುವ ಕ್ರಮವನ್ನು ಹಗಲೂ ರಾತ್ರಿಯೂ ಯೋಗಸಾಧನೆಯಿಂದ ಚೆನ್ನಾಗಿ ಕಲಿತುಕೊಳ್ಳಬೇಕು. ಜಿತೇಂದ್ರಿಯನಾದ ಮಹಾರಾಜನೇ ತನ್ನ ಪ್ರಜೆಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ ಶಕ್ತಿಯನ್ನು ಹೊಂದಿದವನಾಗುವನು.

೪೮. ಮಹಾರಾಜನು ಅನೇಕ ಕ್ರತುಗಳನ್ನು ಮಾಡಬೇಕು. ಆ ಯಜ್ಞದಲ್ಲಿ ದೀಕ್ಷಿತರಾಗಿದ್ದವರಿಗೂ ಋತ್ವಿಕ್ಕುಗಳಿಗೂ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಡಬೇಕು. ಯೋಗ್ಯಬ್ರಾಹ್ಮಣರನ್ನು ನೋಡಿ ಅವರಿಗೆ ಧರ್ಮಾರ್ಥವಾಗಿ ಭೋಗ್ಯಪದಾರ್ಥಗಳನ್ನೂ ಅವರು ಕೇಳಿದಷ್ಟು ಹಣವನ್ನೂ ಕೊಡಬೇಕು.

**ಸಾಂವತ್ಸರಿಕೈರಾಪ್ತೈಶ್ಚ ರಾಷ್ಟ್ರಾದಾಹಾರಯೇದ್ಬಲಿಂ ।**
**ಸ್ಯಾಚ್ಚಾಮ್ನಾಯಪರೋ ಲೋಕೇ ವರ್ತೇತ ಪಿತೃವನ್ನೃಷು ॥ ೪೯ ॥**

**ಆವೃತಾನಾಂ ಗುರುಕುಲಾದ್ದ್ವಿಜಾನಾಂ ಪೂಜನಂ ಭವೇತ್ ।**
**ನೃಪಾಣಾಮಕ್ಷಯೋ ಹ್ಯೇಷ ನಿಧಿರ್ಬ್ರಾಹ್ಮೋವಿಧೀಯತೇ ॥ ೫೦ ॥**

**ನ ತಂ ಸ್ತೇನಾ ನಾಪ್ಯಮಿತ್ರಾ ಹರನ್ತಿ ನಚ ನಶ್ಯತಿ ।**
**ತಸ್ಮಾದ್ರಾಜ್ಞಾ ನಿಧಾತವ್ಯೋ ಬ್ರಾಹ್ಮಣೇಷ್ವಕ್ಷಯೋ ನಿಧಿಃ ॥ ೫೧ ॥**

---

೪೯. ಜ್ಯೌತಿಷಿಕರ ಮೂಲಕವಾಗಿಯೂ, ಆಪ್ತಾಧಿಕಾರಿಗಳ ಮೂಲಕವಾಗಿಯೂ ತನ್ನ ಪ್ರಜೆಗಳಿಂದ ಕಂದಾಯವನ್ನು ತೆಗೆದುಕೊಳ್ಳಬೇಕು. ಮಹಾರಾಜನು ವೇದೋಕ್ತಧರ್ಮವನ್ನಾವುದನ್ನೂ ಮೀರದೆ ತನ್ನ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿಕೊಂಡಿರಬೇಕು.

೫೦. ಗುರುಕುಲದಲ್ಲಿ ವೇದಶಾಸ್ತ್ರಾಧ್ಯಯನಗಳನ್ನು ಮಾಡುತ್ತಿರುವ ಬ್ರಾಹ್ಮಣಶ್ರೇಷ್ಠರಿಗೆ ವಿಶೇಷವಾದ ಬಹುಮಾನಗಳನ್ನು ಕೊಡುತ್ತಿರಬೇಕು. ಹೀಗೆ ಮಾಡುವ ದಾನವನ್ನು ರಾಜರು ಗಳಿಸಿದ ಬ್ರಾಹ್ಮವಾದ ಅಕ್ಷಯನಿಧಿಯೆಂದು ಹೇಳಬಹುದು (ಬ್ರಾಹ್ಮಣರಿಂದಾಗುವ ಲಾಭ.)

೫೧. ಬ್ರಾಹ್ಮಣರುಗಳಲ್ಲಿ ವಿನಿಯೋಗಮಾಡಿದ ಹಣದ ರಾಶಿಯು ಎಂದೆಂದಿಗೂ ನಾಶವಾಗದ ಅಕ್ಷಯನಿಧಿಯೆನಿಸುವುದರಿಂದ ಮಹಾರಾಜನು ಹಣವನ್ನೆಲ್ಲಾ ಬ್ರಾಹ್ಮಣರಿಗೆ ಸೂರೆಮಾಡಿಕೊಟ್ಟರೂ ಸಹ ಅವನಿಗೆ ಅದು ಅಭಿವೃದ್ಧಿದಾಯಕವೆಂದೇ ನಿಶ್ಚಯವಾಗಿ ತಿಳಿಯಬೇಕು. ಈ ರೀತಿ ವಿನಿಯೋಗಿಸಿದ ಅಕ್ಷಯನಿಧಿಯನ್ನು ಕಳ್ಳರು ಕದಿಯಲಾರರು. ಶತ್ರುಗಳು ಲೂಟಿಮಾಡಲಾರರು. ಅದು ಎಂದೆಂದಿಗೂ ನಾಶವಾಗುವುದೇ ಇಲ್ಲ. ಇದೇ ಧರ್ಮಸೂಕ್ಷ್ಮವು. ಇದೇ ಧರ್ಮ ರಹಸ್ಯವು.

**ಸಮೋತ್ತಮಾಧಮ್ಯೈ ರಾಜಾ ಹ್ಯಾಹೂತಾಃ ಪಾಲಯೇತ್ಪ್ರಜಾಃ।**
**ನ ನಿರ್ವರ್ತೇತ ಸಂಗ್ರಾಮಾತ್ಕ್ಷಾತ್ರಂ ವ್ರತಮನುಸ್ಮರನ್ ॥ ೫೨ ॥**

**ಸಂಗ್ರಾಮೇಷ್ವನಿವರ್ತಿತ್ವಂ ಪ್ರಜಾನಾಂ ಪರಿಪಾಲನಂ।**
**ಶುಶ್ರೂಷಾ ಬ್ರಾಹ್ಮಣಾನಾಂ ಚ ರಾಜ್ಞಾಂ ನಿಶ್ರೇಯಸಂ ಪರಂ ॥ ೫೩ ॥**

**ಕೃಪಣಾನಾಂ ಚ ವೃದ್ಧಾನಾಂ ವಿಧವಾನಾಂ ಚ ಯೋಷಿತಾಂ।**
**ಯೋಗಂ ಕ್ಷೇಮಂ ಚ ವೃತ್ತಿಂ ಚ ತಥೈವ ಪರಿಕಲ್ಪಯೇತ್ ॥ ೫೪ ॥**

**ವರ್ಣಾಶ್ರಮವ್ಯವಸ್ಥಾ ತು ತಥಾ ಕಾರ್ಯಾ ವಿಶೇಷತಃ।**
**ಸ್ವಧರ್ಮಪ್ರಚ್ಯುತಾನ್ರಾಜಾ ಸ್ವಧರ್ಮೇ ವಿನಿಯೋಜಯೇತ್ ॥ ೫೫ ॥**

---

೫೨. ಪ್ರಜೆಗಳಲ್ಲಿ ಉತ್ತಮ ಮಧ್ಯಮಾಧಮರು ಯಾರ್ಯಾರೆಂಬುದನ್ನು ಕಂಡು ಹಿಡಿದು ಅವರನ್ನು ಕರೆಯಿಸಿ ಅವರನ್ನು ಸಂರಕ್ಷಿಸಿ ಇಟ್ಟುಕೊಂಡಿದ್ದರೆ ಯುದ್ಧರಂಗದಲ್ಲಿ ಯುದ್ಧಪ್ರಸಕ್ತಿಯೊದಗಿದಾಗ ಮಹಾರಾಜನು ಶತ್ರುಗಳಿಗೆ ಸೋತು ಹಿಮ್ಮೆಟ್ಟಬೇಕಾದ್ದಿಲ್ಲ. ಇಂತು ಸೈನ್ಯ ಸಹಾಯದಿಂದ ತನ್ನ ಕ್ಷಾತ್ರಪರಾಕ್ರಮವನ್ನು ತೋರಿಸಿ ದಿಗ್ವಿಜಯವನ್ನು ಸಂಪಾದಿಸಬಹುದು.

೫೩. ರಾಜನಿಗೆ ಮೋಕ್ಷಸಂಪತ್ತನ್ನು ದೊರಕಿಸುವ ಉಪಾಯಗಳು ಮೂರು. ಅದಾವುವೆಂದರೆ:—೧. ರಣರಂಗದಲ್ಲಿ ಹಿಂತಿರುಗದೇ ಇರುವುದು. ೨. ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆ ಮಾಡತಕ್ಕದ್ದು. ೩. ಬ್ರಾಹ್ಮಣರನ್ನು ಶುಶ್ರೂಷೆ ಮಾಡುವುದು.

೫೪. ಮಹಾರಾಜನು ತನ್ನ ರಾಜ್ಯದಲ್ಲಿ ಕಾರ್ಪಣ್ಯ (ಅಹನ್ಯಹನಿ) ದಿಂದ ಜೀವಿಸತಕ್ಕವರನ್ನೂ, ಸಂಪಾದಿಸಲಶಕ್ತರಾದ ವೃದ್ಧರನ್ನೂ, ಅನಾಥೆಯಾದ ಹೆಂಗಸನ್ನೂ ಸಂರಕ್ಷಿಸುತ್ತಾ ಅವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿರಬೇಕಲ್ಲದೆ, ಅವರಿಗೆ ಏನಾದರೊಂದು ಜೀವನೋಪಾಯಕ್ಕೆ ತಕ್ಕ ವೃತ್ತಿಯನ್ನು ಕಲ್ಪಿಸಿ ಕೊಡಬೇಕು.

೫೫. ಮಹಾರಾಜನು ಮುಖ್ಯವಾಗಿ ತನ್ನ ರಾಜ್ಯದಲ್ಲಿ ವರ್ಣಾಶ್ರಮ ವ್ಯವಸ್ಥೆಯು ಸರಿಯಾಗಿದೆಯೇ? ಜನರು ಸಂಪೂರ್ಣಾಶ್ರಮಧರ್ಮಗಳನ್ನನುಸರಿಸಿ ನಡೆಯುತ್ತಿದ್ದಾರೆಯೆ? ಎಂಬುದನ್ನು ಚೆನ್ನಾಗಿ ವಿಚಾರಿಸಿ ಅದಕ್ಕೆ ತಕ್ಕ ವ್ಯವಸ್ಥೆ

**ಆಶ್ರಮೇಷು ಯಥಾಕಾಲಂ ತೈಲಭಾಜನಭೋಜನಂ।**
**ಸ್ವಯಮೇವ ನಯೆದ್ರಾಜಾ ಸತ್ಕೃತಾನ್ನವಮನ್ಯ ಚ ॥ ೫೬ ॥**

---

ಯನ್ನು ಮಾಡಿ ಕ್ರಮಪಡಿಸಬೇಕು. ಒಂದುವೇಳೆ ಜನರು ಸ್ವಧರ್ಮವನ್ನು ಮೀರಿ ನಡೆಯುತ್ತಿರುವರೆಂದು ರಾಜನಿಗೆ ತಿಳಿದು ಬಂದರೆ ಕಾನೂನು ಮೂಲಕವಾಗಿಯಾದರೂ ಜನರು ಸ್ವಧರ್ಮಾಚರಣಾಸಕ್ತರಾಗುವಂತೆ ನಿಯಾಮಕಮಾಡುವುದೂ ಒಳ್ಳೆಯದು.

ಟಿಪ್ಪಣಿ: ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ಎಂದು ಭಗವದ್ಗೀತೆಯಲ್ಲಿ ಘಂಟಾಘೋಷವಾಗಿ ಹೇಳಿರುವುದರಿಂದ, ಈಗಿನ ವಿದ್ಯಾರ್ಥಿಗಳು ತಾವು ಮಾಡುತ್ತಿರುವ ಪರಧರ್ಮಾನುಕರಣವನ್ನು ಬಿಟ್ಟು, ತಮ್ಮ ವೇಷಭಾಷೆಗಳನ್ನೂ ನಡೆನುಡಿಗಳನ್ನೂ ತಮ್ಮ ಮಾತಾಪಿತೃಗಳ, ಗುರುಹಿರಿಯರ ಉಪದೇಶದಂತೆ ಸನಾತನ ಧರ್ಮಮಾರ್ಗಕ್ಕೆ ತಿರುಗಿಸಿಕೊಂಡು ನಡೆಯಿಸುವುದು ಅವರಿಗೂ, ಒಟ್ಟಿನಮೇಲೆ ನಮ್ಮ ಆರ್ಯಾವರ್ತಕ್ಕೂ ಕ್ಷೇಮದಾಯಕವಾದುದರಿಂದ ಆ ರೀತಿ ನಡೆಯುತ್ತಾ ಬರಲೆಂದು ಆಶಿಸುತ್ತೇನೆ. ಈ ರೀತಿ ಪಾಶ್ಚಾತ್ಯಧರ್ಮಾನುಕರಣರೂಪವಾಗಿ ಹರಿದು ಹೋಗುತ್ತಿರುವ ಹುಚ್ಚು ಹೊಳೆಗೆ ಅಡ್ಡಗಟ್ಟೆ ಹಾಕಿ ತಡೆದು ಸನಾತನ ಧರ್ಮವನ್ನು ಉದ್ಧಾರಮಾಡುವುದಕ್ಕಾಗಿಯೇ ಭರತಖಂಡದಲ್ಲೂ, ನಮ್ಮ ಮೈಸೂರು ದೇಶದಲ್ಲೂ ವರ್ಣಾಶ್ರಮ ಸ್ವರಾಜ್ಯ ಸಂಘವು ಸ್ಥಾಪಿತವಾಗಿ ವೇದಮಾರ್ಗೋಜ್ಜೀವನಕ್ಕಾಗಿ ಕಂಕಣಕಟ್ಟಿ ದುಡಿಯುತ್ತಾ ಇದೆ. ಅದರ ಉದ್ದೇಶಗಳನ್ನೂ, ಈಗ ಬರೆಯುತ್ತಿರುವ ಈ ಮಹಾಪುರಾಣದ ಮುಖ್ಯೋದ್ದೇಶವನ್ನೂ ಈಗಲಾದರೂ ಜನರು ಚೆನ್ನಾಗಿ ತಿಳಿದು ಸ್ವಧರ್ಮಾಸಕ್ತರಾಗುವುದಾದರೆ ನಮ್ಮ ಶ್ರೀಮನ್ಮಹಾರಾಜರವರ ಪವಿತ್ರೋದ್ದೇಶವೂ, ಈ ಲೇಖನೋದ್ದೇಶವೂ ಸಾರ್ಥಕವಾಗುವುದು. ಇದು ಮೊದಲು ಹೈಸ್ಕೂಲು, ಕಾಲೇಜು ವಿದ್ಯಾರ್ಥಿವೃಂದದಲ್ಲಾರಂಭವಾಗಿ ಜಗದ್ವ್ಯಾಪಿ ಯಾಗಲೆಂದೂ, ಆ ಮೂಲಕ ಧರ್ಮಭೇರೀನಿನಾದವು ದಿಗಂತರಾಳಗಳಲ್ಲಿ ಮೊಳ ಗಲೆಂದೂ ಭಗವಂತನನ್ನು ಪ್ರಾರ್ಥಿಸುತ್ತೇನೆ. ಈ ಕೋರಿಕೆಯು ದೇವರ ದಯೆಯಿಂದ ನೆರವೇರಲಿ.

೫೬. ಯಾವ ಕಾಲದಲ್ಲಿ ಯಾವ ಆಶ್ರಮಿಗಳು ಯಾವ ಧರ್ಮವನ್ನನುಸರಿಸಿ ನಡೆಯಬೇಕೋ, ಅದರಂತೆ ನಡೆಸಲು ರಾಜನು ವಿಧಾಯಕಮಾಡಬೇಕು. ಹೀಗೆ ಮಾಡಲು ತಪ್ಪುವ ಆಶ್ರಮಿಯಾದ ಅಧರ್ಮಿಯು ಎಂತಹ ಸತ್ಕಾರಹೊಂದಿದವ ನಾದಾಗ್ಯೂ ಅವನನ್ನು ಅವಮಾನಪಡಿಸಿಯಾದರೂ ಅವನ ಆಶ್ರಮಧರ್ಮವನ್ನು ಪಾಲಿಸುವಂತೆ ಕಟ್ಟಪ್ಪಣೆ ಮಾಡಬೇಕು.

**ತಾಪಸೇ ಸರ್ವಕಾರ್ಯಾಣಿ ರಾಜ್ಯಮಾತ್ಮಾನಮೇವ ಚ ।**
**ನಿವೇದಯೇತ್ಪ್ರಯತ್ನೇನ ದೇವವಚ್ಚೈನಮರ್ಚಯೇತ್ ॥ ೫೭ ॥**

**ದ್ವೇ ಪ್ರಜ್ಞೇ ವೇದಿತವ್ಯೇ ಚ ಋಜ್ವೀ ವಕ್ರಾ ಚ ಮಾನವೈಃ ।**
**ಶಠಾಞ್ಜ್ಞಾತ್ವಾ ನ ಸೇವೇತ ಪ್ರತಿಬೋಧಂ ತದಾ ಗತಾನ್ ॥ ೫೮ ॥**

**ನಾಸ್ಯಚ್ಛಿದ್ರಂ ಪರೋ ವಿದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು ।**
**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥ ೫೯ ॥**

**ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।**
**ವಿಶ್ವಾಸಾದ್ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥ ೬೦ ॥**

---

೫೭. ಮಹಾರಾಜನು ತಾನು ಮಾಡಿದ ಸಕಲ ಕಾರ್ಯಗಳನ್ನೂ ತಾಪಸರಿಗೆ ನಿವೇದಿಸಬೇಕು. ಆತ್ಮಾರ್ಪಣೆಮಾಡಬೇಕು. ತಪಸ್ವಿಗಳನ್ನು ದೇವರಂತೆ ಪೂಜೆ ಮಾಡಬೇಕು.

೫೮. ಪ್ರತಿಯೊಬ್ಬ ಮಾನವನೂ ಎರಡು ತಿಳಿವಳಿಕೆಯನ್ನೂ ಹೊಂದಿರಬೇಕು. ತಾನು ನಂಬಬೇಕಾದ ಮನುಷ್ಯನು ಸಾತ್ವಿಕನೇ ಅಥವಾ ಕುಟಿಲನೇ ಎಂಬುದನ್ನು ಚೆನ್ನಾಗಿ ವಿವೇಚಿಸಿ, ಅವನು ಶಠನೆಂದು ಕಂಡುಬಂದರೆ ಅವನ ಸಹವಾಸವನ್ನು ಬಿಟ್ಟುಬಿಡಬೇಕು. ಯೋಗ್ಯನೆಂದು ತಿಳಿದುಬಂದರೆ ಅವನಿಂದ ಸುಗುಣಗಳನ್ನು ಸಂಗ್ರಹಿಸಬೇಕು.

೫೯. ತನ್ನ ಹುಳುಕನ್ನು ಕಂಡುಕೊಳ್ಳಲು ಮತ್ತೊಬ್ಬನು ಹೇಗೆ ಪ್ರಯತ್ನಿಸುವನೋ ಅದೇ ಮೇರೆ ತಾನೂ ಕೂಡ ಮತ್ತೊಬ್ಬನ ಹುಳುಕನ್ನೂ ಕಂಡುಕೊಂಡಿರಬೇಕು. ತನ್ನ ಹುಳುಕನ್ನೂ, ತನ್ನ ತೂತುಗಳನ್ನೂ, ಆಮೆಯು ತನ್ನ ಅವಯುವಗಳನ್ನೆಲ್ಲಾ ಮುಚ್ಚಿಕೊಂಡಿರುವಂತೆ ಹೊರಗೆ ತಿಳಿಯದಂತೆ ಮುಚ್ಚಿಕೊಂಡಿರಬೇಕು.

೬೦. ವಿಶ್ವಾಸಕ್ಕನರ್ಹನಾದ ಮನುಷ್ಯನಲ್ಲಿ ವಿಶ್ವಾಸವನ್ನು ಮಾಡುವುದಕ್ಕೆ ಹೋಗಬಾರದು. ವಿಶ್ವಾಸಾರ್ಹನಾದ ಮನುಷ್ಯನೊಡನೆ ಅತಿ ವಿಶ್ವಾಸವನ್ನು ಮಾಡಬಾರದು. ಅಂತಹ ಅನವಶ್ಯವಾದ ವಿಶ್ವಾಸದಿಂದುತ್ಪನ್ನವಾದ ಭಯವು ಬುಡವನ್ನೇ ಕಡಿದುಬಿಡುವುದು.

**ವಿಶ್ವಾಸಯೇಚ್ಚಾಪಿ ಪರಂ ತತ್ತ್ವಭೂತೇನ ಹೇತುನಾ ।**
**ಬಕವಚ್ಚಿಂತಯೇದರ್ಥಾನ್ಸಿಂಹವಚ್ಚ ಪರಾಕ್ರಮೇತ್ ॥ ೬೧ ॥**

**ವೃಕವಚ್ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ।**
**ದೃಢಪ್ರಹಾರೀ ಚ ಭವೇತ್ತಥಾ ಸೂಕರವನ್ನೃಪಃ ॥ ೬೨ ॥**

**ಚಿತ್ರಾಕಾರಶ್ಚ ಶಿಖಿವತ್ದೃಢಭಕ್ತಸ್ತಥಾಶ್ವಂಧವತ್ ।**
**ಭವೇಚ್ಚ ಮಧುರಾಭಾಷೀ ಶುಕಕೋಕಿಲವನ್ನೃಪಃ ॥ ೬೩ ॥**

**ಕಾಕಶಂಕೀ ಭವೇನ್ನಿತ್ಯಮಜ್ಞಾತವಸತಿಂವಸೇತ್ ।**
**ನಾಪರೀಕ್ಷಿತಪೂರ್ವಂ ಚ ಭೋಜನಂ ಶಯನಂ ಸ್ಪೃಶೇತ್ ॥ ೬೪ ॥**

೬೧. ಮತ್ತೊಬ್ಬ ಮನುಷ್ಯನನ್ನು ತತ್ವಭೂತವಾದ ಹೇತುವಿನಿಂದ ವಿಶ್ವಾಸ ಮಾಡಬೇಕೇ ವಿನಹ ಅನ್ಯಥಾ ಕೂಡದು. ಬಕಧ್ಯಾನದಂತೆ ತನ್ನ ಆಶೆಗಳನ್ನೆಲ್ಲಾ ಅಡಗಿಸಿಟ್ಟುಕೊಳ್ಳಬೇಕು. ಸಿಂಹದಂತೆ ಪರಾಕ್ರಮವನ್ನು ತೋರಿಸಬೇಕು.

೬೨. ತೋಳದಂತೆ ಸಮಯ ಸಾಧಿಸಿ ಹಿಡಿಯಬೇಕು. ಮೊಲದಂತೆ ಮಲಗಿರಬೇಕು. ಧೊರೆಯಾದವನು ಸಮಯ ನೋಡಿಕೊಂಡಿದ್ದು ಹಂದಿಯಂತೆ ದೃಢವಾದ ಪ್ರಹಾರಮಾಡಬೇಕು.

೬೩. ನವಿಲುಗರಿಯಂತೆ ಬಣ್ಣಬಣ್ಣದ ಆಕಾರಗಳನ್ನು ತಳೆಯಬೇಕು. ಕುರುಡನಂತೆ ನಟಿಸುತ್ತಾ ಏನೂ ಕಾಣದವನಂತೆ ತೋರ್ಪಡಿಸಿಕೊಳ್ಳಬೇಕು. ಮಹಾರಾಜನಾದವನು ಗಿಣಿಯಂತೆಯೂ ಕೋಗಿಲೆಯಂತೆಯೂ ಮೃದುಮಧುರವಾದ ಮಾತುಗಳನ್ನಾಡುತ್ತಿರಬೇಕು.

೬೪. ಕಾಗೆಯಂತೆ ಶಂಕೆಮಾಡುತ್ತಿರಬೇಕು. ನಿತ್ಯವೂ ಯಾರಿಗೂ ಗೋಚರವಾಗದಂತೆ ಅಜ್ಞಾತವಾಸಮಾಡುತ್ತಲಿರಬೇಕು. ಪರೀಕ್ಷೆಮಾಡುವುದಕ್ಕಿಂತ ಮುಂಚೆ ಅನ್ನವನ್ನು ಮುಟ್ಟಬಾರದು. ಮತ್ತು ಹಾಸಿಗೆಯಮೇಲೆ ಪರೀಕ್ಷೆಮಾಡದೆ ಮಲಗಬಾರದು.

**ವಸ್ತ್ರಂ ಪುಷ್ಪಮಲಂಕಾರಂ ಯಚ್ಚಾನ್ಯನ್ಮನುಜೋತ್ತಮ ।**
**ನ ಗಾಹೇಜ್ಜನಸಂಬಾಧಂ ನ ಚಾಜ್ಞಾತಂ ಜಲಾಶಯಂ ॥ ೬೫ ॥**

**ನಾಪರೀಕ್ಷಿತಪೂರ್ವ್ಯಸ್ತು ಪುರುಷೈರಾಪ್ತಕಾರಿಭಿಃ ।**
**ನಾರೋಹೇತ್ಕುಂಜರಂ ವ್ಯಾಲಂ ನಾದಾಂತಂ ತುರಗಂ ತಥಾ ॥ ೬೬ ॥**

**ನಾ ವಿಜ್ಞಾತಾಂ ಸ್ತ್ರಿಯಂ ಗಚ್ಛೇನ್ನೈವ ಚಾಶುಭವಾಸಸಂ ।**
**ನಾರೋಹೇದ್ವಿಷಮಾಂ ನಾವಂ ನಾಪರೀಕ್ಷಿತನಾವಿಕಾಂ ॥ ೬೭ ॥**

**ಯೇ ಚಾಸ್ಯ ಭೂಮಿಂ ಜಯತೋ ಭವೇಯುಃ ಪರಿಪಂಥಿನಃ ।**
**ತಾನಾನಯೇದ್ವಶಂ ಸರ್ವಾನ್ಸಾಮಾದಿಭಿರುಪಕ್ರಮೈಃ ॥ ೬೮ ॥**

---

೬೫. ಮಹಾರಾಜನಾದವನು ವಸ್ತ್ರಗಳನ್ನೂ, ಪುಷ್ಪವನ್ನೂ, ಅಲಂಕಾರವನ್ನೂ ಪರೀಕ್ಷೆಮಾಡದೆ ಉಪಯೋಗಿಸಬಾರದು. ಜನರ ಗುಂಪಿಗೆ ಏಕಾಏಕಿ ಹೋಗಬಾರದು. ಆಳ ತಿಳಿಯದೆ ಇದ್ದ ನೀರಿನಲ್ಲಿ ಇಳಿಯಬಾರದು.

೬೬. ಮಹಾರಾಜನು ತನಗೆ ಆಪ್ತರಾದ ಜನರಿಂದ ಪರೀಕ್ಷೆಮಾಡಿಸಿದ ಹೊರತು ಮೇಲೆ ಕಂಡ ಯಾವ ಕೆಲಸಗಳನ್ನೂ ಮಾಡಬಾರದು. ಪರೀಕ್ಷೆಮಾಡದೆ ಇದ್ದ ಆನೆಯಮೇಲೆ ಹತ್ತಬಾರದು. ಹುಲಿಯಮೇಲೆ ಹತ್ತಬಾರದು. ಹತೋಟಿ ಇರದೆ ಇದ್ದ ಕುದುರೆಯಮೇಲೇರಬಾರದು.

೬೭. ಪರಿಚಯವಿಲ್ಲದೆ ಇದ್ದ ಹೆಂಗಸಿನ ಹತ್ತಿರ ಹೋಗಬಾರದು. ಕೊಳಕು ಬಟ್ಟೆಗಳನ್ನುಡಬಾರದು. ದೋಣಿ ನಡೆಸುವವರನ್ನೂ, ದೋಣಿಯನ್ನೂ ಪರೀಕ್ಷೆ ಮಾಡದೆ ದೋಣಿಯನ್ನೇರಿ ಹೊಳೆಯನ್ನು ದಾಟಬಾರದು.

೬೮. ಈ ಲೋಕವನ್ನೆಲ್ಲಾ ಜಯಿಸಿ ಚಕ್ರವರ್ತಿಯಾಗಬೇಕೆಂಬ ಆಶೆಯುಳ್ಳ ಮಹಾರಾಜನಿಗೆ ಬಹುಜನ ಶತ್ರುಗಳಿರುತ್ತಾರೆ. ಅಂತಹ ಶತ್ರುಗಳೆಲ್ಲರನ್ನೂ ಮಹಾರಾಜನು ಸಾಮಾದ್ಯುಪಾಯಚತುಷ್ಟಯಗಳಿಂದ ವಶಮಾಡಿಕೊಳ್ಳಬೇಕು.

**ಯಥಾ ನ ಸ್ಯಾತ್ಕೃಶೀ ಭಾವಃ ಪ್ರಜಾನಾಮನವೇಕ್ಷಯಾ ।**
**ತಥಾ ರಾಜ್ಞಾ ವಿಧಾತವ್ಯಂ ಸ್ವರಾಷ್ಟ್ರಂ ಪರಿರಕ್ಷತಾ ॥ ೬೯ ॥**

**ಮೋಹಾದ್ರಾಜಾ ಸ್ವರಾಷ್ಟ್ರಂ ಯತ್ಕರ್ಷಯತ್ಯನವೇಕ್ಷಯಾ ।**
**ಸೋಽಚಿರಾದ್ಭ್ರಂಶತೇ ರಾಜ್ಯಾಜ್ಜೀವಿತಾಶ್ಚ ಸಬಾಂಧವಃ ॥ ೭೦ ॥**

**ಭೃತೋ ವತ್ಸೋ ಜಾತಬಲಃ ಕರ್ಮಯೋಗ್ಯೋ ಯಥಾ ಭವೇತ್ ।**
**ತಥಾ ರಾಷ್ಟ್ರಂ ಮಹಾಭಾಗ ಭೃತಂ ಕರ್ಮಸಮರ್ಥವೇತ್ ॥ ೭೧ ॥**

**ಯೋ ರಾಷ್ಟ್ರಮನುಗೃಹ್ಣಾತಿ ರಾಜಾ ಸುಪರಿರಕ್ಷತಿ ।**
**ತಂ ಪ್ರಜಾಶ್ಚೋಪಜೀವಂತಿ ವಿಂದತೇ ಸುಮಹತ್ಫಲಂ ॥ ೭೨ ॥**

---

೬೯. ಪ್ರಜೆಗಳ ಅಶ್ರದ್ಧೆಯಿಂದ ರಾಜ್ಯವು ಹೀನಸ್ಥಿತಿಯನ್ನು ಹೊಂದದೆ ಇರುವಂತೆ ಮಹಾರಾಜನಾದವನು ಜಾಗರೂಕನಾಗಿದ್ದು ಪ್ರಯತ್ನಮಾಡುತ್ತಾ ತನ್ನ ರಾಷ್ಟ್ರವನ್ನು ಅಭಿವೃದ್ಧಿಪಡಿಸಿ ಕಾಪಾಡಿಕೊಂಡಿರಬೇಕು.

೭೦. ಹಾಗೆ ಮಾಡದೆ ಅಶ್ರದ್ಧೆಮಾಡುವುದಾಗಲೀ ಅಲಕ್ಷ್ಯಭಾವದಿಂದಿರುವುದಾಗಲೀ, ಮಾಡುವುದಾದರೆ ಈ ಅಜ್ಞಾನದಿಂದ ರಾಜ್ಯವು ಬಹುಬೇಗ ನಾಶಹೊಂದುವುದಲ್ಲದೆ, ಆ ರಾಜನು ಬಂಧುಪರಿವಾರಸಹಿತನಾಗಿ ತಾನೂ ನಾಶವಾಗಿ ಹೋಗುತ್ತಾನೆ.

೭೧. ಆಳುಗಳು, ಮಕ್ಕಳು, ಸೈನಿಕರು ಇವರನ್ನು ತಕ್ಕಂತೆ ಕಾಪಾಡಬೇಕು. ಇವರು ಕರ್ಮಯೋಗ್ಯರಾದಾಗ ರಾಜಕಾರ್ಯವನ್ನು ಮಾಡಿಸಬೇಕು. ಹೀಗೆ ಜನರನ್ನು ಸರಿಯಾಗಿ ನೋಡಿಕೊಂಡರೆ ಅಂತಹ ರಾಜ್ಯವು ವಿಶೇಷ ಅಭಿವೃದ್ಧಿ ಹೊಂದುವುದು.

೭೨. ಯಾವ ರಾಜ್ಯವು ಭಗವದನುಗ್ರಹಕ್ಕೆ ಪಾತ್ರವಾಗುವದೋ, ಯಾವ ಧರ್ಮಿಷ್ಠನಾದ ರಾಜನು ಭಗವಂತನಿಂದ ಕಾಪಾಡಲ್ಪಡುತ್ತಿರುವನೋ, ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ಸುಖದಿಂದ ಜೀವನಮಾಡುತ್ತಿರುವರೋ ಆ ರಾಜ್ಯವು ಬಹು ಉಚ್ಛ್ರಾಯಸ್ಥಿತಿಗೆ ಬರುವುದಲ್ಲದೆ, ಆ ಮಹಾರಾಜನು ಮಹಾಫಲವನ್ನು ಹೊಂದುತ್ತಾನೆ.

ದುಹ್ಯಾದ್ಧಿರಣ್ಯಂ ಧಾನ್ಯಂ ಚ ಮಹೀ ರಾಜ್ಞಾ ಸುರಕ್ಷಿತಾ ।
ನಿತ್ಯಂ ಸ್ವೇಭ್ಯಃ ಪರೇಭ್ಯಶ್ಚ ಯಥಾ ಮಾತಾ ಯಥಾ ಪಿತಾ ॥ ೨೩ ॥

ಗೋಪಿನೋ ಹಿ ಸದಾ ಕಾರ್ಯಃ ಸಂವಿಭಾಗಃ ಪ್ರಿಯಾಣಿ ಚ ।
ಅಜಸ್ರಮುಪಯೋಕ್ತವ್ಯಂ ಫಲಂ ತೇಭ್ಯಸ್ತಥೈವ ಚ ॥ ೭೪ ॥

ಸರ್ವಂ ಕರ್ಮೇದಮಾಯತ್ತಂ ವಿಧಾನಂ ಚೈವ ಪೌರುಷಂ ।
ತಯೋರ್ದೈವಮಚಿಂತ್ಯಂ ಹಿ ಪೌರುಷೇ ವಿದ್ಯತೇ ಕ್ರಿಯಾ ॥ ೭೫ ॥

ಏವಂ ಮಹೀಂ ಪಾಲಯತೋಽಸ್ಯ ಭರ್ತುಃ
ಲೋಕಾನುರಾಗಃ ಪರಮೋ ಭವೇತ್ತು ।

---

೭೩. ಸ್ವಜನರನ್ನೂ, ಪರಜನರನ್ನೂ, ಪರಿಜನರನ್ನೂ ಅದಾವ ಮಹಾರಾಜನು ತಾಯಿತಂದೆಗಳಂತೆ ಸಂರಕ್ಷಿಸುತ್ತಲಿರುವನೋ ಅಂತಹ ಮಹಾರಾಜನ ರಾಜಧಾನಿಯಲ್ಲಿ ಚಿನ್ನದ ಮಳೆ ಸುರಿಯುತ್ತದೆ. ಸುವೃಷ್ಟಿಯಾಗುತ್ತದೆ. ಧಾನ್ಯಗಳು ಯಥೇಚ್ಛವಾಗಿ ಬೆಳೆಯುತ್ತವೆ.

೭೪. ರಾಜನಿಂದ ಸಂರಕ್ಷಿತರಾದ ಜನರು ತಮಗೆ ಇಷ್ಟವಾದುದನ್ನು ಕೇಳುತ್ತಲಿರಬೇಕು. ಯಾವಾಗಲೂ ಮಹಾರಾಜನು ಅವರಿಗೆ ಬೇಕಾದ ಇಷ್ಟಾರ್ಥಗಳನ್ನು ಒದಗಿಸುತ್ತಲಿರಬೇಕು.

೭೫. ನಾವು ಈಗ ಅನುಭವಿಸುತ್ತಿರುವ ಸಕಲಕರ್ಮ ಸಮುದಾಯಗಳೂ ಸಹ ಪೌರುಷವನ್ನನುಸರಿಸಿರುವುದೆಂಬುದನ್ನು ಸಕಲರೂ ಗಮನದಲ್ಲಿಡಬೇಕು. ಹಾಗಲ್ಲದೆ ಕರ್ಮವು ದೈವಾಯತ್ತವೆಂದು ಚಿಂತಿಸಲಾಗದು. ಸಕಲ ಕ್ರಿಯೆಗಳೂ ಪುರುಷಪ್ರಯತ್ನದಲ್ಲಿಯೇ ಅಡಕವಾಗಿರುತ್ತವೆ.

೭೬. ನಾನು ಇದುವರಿವಿಗೆ ವಿವರಿಸಿದಂತೆ ಯಾವ ಮಹಾರಾಜನು ರಾಜ್ಯ ಭಾರವನ್ನು ನಿರ್ವಾಹಮಾಡುತ್ತಾನೆಯೋ ಅವನ ವಿಷಯದಲ್ಲಿ ಸಕಲ ಜನರೂ (ಪ್ರಜೆಗಳೂ) ಅನುರಾಗವನ್ನು ಹೊಂದುತ್ತಾರೆ. ಲಕ್ಷ್ಮಿಯು ಲೋಕಾನುರಾಗ

**ಲೋಕಾನುರಾಗಪ್ರಭವಾ ಹಿ ಲಕ್ಷ್ಮೀ
ರ್ಲಕ್ಷ್ಮ್ಯಾ ಭವೇಚ್ಚೈವ ಪರಶ್ಚ ಲೋಕಃ ॥ ೭೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಪುಷ್ಕರ ಸಂವಾದೇ ರಾಜಧರ್ಮ
ವರ್ಣನಂನಾಮ ಪಂಚಷಷ್ಟಿತಮೋಽಧ್ಯಾಯಃ**

---

ದಿಂದಲೇ ಉತ್ಪನ್ನಳಾಗತಕ್ಕವಳಾದ್ದರಿಂದ ಆ ರಾಜ್ಯದಲ್ಲಿ ಲಕ್ಷ್ಮಿಯು ಸ್ಥಿರವಾಗಿ ನಿಲ್ಲುವಳು. ಲಕ್ಷ್ಮಿಯು ಯಾವಾಗ ಅನುಗ್ರಹಮಾಡುವಳೋ ಆಗ ಪರಲೋಕವೂ ಕೈಯಲ್ಲಿದ್ದಂತೆಯೇ ಸರಿ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ರಾಜಧರ್ಮ ವರ್ಣನೆಯೆಂಬ ಹೆಸರಿನ
ಅರವತ್ತೈದನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಷಟ್‌ಷಷ್ಟಿತಮೋಽಧ್ಯಾಯಃ

ರಾಮ ಉವಾಚ

**ದೈವೇ ಪುರುಷಕಾರೇ ಚ ಕಿಂಜ್ಯಾಯಸ್ತ್ರದ್ವದಸ್ವ ಮೇ।**
**ಅತ್ರ ಮೇ ಸಂಶಯೋ ದೇವ ಸಂಶಯಚ್ಛಿದ್ಭವಾಂಸ್ತಥಾ ॥ ೧ ॥**

ಪುಷ್ಕರ ಉವಾಚ

**ಸ್ವಮೇವ ಕರ್ಮ ದೈವಾಖ್ಯಂ ವಿದ್ಧಿ ದೇಹಾಂತರಾರ್ಜಿತಂ।**
**ತಸ್ಮಾತ್‌ಪೌರುಷಮೇವೇಹ ಶ್ರೇಷ್ಠಮಾಹುರ್ಮನೀಷಿಣಃ ॥ ೨ ॥**

---

## ಅರವತ್ತಾರನೆಯ ಅಧ್ಯಾಯವು

೧. ಪರಶುರಾಮನು ಕೇಳುತ್ತಾನೆ:—ಅದೃಷ್ಟ, ಪ್ರಯತ್ನಗಳೆಂದೆರಡು ವಿಧ ಕರ್ಮಗಳಿವೆಯಷ್ಟೆ? ಅದರಲ್ಲಿ ಯಾವುದು ದೊಡ್ಡದೆಂಬ ವಿಚಾರದಲ್ಲಿ ನನಗೆ ಸಂಶಯವುಂಟಾಗಿದೆ. ಆ ಸಂಶಯವನ್ನು ದಯವಿಟ್ಟು ಪರಿಹಾರಮಾಡಬೇಕು.

೨. ಪುಷ್ಕರನು ಹೇಳುತ್ತಾನೆ.—ಜನ್ಮ ಜನ್ಮಾಂತರದಿಂದಲೂ ತನ್ನನ್ನು ಅನುಸರಿಸಿಕೊಂಡು ಬಂದು ತಾನಾಗಿಯೇ ಸುಖದುಃಖಗಳನ್ನು ಕೊಡುತ್ತಿರುವ ಕರ್ಮವನ್ನು ದೈವ ಅಥವಾ ಅದೃಷ್ಟವೆಂದು ತಿಳಿಯಬೇಕು. ಅಂತಹ ದೈವವನ್ನು ಮೀರಿ ಮಾಡುವ ಪ್ರಯತ್ನವಿಶೇಷಕ್ಕೆ ಪೌರುಷವೆಂದು ಹೇಳುವರು. ದೈವಕ್ಕಿಂತ ಪೌರುಷವೇ ಶ್ರೇಷ್ಠವೆಂದು ತಿಳಿದವರು ಹೇಳುವರು.

**ಪ್ರತಿಕೂಲಂ ತಥಾ ದೈವಂ ಪೌರುಷೇಣ ವಿಹನ್ಯತೇ ।**
**ಮಂಗಲಾಚಾರಯುಕ್ತಾನಾಂ ನಿತ್ಯಮುತ್ಥಾನಶಾಲಿನಾಂ ॥ ೩ ॥**

**ಯೇಷಾಂ ಪೂರ್ವಕೃತಂ ಕರ್ಮ ಸಾತ್ತ್ವಿಕಂ ಮನುಜೋತ್ತಮ ।**
**ಪೌರುಷೇಣ ವಿನಾ ತೇಷಾಂ ಕೇಷಾಂಚಿದ್ದೃಶ್ಯತೇಫಲಂ ॥ ೪ ॥**

**ಕರ್ಮಣಾಪ್ರಾಪ್ಯತೇ ಲೋಕೇ ರಾಜನ್ನನ್ಯತ್ತಥಾ ಫಲಂ ।**
**ಪೌರುಷೇಣಾಪ್ಯತೇ ರಾಮ ಮಾರ್ಗಿತವ್ಯಂ ಫಲಂ ನರೈಃ ॥ ॥ ೫ ॥**

---

೩. ಇವನು ಮಾಡುವ ಕೆಲಸಗಳಿಗೆ ಪ್ರತಿಕೂಲವಾಗಿ ದೈವವು ವಿಘ್ನಮಾಡುವುದುಂಟು. ಅಂತಹ ಸಮಯದಲ್ಲಿ ಹೆದರದೆ ಯಾವನು ದೃಢಪ್ರಯತ್ನಮಾಡುವನೋ, ಅವನ ಕಾರ್ಯವು ಪೌರುಷದಿಂದಲೇ ಕೈಗೂಡುವುದು. ಇದಕ್ಕಾಗಿಯೇ ನೀತಿಶಾಸ್ತ್ರಕಾರರು, 'ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ' ಎಂದು ಹೇಳಿರುವರು. ಹಾಗೆಂದರೆ ನನ್ನ ಅದೃಷ್ಟವೇ ಹೀಗೆಂದು ಲಕ್ಷಿಸದೆ ಅದನ್ನು ತುಳಿದು, ಆತ್ಮಶಕ್ತಿಯಿಂದ ಪೌರುಷಪ್ರಯತ್ನಮಾಡು. ನಿನ್ನ ಕಾರ್ಯಸಿದ್ಧಿಯಾಗುವುದೆಂದು ಹೇಳಿರುತ್ತಾರೆ. (ಈ ವಿಚಾರವನ್ನು ವಾಸಿಷ್ಠರಾಮಾಯಣದಲ್ಲಿ ರಾಮನನ್ನು ಕುರಿತು ವಸಿಷ್ಠರು ವಿಸ್ತಾರವಾಗಿ ಉಪದೇಶ ಮಾಡಿರುತ್ತಾರೆ. ಅದನ್ನೋದಿ ನೋಡಿರಿ.) ಸದಾಚಾರನಿಷ್ಠರಾದವರಿಗೂ ಪ್ರತಿದಿನವೂ ಬ್ರಾಹ್ಮಮುಹೂರ್ತದಲ್ಲೆದ್ದು ಕೆಲಸಮಾಡುವವರಿಗೂ ಪೌರುಷಪ್ರಯತ್ನವು ಸಿದ್ಧಿಯಾಗುತ್ತದೆ.

೪. ಆದರೆ ಈ ರೀತಿ ಪ್ರಯತ್ನಸಿದ್ಧಿಯನ್ನು ಹೊಂದಬೇಕಾದ ಜನರು ಪೂರ್ವಜನ್ಮದಲ್ಲಿ ಸಾತ್ವಿಕಕರ್ಮವನ್ನೇ ಮಾಡಿದವರಾಗಿರಬೇಕು. ಹೀಗೆ ಸಾತ್ವಿಕ ಕರ್ಮವನ್ನು ಮಾಡಿದವರಾಗಿದ್ದು ಈ ಜನ್ಮದಲ್ಲೂ ತಕ್ಕ ಪೌರುಷಪ್ರಯತ್ನವನ್ನು ಮಾಡಿದರೆ ಅವರಿಗೆ ಸತ್ಫಲವು ತಪ್ಪದೆ ಉಂಟಾಗುವುದು.

೫. ಈ ಲೊಕದಲ್ಲಿ ಸತ್ಕರ್ಮಾನುಷ್ಠಾನವನ್ನು ಮಾಡೋಣದರಿಂದ ಅವರವರ ಇಷ್ಟಾರ್ಥಾನುಸಾರವಾದ ಶುಭಫಲಗಳನ್ನು ಹೊಂದಬಹುದು. ಆದರೆ ಇಂತಹ ಫಲವು ನಿರೀಕ್ಷಿತವಲ್ಲದ್ದರಿಂದ ಪೌರುಷವನ್ನೇನೋ ಮಾಡಲೇಬೇಕು. ಹೀಗೆ ಮಾಡುವ ಪೌರುಷ ಪ್ರಯತ್ನದಿಂದ ನಾವು ಹುಡುಕುತ್ತಿರುವ ಫಲವು ತಾನಾಗಿ ಕೈಗೂಡುತ್ತದೆ.

ದೈವಮೇವ ನ ಜಾನಾತಿ ನರಃ ಪೌರುಷವರ್ಜಿತಃ ।
ತಸ್ಮಾತ್‌ಸತ್ಕಾರ್ಯಯುಕ್ತಸ್ಯ ದೈವಂ ತು ಸಫಲಂ ಭವೇತ್ ॥ ೬ ॥

ಪೌರುಷಂ ಚೈವ ಸಂಪತ್ತ್ಯಾ ಕಾಲೇ ಫಲತಿ ಭಾರ್ಗವ ।
ದೈವಂ ಪುರುಷಕಾರಶ್ಚ ಕಾಲಶ್ಚ ಮನುಜೋತ್ತಮ । ॥ ೭ ॥

ತ್ರಯಮೇತನ್ಮನುಷ್ಯಸ್ಯ ಪಿಂಡಿತಂ ಸ್ಯಾತ್ಫಲಾವಹಂ ।
ಕೃಷಿವೃಷ್ಟಿ ಸಮಾಯೋಗಾದ್ದೃಶ್ಯಂತೇ ಫಲಸಿದ್ಧಯಃ ॥ ೮ ॥

ತಾಸ್ತು ಕಾಲೇನ ದೃಶ್ಯಂತೇ ನೈವಾಕಾಲೇ ಕಥಂಚನ ।
ತಸ್ಮಾತ್ಸದೈವ ಕರ್ತವ್ಯಂ ಸ್ವಧರ್ಮಂ ಪೌರುಷಂ ನೃಭಿಃ ॥ ೯ ॥

---

೬. ಸುತರಾಂ ಪುರುಷಪ್ರಯತ್ನವನ್ನೇ ಮಾಡದೆ ಅದೃಷ್ಟವನ್ನು ನಂಬಿಕೊಂಡು ಸುಮ್ಮಸುಮ್ಮನೆ ಕೂತಿರುವ ಮನುಷ್ಯನು ದೈವಯತ್ನವನ್ನು ಅರಿಯಲಾರನು. ಆದುದರಿಂದ ಯಾರೇ ಆಗಲಿ ವೇದಶಾಸ್ತ್ರಗಳಲ್ಲಿ ಹೇಳಿರುವಂತೆ ಸತ್ಕರ್ಮಾನುಷ್ಠಾನವನ್ನು ಮಾಡುತ್ತ ಬಂದರೆ ಅವನು ಯೋಚಿಸಿದ ಕೆಲಸವೆಲ್ಲವೂ ಫಲರೂಪವಾಗಿ ಪರಿಣಮಿಸುವುದು. ಅವನನ್ನು ಅದೃಷ್ಟ (ದೈವ) ಶಾಲಿಯೆಂದು ತಿಳಿಯಬೇಕು.

೭. ಹೀಗೆ ಅದೃಷ್ಟ (ದೈವ) ವೇ ಫಲಿಸುತ್ತಿರುವಾಗ ಪೌರುಷಪ್ರಯತ್ನ ಮಾಡಿದವರ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಪೌರುಷಸಂಪತ್ತಿನಿಂದ ಮಾಡುವ ಕಾರ್ಯಗಳೆಲ್ಲವೂ ಸಕಾಲದಲ್ಲಿ ಫಲಿಸಲು ಅಡ್ಡಿಯಿಲ್ಲ.

೮. ಅದೃಷ್ಟ, ಪ್ರಯತ್ನ, ಕಾಲಗಳೆಂಬ ಈ ಮೂರೂ ಉಂಡೆಯಾಗಿ ಸೇರಿಕೊಂಡು ಫಲಾವಹವಾಗುವುವು. ಇದಕ್ಕೆ ಉದಾಹರಣೆಯೇನೆಂದರೆ :- ಭೂಮಿಯನ್ನು ಚೆನ್ನಾಗಿ ಉತ್ತು ಬಿತ್ತಿ ಕೃಷಿಮಾಡಬೇಕು. ಈ ಕೃಷಿಗೆ ತಕ್ಕಂತೆ ಸಕಾಲದಲ್ಲಿ ಮಳೆಯೂ ಆದರೆ ಫಲವು ಕೈಗೆ ಬರುವಂತೆಯೇ, ದೈವಪುರುಷಕಾರಗಳ ಫಲವನ್ನು ತಿಳಿಯಬೇಕು. ಯಾವುದೊಂದರಲ್ಲಿ ಕೊರತೆಯಿದ್ದರೂ ಕಾರ್ಯವು ಫಲವಾಗುವಂತಿಲ್ಲ.

೯. ವ್ಯವಸಾಯಗಾರನಿಗೆ ಮಳೆಯಾದಮೇಲೆ ಎಷ್ಟೋ ದಿನಕ್ಕೆ ಕುಯ್ಲು ಕೈಗೆ ಬರುವಂತೆ ಸತ್ಕರ್ಮಾನುಷ್ಠಾನವನ್ನು ತಪ್ಪದೆ ಮಾಡುತ್ತಿರುವ ಪೌರುಷವಾದಿಗೆ ಕಾಲಾನುಸಾರವಾಗಿ ಫಲವಾಗಿಯೇ ಆಗುತ್ತದೆ. ಅಕಾಲದಲ್ಲಿ ಮಳೆ ಹುಯ್ದರೆ ಯಾವ ಫಲವೂ ಆಗದಿರುವಂತೆ ಧರ್ಮವನ್ನೂ, ಮನುಷ್ಯಜನ್ಮ ಲಾಭವಾದಾಗ ಮಾಡಿಬಿಡಬೇಕೆಂದು ಮುಖ್ಯಾಭಿಪ್ರಾಯವು.

ವಿಪತ್ತಾವಪಿ ಯಸ್ಯೇಹ ಪರಲೋಕೇ ಫಲಂ ಧ್ರುವಂ ।
ನಾಲಸಾಃ ಪ್ರಾಪ್ನುವಂತ್ಯರ್ಥಾನ್ನ ಚ ದೈವಪರಾಯಣಾಃ ।
ತಸ್ಮಾತ್ಸರ್ವಪ್ರಯತ್ನೇನಪೌರುಷೇ ಯತ್ನಮಾಚರೇತ್ ॥ ೧೦ ॥

ತ್ಯಕ್ತ್ವಾಲಸಾಙ್ದೈವಪರಾನ್ಮನುಷ್ಯಾ
ನುತ್ಥಾನಯುಕ್ತಾನ್ಪುರುಷಾನ್ಹಿ ಲಕ್ಷ್ಮೀಃ ।
ಅನ್ವಿಷ್ಯ ಯತ್ನಾದ್ವೃಣುತೇ ದ್ವಿಜೇಂದ್ರ
ತಸ್ಮಾತ್ಸಮುತ್ಥಾನವತಾ ಹಿ ಭಾವ್ಯಂ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಪುಷ್ಕರ ಸಂವಾದೇ ಪುರುಷಕಾರಾಧ್ಯಾಯೋ ನಾಮ ಷಟ್‌ಷಷ್ಟಿತಮೋಽಧ್ಯಾಯಃ

---

೧೦. ಎಂತಹ ಕಷ್ಟವೇ ಪ್ರಾಪ್ತವಾಗಲೀ ಯಾವನು ಸ್ವಧರ್ಮಾನುಷ್ಠಾನವನ್ನು ತಪ್ಪದೆ ಮಾಡುತ್ತಬರುವನೋ, ಅವನಿಗೆ ಈ ಲೋಕ, ಪರಲೋಕಗಳಲ್ಲಿ ಫಲವು ತಪ್ಪದೆ ಉಂಟಾಗಿಯೇ ಆಗುತ್ತದೆ. ಹೀಗೆ ಸ್ವಧರ್ಮಾನುಷ್ಠಾನವನ್ನು ಮಾಡದೆ ಪುರುಷಪ್ರಯತ್ನವನ್ನೂ ಸುತರಾಂ ಮಾಡದೆ ಯಾರು ಆಲಸ್ಯಪರವಶರಾಗಿ ನನ್ನ ಹಣೆಯಲ್ಲಿ ಬರೆದಂತೆ ಆಗುತ್ತದೆಯೆಂದು ದೈವ (ಅದೃಷ್ಟ) ದ ಮೇಲೆ ತಪ್ಪೆಳೆದು ದೈವಪರಾಯಣರಾಗಿರುವರೋ ಅವರಿಗೆ ಯಾವ ಪುರುಷಾರ್ಥವೂ ಸಿದ್ಧಿಸುವುದಿಲ್ಲ.

೧೧. ಆದುದರಿಂದ ಯಾವ ಮನುಷ್ಯರೇ ಆಗಲಿ ಧರ್ಮಸಹಿತವಾದ ಪುರುಷ ಕಾರ್ಯದಲ್ಲಿ ಆಸಕ್ತರಾಗಿರಬೇಕು. ಯಾರು ಆಲಸ್ಯವನ್ನು ಬಿಟ್ಟು ದೇವರ ಮೇಲೆ ಭಾರಹಾಕಿ ಔಚಿತ್ಯದಿಂದಲೂ, ಪೌರುಷದಿಂದಲೂ ಕಾರ್ಯನಿರ್ವಹಣಮಾಡುವರೋ ಅಂತಹವರು ಎಲ್ಲೆಲ್ಲಿರುವರೆಂಬುದನ್ನು ಲಕ್ಷ್ಮಿಯು ತಾನಾಗಿಯೇ ಹುಡುಕಿಕೊಂಡು ಅವರಲ್ಲಿಗೆ ಹೋಗಿ ಅಲ್ಲಿ ನೆಲೆಸುತ್ತಾಳಾದ್ದರಿಂದ, ಪ್ರತಿಯೊಬ್ಬರೂ ಈ ವಿಷಯಕ್ಕೆ ಜಾಗರೂಕತೆಯಿಂದ ಗಮನಕೊಡಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ಎರಡನೆಯ ಖಂಡದಲ್ಲಿ ಪುರುಷಕಾರಾಧ್ಯಾಯವೆಂಬ ಹೆಸರಿನ ಅರವತ್ತಾರನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತಷಷ್ಟಿತಮೋಽಧ್ಯಾಯಃ

**ರಾಮ ಉವಾಚ**

**ಉಪಾಯಾಂಸ್ತ್ವಂ ಸಮಾಚಕ್ಷ್ವ ಸಾಮಪೂರ್ವಾನ್ಮಹಾದ್ಯುತೇ ।**
**ಲಕ್ಷಣಂ ಚ ತಥಾ ತೇಷಾಂ ಪ್ರಯೋಗಂ ವರುಣಾತ್ಮಜ ॥ ೧ ॥**

**ಪುಷ್ಕರ ಉವಾಚ**

**ಸಾಮಭೇದೌ ತಥಾ ರಾಮ ದಂಡಂ ಚ ಮನುಜೋತ್ತಮ ।**
**ಉಪೇಕ್ಷಾ ಚ ತಥಾ ಮಾಯಾ ಇಂದ್ರಜಾಲಂಚ ಭಾರ್ಗವ ॥ ೨ ॥**

**ಪ್ರಯೋಗಾಃ ಕಥಿತಾಃ ಸಪ್ತ ತನ್ಮೇ ನಿಗದತಃ ಶೃಣು ।**
**ದ್ವಿವಿಧಂ ಕಥಿತಂ ಸಾಮ ತಥ್ಯಂ ಚಾತಥ್ಯಮೇವ ಚ ॥ ೩ ॥**

---

## ಅರವತ್ತೇಳನೆಯ ಅಧ್ಯಾಯವು

೧. ಪರಶುರಾಮನು ಕೇಳುತ್ತಾನೆ:—ಎಲೈ ವರುಣಪುತ್ರನಾದ ಪುಷ್ಕರನೇ, ಸಾಮವೇ ಮುಂತಾದ ನಾಲ್ಕು ಉಪಾಯಗಳುಂಟಷ್ಟೆ? ಆ ನಾಲ್ಕು ಉಪಾಯಗಳ ಲಕ್ಷಣವೇನು? ಅದನ್ನು ಪ್ರಯೋಗಮಾಡುವ ಕ್ರಮವೇನು? ಇದನ್ನು ದಯಮಾಡಿ ತಿಳಿಸಬೇಕೈ, ಮಹಾನುಭಾವ!

೨. ಪುಷ್ಕರನು ಹೇಳುತ್ತಾನೆ:—ಸಾಮ, ಭೇದಗಳೆಂದೂ, ದಂಡವೆಂದೂ, ಮಾಯವೆಂದೂ ನಾಲ್ಕು ವಿಧ ಪ್ರಯೋಗಗಳುಂಟು. ಇದರಲ್ಲಿ ಮಾಯವೆಂಬುದು ಇಂದ್ರಜಾಲ ವಿದ್ಯೆಗೆ ಸೇರಿರುವುದರಿಂದ ಇದನ್ನು ಉಪೇಕ್ಷೆಮಾಡಬೇಕು.

೩. ಇದಲ್ಲದೆ ಏಳು ವಿಧ ಪ್ರಯೋಗಗಳಿವೆ. ಅದರ ವಿವರಣೆಯನ್ನೀಗ ನಿನಗೆ ತಿಳಿಸುತ್ತೇನೆ. ಇದರಲ್ಲಿ ಸಾಮೋಪಾಯವು ಎರಡು ಬಗೆ. ಅವೆರಡಕ್ಕೂ ತಥ್ಯ (ನಿಜ), ಅತಥ್ಯ (ಸುಳ್ಳು) ಗಳೆಂದು ಹೆಸರು.

ತತ್ರಾಪ್ಯತಥ್ಯಂ ಸಾಧೂನಾಮಾಕ್ರೋಶಾಯೈವ ಜಾಯತೇ ।
ತಚ್ಚ ಸಾಧುಪ್ರಿಯಂ ತೇ ಚ ಸಾಮಸಾಧ್ಯಾ ನ ರಾಮ ತೇ ॥ ೪ ॥

ಮಹಾಕುಲೀನಾ ಋಜವೋ ಧರ್ಮನಿಷ್ಠಾ ಜಿತೇಂದ್ರಿಯಾಃ ।
ಸಾಮಸಾಧ್ಯಾ ನ ಚಾತಥ್ಯಂ ತೇಷುಸಾಮ ಪ್ರಯೋಜಯೇತ್ ॥ ೫ ॥

ತಥ್ಯಂ ಚ ಸಾಮಕರ್ತವ್ಯಂ ಕುಲಶೀಲಾದಿವರ್ಣನಂ ।
ತಥಾ ತದುಭಯಂ ರಾಮ ಕೃತಾನಾಂ ಚೈವ ವರ್ಣನಂ ॥ ೬ ॥

ಅನಯೈವ ತಥಾ ಯುಕ್ತ್ಯಾ ಕೃತಜ್ಞಖ್ಯಾಪನಂ ಸ್ವಕಂ ।
ಏವಂ ಸಾಂತ್ವೇನ ಕರ್ತವ್ಯಾ ವಶಗಾ ಧರ್ಮತತ್ಪರಾಃ ॥ ೭ ॥

---

೪. ಇವೆರಡರಲ್ಲಿ ಅತಥ್ಯೋಪಾಯವನ್ನು ಕಂಡರೆ ಸಾಧುಜನರು ಆಕ್ರೋಶ ಮಾಡುತ್ತಾರೆ. ಆದ್ದರಿಂದ ಸಾಧುಜನರಿಗೆ ಇಷ್ಟವಾದ ತಥ್ಯರೂಪವಾದ ಸಾಮೋಪಾಯವೇ ಸರ್ವೋತ್ತಮವಾದುದೆಂದು ತಿಳಿಯಬೇಕು.

೫. ಅತಥ್ಯವನ್ನು ಸರ್ವರೂ ನಿಂದಿಸುತ್ತಾರೆ. ಸತ್ಕುಲಪ್ರಸೂತರಾದ ಧರ್ಮಾತ್ಮರೂ, ಋಜುಮಾರ್ಗಾನುಗಾಮಿಗಳೂ, ಧರ್ಮಿಷ್ಠರೂ, ಜಿತೇಂದ್ರಿಯರೂ ಆದ ಜನರು ಸಾಮಸಾಧ್ಯರಾದವರಾದ್ದರಿಂದ ಅವರ ಮೇಲೆ ಅತಥ್ಯಾಸಾಮಪ್ರಯೋಗ ವನ್ನು ಮಾಡಬಾರದು.

೬. ತಥ್ಯಾಸಾಮೋಪಾಯವು ಸರ್ವಕಾಲದಲ್ಲೂ ಶ್ರೇಷ್ಠವಾದುದು. ಕುಲ ಶೀಲಾದಿವರ್ಣನಾತ್ಮಕವಾದುದು. ಈ ರೀತಿ ತಥ್ಯಾತಥ್ಯಾಸಾಮೋಪಾಯವೆರಡರ ಲಕ್ಷಣವನ್ನೀಗ ನಿನಗೆ ತಿಳಿಸುತ್ತೇನೆ.

೭. ಈ ವಿಧವಾದ ಸಾಮಯುಕ್ತಿಯಿಂದ, ತನ್ನಿಂದ ಲೋಕೋಪಕಾರ ವಾಗಿರುವ ವೃತ್ತಾಂತವನ್ನೆಲ್ಲಾ ಎದುರಾಳಿಗೆ ಮಂದಟ್ಟಾಗುವಂತೆ ತಿಳಿಸಿದರೆ ಧರ್ಮ ತತ್ಪರರಾದ ಸಾಧುಗಳು ಸಹಾ ಇದಕ್ಕೆ ವಶರಾಗುವರು

ಸಾಮ್ನಾ ಯದ್ಯಪಿ ರಕ್ಷಾಂಸಿ ಗೃಹ್ಣಂತೀತಿ ಪರಾ ಶ್ರುತಿಃ ।
ತಥಾಽಪ್ಯೇತದಸಾಧೂನಾಂ ಪ್ರಯುಕ್ತಂ ನೋಽಪಕಾರಕಂ ॥ ೮ ॥

ಅತಿಸಂಧಿಕಮಿತ್ಯೇವಪುರುಷಂ ಸಾಮವಾದಿನಂ ।
ಅಸಾಧವೋ ವಿಜಾನನ್ತಿ ತಸ್ಮಾತ್ತತ್ತೇಷು ವರ್ಜಿತಂ । ॥ ೯ ॥

ಯೇ ಶುದ್ಧವಂಶಾ ಋುಜವಃ ಪ್ರತೀತಾ
ಧರ್ಮೇ ಸ್ಥಿತಾಃ ಸತ್ಯಪರಾ ವಿನೀತಾಃ ।
ತೇ ಸಾಮಸಾಧ್ಯಾಃ ಪುರುಷಾಃ ಪ್ರದಿಷ್ಟಾ
ಮಾನೋನ್ನತಾ ಯೇ ಸತತಂ ಚ ರಾಮ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಪುಷ್ಕರ ಸಂವಾದೇ ಸಾಮವಿಧಿರ್ನಾಮ
ಸಪ್ತಷಷ್ಟಿತಮೋಽಧ್ಯಾಯಃ

---

೮. ಸಾಮೋಪಾಯ (ಉಪಾಯವಾದ ಮಾತುಗಳು) ದಿಂದ ರಾಕ್ಷಸರನ್ನು ಸಹಾ ಸ್ವಾಧೀನಮಾಡಿಕೊಳ್ಳಬಹುದೆಂದು ಶ್ರುತಿಯೂ ಕೂಡ ಹೇಳುತ್ತದೆ. ಈ ವಿಧವಾದ ಸಾಮೋಪಾಯವನ್ನು ದುಷ್ಟರಮೇಲೆ ಪ್ರಯೋಗಿಸುವುದಕ್ಕೆ ಹೋದರೆ ಅದರಿಂದ ಅಪಕಾರವೇ ಆಗುತ್ತದೆ.

೯. ಇಂತಹ ಅಸಾಧುಗಳಾದ ಜನರು ಈ ಸಾಮೋಪಾಯವನ್ನು ಅತಿ ಸಂಧಿಕವೆಂದು ತಿಳಿಯುತ್ತಾರಾದ್ದರಿಂದ ಅವರ ವಿಷಯದಲ್ಲಿ ಈ ಉಪಾಯವನ್ನು ಪ್ರಯೋಗಿಸಲೇಬಾರದು.

೧೦. ಯಾರು ಪರಮಪವಿತ್ರವಾದ ವಂಶದಲ್ಲಿ ಹುಟ್ಟಿರುವರೋ, ಋಜು ಮಾರ್ಗದಲ್ಲಿ ನಡೆಯುತ್ತಿರುವರೋ, ಮತ್ತದಾರು ಧರ್ಮಾತ್ಮರೋ, ಇನ್ನಾವ ಜನರು ಸತ್ಯಪರಾಯಣರಾಗಿಯೂ, ವಿನೀತರಾಗಿಯೂ ಇರುವರೋ, ಅಂತಹಮಹನೀಯ ರನ್ನು ಸಾಮೋಪಾಯದಿಂದಲೇ ಸ್ವಾಧೀನಮಾಡಿಕೊಳ್ಳಬೇಕು. ಇಂತಹ ಸಾಧುಗಳು ಮಾನೋನ್ನತರೆಂದು ಹೇಳಲ್ಪಟ್ಟಿರುವರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದ
ರೂಪವಾದ ಎರಡನೆಯ ಖಂಡದಲ್ಲಿ ಸಾಮವಿಧಿಯೆಂಬ ಹೆಸರಿನ
ಅರವತ್ತೇಳನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಅಷ್ಟಷಷ್ಟಿತಮೋಽಧ್ಯಾಯಃ

### ಪುಷ್ಕರ ಉವಾಚ

**ಪರಸ್ಪರಂ ತು ಯೇ ದುಷ್ಟಾಃ ಕ್ರುದ್ಧಾ ಭೀತಾವಮಾನಿತಾಃ ।**
**ತೇಷಾಂ ಭೇದಂ ಪ್ರಯುಂಜೀತ ಭೇದಸಾಧ್ಯಾಹಿ ತೇ ಮತಾಃ ॥ ೧ ॥**

**ಯೇ ತು ಯೇನೈವ ದೋಷೇಣ ಪರಸ್ಮಾದ್ರಾಮ ಬಿಭ್ಯತಿ ।**
**ತೇ ತು ತದ್ದೋಷಪಾತೇನ ಭೇದನೀಯಾ ಭೃಶಂ ತತಃ ॥ ೨ ॥**

**ಆತ್ಮೀಯಾದ್ದರ್ಶಯೇದಾಶಾಂ ಪರಸ್ಮಾದ್ದರ್ಶಯೇದ್ಭಯಂ ।**
**ಏವಂ ಹಿ ಭೇದಯೇದ್ಭಿನ್ನಾನ್ಯಥಾವದ್ವಶಮಾನಯೇತ್ ॥ ೩ ॥**

---

### ಅರವತ್ತೆಂಟನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಇನ್ನು ಭೇದೋಪಾಯವನ್ನೆಲ್ಲಿ ಪ್ರಯೋಗಿಸಬೇಕೆಂಬ ವಿಚಾರವನ್ನು ತಿಳಿಸುತ್ತೇನೆ, ಪರಸ್ಪರವಾಗಿ ಯಾರು ದುಷ್ಟರಾಗಿರುವರೋ ಕ್ರೋಧಾನ್ವಿತರಾಗಿ ಒಬ್ಬರಿಗೊಬ್ಬರು ಹೆದರುತ್ತಾ, ಅವಮಾನಮಾಡುತ್ತಿರುವವರಾರೋ ಅವರ ವಿಷಯದಲ್ಲಿ ಭೇದೋಪಾಯವನ್ನು ಪ್ರಯೋಗಿಸಬೇಕು. ಅಂತಹ ಜನರು ಭೇದಸಾಧ್ಯರೆಂದೇ ಖಂಡಿತವಾಗಿ ಅರಿತಿರಬೇಕು.

೨. ಯಾರು ತಮ್ಮಲ್ಲಿರುವ ಯಾವ ದೋಷದಿಂದ ಕೂಡಿದವರಾಗಿ ಇತರರಿಗೆ ಹೆದರುತ್ತಾ ಇರುವರೋ ಅಂಥವರು, ಆ ದೋಷಜ್ಞಾನಿಂದಲೇ ಬಹಳ ಜಾಗ್ರತೆಯಾಗಿ ಭೇದಿಸಲ್ಪಡಲು ಸಾಧ್ಯರಾಗುವರು.

೩. ಭೇದೋಪಾಯದ ಲಕ್ಷಣವೇನೆಂದರೆ;—ಒಬ್ಬ ಮನುಷ್ಯನಿಗೆ ತಾನು ವಿಶೇಷಆಶೆಯನ್ನು ತೋರಿಸಬೇಕು. ಆ ಮನುಷ್ಯನನ್ನೇ ಇನ್ನೊಬ್ಬ ಮನುಷ್ಯನಿಂದ ಹೆದರಿಸಿಸಬೇಕು. ಇದೇ ರೀತಿಯಾಗಿ ಯಾರನ್ನು ಬೇಕಾದರೂ ವಶಮಾಡಿಕೊಳ್ಳಬೇಕು.

**ಸಂಹಿತಾ ಹಿ ವಿನಾ ಭೇದಂ ಶಕ್ರೇಣಾಪಿ ಸುದುಃಸಹಾ ।**
**ಭೇದಮೇವ ಪ್ರಶಂಸಂತಿ ತಸ್ಮಾನ್ನಯವಿಶಾರದಾಃ ॥ ೪ ॥**

**ಸ್ವಮುಖೇನಾಥ ಯದ್ಭೇದಂ ಪರಮುಖೇನ ಚ ।**
**ಪರೀಕ್ಷ್ಯ ಸಾಧು ಮನ್ಯೇಽಹಂ ಭೇದಂ ಪರಮುಖಾಚ್ಛ್ರುತಂ ॥ ೫ ॥**

**ಭೇದ್ಯಾ ಸ್ವಕಾರ್ಯಮುದ್ದಿಶ್ಯ ಕುಶಲೈರ್ಯೇ ಹಿ ಭೇದಿತಾಃ ।**
**ಭೇದಿತಾಸ್ತೇ ವಿನಿರ್ದಿಷ್ಟಾ ನೈವ ರಾಜಾರ್ಥವಾದಿಭಿಃ ॥ ೬ ॥**

**ಅಂತಃ ಕೋಪಬಹಿಃಕೋಪೌ ಯತ್ರ ಸ್ಯಾತಾಂ ಮಹೀಕ್ಷಿತಾಂ ।**
**ಅಂತಃ ಕೋಪೋ ಮಹಾಂಸ್ತತ್ರ ನಾಶನಃ ಪೃಥಿವೀಕ್ಷಿತಾಂ ॥ ೭ ॥**

---

೪. ಒಬ್ಬ ಮನುಷ್ಯನು ಏಕದೇಶವಾಗಿ ಏನನ್ನೂ ಸಾಧಿಸಲಾರನು. ಅದಕ್ಕಾಗಿ ಜನರು ಗುಂಪಾಗಿದ್ದರೆ ಕಾರ್ಯವನ್ನು ಬೇಗ ಸಾಧಿಸಬಹುದು. ಗುಂಪುಕೂಡದೆ ಇದ್ದರೆ ಇಂದ್ರನೇ ಆಗಲಿ ಒಬ್ಬನಿಂದಲೇ ಕೆಲಸಮಾಡಲು ಅಸಾಧ್ಯವಾಗುವುದು. ಆದ್ದರಿಂದ ನಯಶಾಸ್ತ್ರವಿಶಾರದರಾದ ಜನರು ಭೇದೋಪಾಯವನ್ನು ವಿಶೇಷವಾಗಿ ಹೊಗಳಿರುತ್ತಾರೆ.

೫. ತನ್ನ ಮೂಲಕ ಅದಾವ ಭೇದವು ಸಾಧಿಸಲ್ಪಟ್ಟಿತೋ, ಮತ್ತೊಬ್ಬನ ಮುಖದಿಂದ ಯಾವ ಭೇದೋಪಾಯವು ಮಾಡಲ್ಪಟ್ಟಿತೋ, ಅವೆರಡನ್ನೂ ಚೆನ್ನಾಗಿ ಪರೀಕ್ಷಿಸಿ ಅದರ ಫಲವನ್ನು ಬೇರೆ ಮತ್ತೊಬ್ಬ ಪುರುಷನ ಮೂಲಕ ಕೇಳಿ ತಿಳಿದುಕೊಳ್ಳಬೇಕು.

೬. ತನ್ನ ಸ್ವಂತ ಕೆಲಸವನ್ನು ಉದ್ದೇಶಮಾಡಿಕೊಂಡು ಯಾರ್‍ಯಾರನ್ನು ಭೇದೋಪಾಯದಿಂದ ಜಯಿಸಬೇಕೋ, ಅಂತಹ ಜನರನ್ನೆಲ್ಲಾ ಕುಶಲೋಪಾಯದಿಂದ ಜಯಿಸಿಬಿಡಬೇಕು. ಈ ರೀತಿ ಭೇದಿಸಲ್ಪಟ್ಟ ಜನರು ರಾಜಾರ್ಥವಾದಿಗಳಿಂದ ಮೊದಲೇ ನಿರ್ದೇಶಮಾಡಲ್ಪಟ್ಟವರಾಗಿರಬೇಕು.

೭. ಯಾವ ಮಹಾರಾಜರಿಗೆ ಯಾವ ಶತ್ರುವಿನ ವಿಷಯದಲ್ಲಿ ಅಂತಃಕೋಪ ಬಹಿಃಕೋಪಗಳೆರಡೂ ಇರುವುವೋ, ಅದರಲ್ಲೂ ಯಾರ ವಿಷಯದಲ್ಲಿ ಅಂತಃಕೋಪ (ಅಂತಸ್ತಾಪ) ವೇ ಹೆಚ್ಚುತ್ತಲಿರುವುದೋ, ಅಂತಹ ಅಂತಸ್ತಾಪಕ್ಕೊಳಗಾದ ಶತ್ರುರಾಜನು ನಾಶವಾದಂತೆಯೇ ಸರಿ.

ಸಾಮಂತಕೋಪೋ ಬಾಹ್ಯಸ್ತು ಕೋಪಃ ಪ್ರೋಕ್ತೋ ಮನೀಷಿಭಿಃ।
ಮಹಿಷೀಯುವರಾಜಾಭ್ಯಾಂ ತಥಾ ಸೇನಾಪತೇರ್ದ್ವಿಜ ॥ ೮ ॥

ಅಮಾತ್ಯಾನ್ಮಂತ್ರಿಪುತ್ರಾಚ್ಚ ರಾಜಪುತ್ರಾತ್ತಥೈವ ಚ।
ಅಂತಃ ಕೋಪೋ ವಿನಿರ್ದಿಷ್ಟೋ ದಾರುಣಃ ಪೃಥಿವೀಕ್ಷಿತಾಂ ॥ ೯ ॥

ಬಹಿಃಕೋಪೇ ಸಮುತ್ಪನ್ನೇ ಸುಮಹತ್ಯಪಿ ಪಾರ್ಥಿವಃ।
ಶುದ್ಧಾಂತಸ್ತು ಮಹಾಭಾಗ ಶೀಘ್ರಮೇವ ಜಯೇದರೀನ್ ॥ ೧೦ ॥

ಅಪಿ ಶಕ್ರಸಮೋ ರಾಜಾ ಕೋಪೇನಾಂತರ್ವಿನಶ್ಯತಿ।
ಸ್ವಾಂತಃ ಕೋಪಂ ಪ್ರಯತ್ನೇನ ತಸ್ಮಾದ್ಯತ್ನಾತ್ಪರೀಕ್ಷತಾ ॥ ೧೧ ॥

---

೮. ಮೇಲೆ ವಿವರಿಸಿದ ಬಾಹ್ಯಕೋಪ, ಅಂತಃಕೋಪಗಳ ಗೂಢಾರ್ಥವನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ—ಸಾಮಂತರ ಕೋಪ, ಮಹಾರಾಣಿಯ ಕೋಪ, ಯುವರಾಜ ಮತ್ತು ಸೇನಾಧಿಪತಿಯ ಕೋಪಗಳನ್ನು ಅರಿತ ಪಂಡಿತರು ರಾಜನ ಬಾಹ್ಯಕೋಪವೆಂದು ಹೇಳುವರು. ಅಂದರೆ ಮೇಲೆ ಬರೆದ ಜನರ ಕೋಪಕ್ಕೊಳಗಾದ ಮನುಷ್ಯನು ರಾಜನ ಕೋಪಕ್ಕೊಳಗಾದಂತೆಯೇ ಭಾವಿಸಬೇಕು.

೯. ಅಮಾತ್ಯನಿಂದಲೂ, ಮಂತ್ರಿಪುತ್ರನಿಂದಲೂ, ರಾಜಪುತ್ರನಿಂದಲೂ, ಹೊರಟ ಕೋಪವು ರಾಜನ ಅಂತಃಕೋಪಕ್ಕೆ ಸಮಾನವಾದುದು. ಮಹಾರಾಜರಿಗೆ ಈ ಅಂತಃಕೋಪವು ಉತ್ಪನ್ನವಾದರೆ ದಾರುಣವಾದ ಪರಿಣಾಮವುಂಟಾಗುವುದು.

೧೦. ಹೊರಗಣ ಬಾಹ್ಯಕೋಪವು ಮಹಾರಾಜನಿಗೆ ಹೆಚ್ಚಿದಷ್ಟೂ ಶುದ್ಧಾಂತಃಕರಣನಾದ ಆ ಮಹಾರಾಜನ ಶತ್ರುಗಳು ಶೀಘ್ರವಾಗಿ ನಾಶಹೊಂದುವರು. ಅಂದರೆ ಸಾಮಂತರು ಮತ್ತು ಸೈನ್ಯಾಧಿಪತಿಗಳು ಕುಪಿತರಾದರೆ ಶತ್ರುಜಯವು ಸಿದ್ಧವಾಗಿಯೇ ಇರುವುದೆಂದು ಇಲ್ಲಿ ಭಾವಾರ್ಥವು.

೧೧. ಮಹಾರಾಜನಾದವನು ಇಂದ್ರ ಸದೃಶನೇ ಆಗಿರಲಿ, ಅಂತಃಕೋಪ ಪಾತ್ರನಾದರೆ ನಾಶವಾಗಿ ಹೋಗುತ್ತಾನೆ. ಆದುದರಿಂದ ತನ್ನ ಅಂತಃಕೋಪವನ್ನು ಕ್ಷಿಪ್ರಪ್ರಯತ್ನದಿಂದ ಪರೀಕ್ಷಿಸಿ ತಿಳಿದುಕೊಂಡಿರಬೇಕು. (ಮೇಲಿನ ಶ್ಲೋಕಾಭಿಪ್ರಾಯಾನುಸಾರವಾಗಿ.)

ಪರಾಂತಃ ಕೋಪಮುತ್ಪಾದ್ಯ ಭೇದೇನ ವಿಜಿಗೀಷುಣಾ ।
ರಕ್ಷ್ಯಶ್ಚೈವ ಪ್ರಯತ್ನೇನ ಜ್ಞಾತಿಭೇದಸ್ತಥಾತ್ಮನಃ ॥ ೧೨ ॥

ಜ್ಞಾತಯಃ ಪರಿತಪ್ಯಂತೇ ಸತತಂ ಯದ್ಯಪಿ ಶ್ರಿಯಾ ।
ತಥಾಪಿ ತೇಷಾಂ ಕರ್ತವ್ಯಂ ಸುಗಂಭೀರೇಣ ಚೇತಸಾ ॥ ೧೩ ॥

ಗ್ರಾಹಣಂ ದಾನಮಾನಾಭ್ಯಾಂ ಭೇದಸ್ತೇಭ್ಯೋ ಭಯಂಕರಃ ।
ನಾಜ್ಞಾತಿರನುಗೃಹ್ಣಾತಿ ನಾಜ್ಞಾತಿಃ ಸ್ನೇಹಮಿಚ್ಛತಿ ॥ ೧೪ ॥

ಜ್ಞಾತಿಭಿರ್ಭೇದನೀಯಾಸ್ತು ರಿಪವಸ್ತೇನ ಪಾರ್ಥಿವೈಃ ॥ ೧೫ ॥

---

೧೨. ಜಯಿಸಲಪೇಕ್ಷೆಯುಳ್ಳ ಮಹಾರಾಜನು ಭೇದೋಪಾಯದಿಂದ ಪರರಾಜರಿಗೆ ಅಂತಃಕೋಪವನ್ನುತ್ಪನ್ನಮಾಡಿ ತನ್ನನ್ನು ಸಂರಕ್ಷಿಸಿಕೊಳ್ಳಬೇಕು. ಇದೇ ಮೇರೆ ಜ್ಞಾತಿಭಯದಿಂದಲೂ ತಪ್ಪಿಸಿಕೊಳ್ಳುವ ಪ್ರಯತ್ನಮಾಡಬೇಕು.

೧೩. ಅತ್ಯಂತ ಐಶ್ವರ್ಯಶಾಲಿಯನ್ನು ಕಂಡರೆ ಜ್ಞಾತಿಗಳೂ ಸಹ ಸಂತಾಪ ಹೊಂದುತ್ತಾರೆ. ಆದ್ದರಿಂದ ಆ ಐಶ್ವರ್ಯವಂತನು ಅವರ ಮೇಲೆ ಅಸಹನವನ್ನು ತೋರ್ಪಡಿಸಿಕೊಳ್ಳದೆ ಬಹಳ ಗಂಭೀರವಾದ ಮನಸ್ಸಿನಿಂದಿರಬೇಕು.

೧೪. ದಾನಮಾನಾದ್ಯುಪಾಯಗಳಿಗಿಂತ ಭೇದೋಪಾಯವು ಬಹಳ ಭಯಂಕರವಾದದು. ಇದರಿಂದ ಜನರನ್ನು ಸ್ವಾಧೀನಪಡಿಸಿಕೊಳ್ಳುವುದು ಕಷ್ಟ. ಜ್ಞಾತಿಗಳು ಯಾವುದಕ್ಕೂ ಬಗ್ಗುವವರಲ್ಲ. ಜ್ಞಾತಿಗಳು ಸ್ನೇಹವನ್ನೂ ಅಪೇಕ್ಷಿಸುವವರಲ್ಲ.

೧೫. ಜ್ಞಾತಿಗಳ ದೆಸೆಯಿಂದ ರಾಜರಾದವರು ಶತ್ರುಗಳ ಭೇದೋಪಾಯದಿಂದ ಬಗ್ಗಿಸಿ ಅವರನ್ನು ಸ್ವಾಧೀನಮಾಡಿಕೊಳ್ಳಬೇಕು.

**ಭಿನ್ನಾಹಿ ಶಕ್ಯಾ ರಿಭವಃ ಪ್ರಭೂತಾಃ**
**ಸ್ವಲ್ಪೇನ ಸೈನ್ಯೇನ ನಿಹಂತುಮಾಜೌ ।**
**ಸುಸಂಹಿತೇನಾಥ ತತಸ್ತು ಭೇದಃ**
**ಕಾರ್ಯೋ ರಿಪೂಣಾಂ ನಯಶಾಸ್ತ್ರವಿದ್ಭಿಃ ॥ ೧೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಭೇದವಿಧಾನಂನಾಮಾಷ್ಟಷಷ್ಟಿತಮೋಽಧ್ಯಾಯಃ**

---

೧೬. ನೀತಿಶಾಸ್ತ್ರ ವಿಚಕ್ಷಣರಾದವರು ಹೇಳುವುದೇನೆಂದರೆ ;— ಬಹಳಮಂದಿ ಶತ್ರುಗಳೇ ಇದ್ದಾಗ್ಯೂ ಅವರೆಲ್ಲರನ್ನೂ ಭಿನ್ನತಂತ್ರ (ಭೇದೋಪಾಯ) ದಿಂದ ಸುಲಭವಾಗಿ ಸ್ವಾಧೀನಮಾಡಿಕೊಳ್ಳಬಹುದು. ಈ ರೀತಿ ಸ್ವಾಧೀನರಾದ ಶತ್ರುಗಳನ್ನು ಯುದ್ಧರಂಗದಲ್ಲಿ ಸ್ವಲ್ಪವೇ ಸೈನ್ಯದಿಂದ ಸಂಹರಿಸಬಹುದು. ಆದರೆ ಭೇದೋಪಾಯ ಮಾಡುವಾಗ ಒಬ್ಬನೇ ಖಂಡಿತವಾಗಿ ಪ್ರವೇಶಮಾಡಬಾರದು. ಗುಂಪಾಗಿಯೇ ಕಾರ್ಯಸಾಧನೆ ಮಾಡಬೇಕಾದ್ದೇ ಭೇದೋಪಾಯದ ಮೂಲ ಮಂತ್ರಾರ್ಥ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಎರಡನೆಯ ಖಂಡದಲ್ಲಿ ಭೇದವಿಧಾನವೆಂಬ ಹೆಸರಿನ ಅರವತ್ತೆಂಟನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಏಕೋನಸಪ್ತತಿತಮೋಽಧ್ಯಾಯಃ

### ಪುಷ್ಕರ ಉವಾಚ

ಸರ್ವೇಷಾಮುಪ್ಯುಪಾಯಾನಾಂ ದಾನಂ ಶ್ರೇಷ್ಠತಮಂ ಮತಂ ।
ಸುದತ್ತೇನೈವ ಭವತಿ ದಾನೇನೋಭಯಲೋಕಜಿತ್ ॥ ೧ ॥

ಸ ನಾಸ್ತಿ ರಾಮ ದಾನೇನ ವಶಗೋ ಯೋ ನ ಜಾಯತೇ ।
ದಾನವಾನ್ನೋಚರಂ ನೈತಿ ತಥಾ ರಾಮಾಪದಾಂ ಕ್ವಚಿತ್ ॥ ೨ ॥

ದಾನವಾನೇವ ಶಕ್ನೋತಿ ಸಂಹತಾನ್ಭೇದಿತುಂ ಪರಾನ್ ।
ಯದ್ಯಪ್ಯಲುಬ್ಧಾ ಗಂಭೀರಾಃ ಪುರುಷಾಃ ಸಾಗರೋಪಮಾಃ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಸಕಲವಾದ ಉಪಾಯಗಳೊಳಗೆಲ್ಲಾ ದಾನವೇ ಅತ್ಯುತ್ತಮವಾದ ಉಪಾಯವೆಂದು ತಿಳಿಯಬೇಕು. ಸುದತ್ತವಾದ ದಾನದಿಂದ ಉಭಯ ಲೋಕಗಳನ್ನೂ ಜಯಿಸಬಹುದು.

೨. ದಾನಕ್ಕೆ ವಶನಾಗದವನು ಲೋಕದಲ್ಲೆಲ್ಲಾ ಹುಡುಕಿದರೂ ಸಿಗಲಾರನು. ಆದರೆ ಅಂತಹ ಮಹಾದಾನಿಯಾದ ಪುರುಷನು ತಾನೇ ಸಿಕ್ಕುವುದು ದುರ್ಲಭವು. ಆ ಸನ್ನಿವೇಶದಲ್ಲಿ ದಾನಕೊಡುವವನು ಸಿಕ್ಕಬೇಕಾದರೆ ಸುಖಮಾಡಿರಬೇಕು.

೩. ದಾನಶೀಲನಾದ ಪುರುಷನು ಎಂತಹ ಸೈನ್ಯದಿಂದ ಕೂಡಿದ ಶತ್ರುಗಳನ್ನಾದರೂ ಸುಲಭವಾಗಿ ಜಯಿಸಲು ಸಮರ್ಥನಾಗುವನು. ಎದುರಾಳಿಯ ಬಳಿ ಆಶಾರಹಿತರಾದ ಮತ್ತು ಗಂಭೀರಾಶಯರಾದ ಸಾಗರೋಪಮರಾದ ಸೈನಿಕರು ಎಷ್ಟೇ ಮಂದಿ ಇರಲಿ, ಅವರೆಲ್ಲರನ್ನೂ ದಾನೋಪಾಯದಿಂದ ವಶಮಾಡಿಕೊಂಡು ಬಿಡಬಹುದು.

ನ ಗೃಹ್ಣಂತಿ ತಥಾಪ್ಯೇತೇ ಜಾಯಂತೇ ಪಕ್ಷಪಾತಿನಃ ।
ಅನ್ಯತ್ರಾಪಿ ಕೃತಂ ದಾನಂ ಕರೋತ್ಯನ್ಯಾಂಸ್ತಥಾ ಪರೈಃ ॥ ೪ ॥

ಉಪಾಯೇಭ್ಯಃ ಪ್ರಯಚ್ಛಂತಿ ದಾನಂ ಶ್ರೇಷ್ಠತಮಂ ನರಾಃ ।
ದಾನಂ ಸಂವರ್ಧನಂ ಶ್ರೇಷ್ಠಂ ದಾನಂ ಶ್ರೇಯಸ್ಕರಂ ಪರಂ ॥ ೫ ॥

ದಾನವಾನೇವ ಲೋಕೇಷು ಪುತ್ರವತ್ಪ್ರೀಯತೇ ಸದಾ । ॥ ೬ ॥

ನ ಕೇವಲಂ ದಾನಪರಾ ಜಯಂತಿ
ಭೂಲೋಕಮೇಕಂ ಪುರುಷಪ್ರವೀರ ।

---

೪. ಇಷ್ಟಾದಾಗ್ಯೂ ಇವರು ದಾನವನ್ನು ಪರಿಗ್ರಹಿಸದೆ ಪರಪಕ್ಷವನ್ನು ವಹಿಸುವುದು ಅಷ್ಟು ಸುಲಭವಾದ ಕೆಲಸವಲ್ಲ. ಇವರಲ್ಲದೆ ಬೇರೆ ಇತರ ಜನರಿಗೆ ದಾನಕೊಟ್ಟು ಅವರನ್ನು ಸುಲಭವಾಗಿ ಸ್ವಾಧೀನಮಾಡಿಕೊಳ್ಳಬಹುದು. (ಇವೆಲ್ಲಾ ಯುದ್ಧಸಮಯದಲ್ಲಿ ಜನರನ್ನು ಕೂಡಿ ಹಾಕುವ ಉಪಾಯಗಳು.)

೫. ನಾನಾ ವಿಧವಾದ ಉಪಾಯಗಳಿಗಿಂತ ಹಣವನ್ನು ಕೊಡುವುದೇ ಸರ್ವೋತ್ತಮವಾದ ಸಾಧನೋಪಾಯವೆಂದು ತಿಳಿದಿರುವುದರಿಂದಲೇ ಯುದ್ಧಸಮಯದಲ್ಲಿ ನೀರಿನಂತೆ ಹಣವನ್ನು ವೆಚ್ಚಮಾಡಿ ಈ ಉತ್ತಮೋಪಾಯದಿಂದ ಸೈನಿಕರನ್ನು ಕೂಡಿಹಾಕುವ ಪದ್ಧತಿಯು ಈಗಲೂ ನಮ್ಮೆದುರಿಗೆ ಕಾಣುತ್ತಲೇ ಇದೆ. ಆದುದರಿಂದ ದಾನವೇ ಶ್ರೇಯಸ್ಕರವೆಂದು ತಿಳಿದುಕೊಳ್ಳಬೇಕು.

೬. ಲೋಕದಲ್ಲದಾವ ಮನುಷ್ಯನು ದಾನಶೀಲನಾಗಿರುವನೋ ಅಂತಹ ಮನುಷ್ಯನು ಜನರನ್ನು ಮಕ್ಕಳಂತೆ ಸಲಹುವನು.

೭. ಪರಶುರಾಮ! ಕೇಳು. ದಾನಪರರಾದ ಮನುಷ್ಯರು ಈ ಭೂಲೋಕವೊಂದನ್ನೇ ತಮ್ಮ ದಾನಶೌಂಡತ್ವದಿಂದ ಗೆಲ್ಲುವರೆಂದು ತಿಳಿಯಬೇಡ. ಅಂತಹ

**ಜಯಂತಿ ತೇ ರಾಮ ಸುರೇಂದ್ರಲೋಕಂ**
**ಸುದುರ್ಜಯಂ ಯದ್ವಿಬುಧಾಧಿವಾಸಂ ॥ ೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಪುಷ್ಕರ ಸಂವಾದೇ ದಾನವಿಧಿರ್ನಾಮೈಕೋನ ಸಪ್ತತಿತಮೋಽಧ್ಯಾಯಃ**



ಮಹನೀಯರು ದೇವೇಂದ್ರನಿಂದಾಳಲ್ಪಡುತ್ತಿರುವ, ದೇವತೆಗಳ ವಾಸಸ್ಥಳವಾದ ದೇವಲೋಕವನ್ನೂ ಸಹ ಜಯಿಸಲಿಕ್ಕೂ ಸಾಮರ್ಥ್ಯವುಳ್ಳವರೆಂದು ತಿಳಿದುಕೋ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ದಾನವಿಧಿಯೆಂಬ ಹೆಸರಿನ
ಅರವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತತಿತಮೋಽಧ್ಯಾಯಃ

### ಪುಷ್ಕರ ಉವಾಚ

ನ ಶಕ್ಯಾ ಯೇ ಸ್ವಯಂ ಕರ್ತುಂ ಚೋಪಾಯತ್ರಿತಯೇನ ತು ।
ದಂಡೇನ ತಾನ್ವಶೀಕುರ್ಯಾದ್ದಂಡೋ ಹಿ ವಶಕೃತ್ಪರಃ ॥ ೧ ॥

ಸಮ್ಯಕ್ಪ್ರಣಯನಂ ತಸ್ಯ ಸದಾ ಕಾರ್ಯಂ ಮಹೀಕ್ಷಿತಾ ।
ಧರ್ಮಶಾಸ್ತ್ರಾನುಸಾರೇಣ ಸುಸಹಾಯೇನ ಧೀಮತಾ । ॥ ೨ ॥

ತಸ್ಯ ಸಮ್ಯಕ್ಪ್ರಣಯನಂ ತ್ರಿದಶಾನಪಿ ಪೀಡಯೇತ್ ।
ವಾನಪ್ರಸ್ಥಾಂಶ್ಚ ಧರ್ಮಜ್ಞ ನಿರ್ದೋಷಾನ್ನಿಷ್ಪರಿಗ್ರಹಾನ್ ॥ ೩ ॥

---

### ಎಪ್ಪತ್ತನೆಯ ಅಧ್ಯಾಯವು

೧. ಪುಷ್ಕರನು ಪುನಃ ಹೇಳುತ್ತಾನೆ:—ಇದುವರಿವಿಗೆ ನಾನು ನಿರೂಪಿಸಿದ ಸಾಮದಾನಭೇದಗಳೆಂಬ ಉಪಾಯತ್ರಯಗಳಿಗೆ ಯಾರು ಅಧೀನರಾಗುವುದಿಲ್ಲವೋ ಅಂತಹವರನ್ನು ನಾಲ್ಕನೆಯ ದಂಡೋಪಾಯದಿಂದಲೇ ಸ್ವಾಧೀನಮಾಡಿಕೊಳ್ಳಬೇಕು.

೨. ಜನರು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಬೇಕಾದುದು ಮಹಾರಾಜನ ಮುಖ್ಯವಾದ ಕೆಲಸ. ವಿವೇಕಿಯಾದ ಮಹಾರಾಜನು ಜನರೆಲ್ಲರನ್ನೂ ಧರ್ಮಶಾಸ್ತ್ರದಲ್ಲಿ ವಿಧಿಸಿರುವ ಕಟ್ಟುಕಟ್ಟಲೆಗಳನ್ನು ಅನುಸರಿಸಿ ನಡೆಯುವಂತೆ ವಿಧಿಸಬೇಕು.

೩. ಯಾರು ಶಾಸ್ತ್ರವಿಧಿಗಳಿಗೆ ಬದ್ಧರಾಗಿ ನಡೆಯುವರೋ ಅಂಥವರು, ನಿಷ್ಪರಿಗ್ರಹರಾದ-ನಿರಾಶರಾದ ವಾನಪ್ರಸ್ಥರನ್ನೂ ದೇವತೆಗಳನ್ನೂ ಸಹ ಹೆದರುವಂತೆ ಮಾಡಬಲ್ಲವರಾದುದರಿಂದ ಧರ್ಮಮಾರ್ಗ ಪ್ರಣಯನವು ಮುಖ್ಯವಾದುದು.

ಸ್ವದೇಶೇ ಪರದೇಶೇ ಚ ಧರ್ಮಶಾಸ್ತ್ರವಿಶಾರದಾಃ ।
ಸಮೀಕ್ಷ್ಯ ಪ್ರಣಯೇದ್ದಂಡಂ ಸರ್ವಂ ದಂಡೇ ಪ್ರತಿಷ್ಠಿತಂ ॥ ೪ ॥

ಆಶ್ರಮೀ ಯದಿ ವಾ ವರ್ಣೀ ಪೂಜ್ಯೋಽಥವಾ ಗುರುರ್ಮಹಾನ್ ।
ನಾದಂಡ್ಯೋ ರಾಮ ರಾಜ್ಞಾ ತು ಯಃ ಸ್ವಧರ್ಮೇ ನ ತಿಷ್ಠತಿ ॥ ೫ ॥

ಅದಂಡ್ಯಾನ್ದಂಡಯನ್ರಾಜಾ ದಂಡ್ಯಾಂಶ್ಚೈವಾದಂಡಯನ್ ।
ಇಹ ರಾಜ್ಯಪರಿಭ್ರಷ್ಟೋ ನರಕಂ ಪ್ರತಿಪದ್ಯತೇ ॥ ೬ ॥

ತಸ್ಮಾದ್ರಾಜ್ಞಾ ವಿನೀತೇನ ಧರ್ಮಶಾಸ್ತ್ರಾನುಸಾರತಃ ।
ದಂಡಪ್ರಣಯನಂ ಕಾರ್ಯಂ ಲೋಕಾನುಗ್ರಹಕಾಮ್ಯಯಾ ॥ ೭ ॥

---

೪. ಧರ್ಮಶಾಸ್ತ್ರವಿಶಾರದರಾದವರು ಸ್ವದೇಶದಲ್ಲಾಗಲೀ ಪರದೇಶದಲ್ಲಾಗಲೀ ಶಾಸ್ತ್ರಪಂಕ್ತಿಯನ್ನು ನೋಡಿ ತಪ್ಪಿತಸ್ಥರಿಗೆ ದಂಡವನ್ನು ವಿಧಿಸಬೇಕು. ಸಕಲವೂ ದಂಡದಲ್ಲಿ ಪ್ರತಿಷ್ಠಿತವಾಗಿರುವುದು.

೫. ತನ್ನ ಆಶ್ರಮಧರ್ಮವನ್ನೂ ವರ್ಣಧರ್ಮವನ್ನೂ ಪಾಲಿಸಿಕೊಂಡು ಬರುತ್ತಿರುವ ಧಾರ್ಮಿಕನನ್ನೂ, ಗುರುಗಳನ್ನೂ, ಪೂಜ್ಯರನ್ನೂ ಮಹಾರಾಜನು ಯಾವ ರೀತಿಯಿಂದಲೂ ದಂಡನೆಗೆ ಗುರಿಮಾಡಬಾರದು. ಹಾಗಲ್ಲದೆ ಇವರಲ್ಲಿ ಯಾರೇ ಆಗಲಿ ಸ್ವಧರ್ಮತ್ಯಾಗವನ್ನು ಮಾಡಿರುವರೆಂದು ತಿಳಿದರೆ ಅವರನ್ನು ದಂಡನೆಗೆ ಗುರಿಮಾಡಬೇಕು.

೬. ಇಂಥವರು ದಂಡಾರ್ಹರು. ಇಂಥವರು ದಂಡಾರ್ಹರಲ್ಲವೆಂಬುದನ್ನು ಚೆನ್ನಾಗಿ ವಿಚಾರಮಾಡಿಯೇ ತಿಳಿದುಕೊಂಡು ದಂಡನೆಮಾಡಬೇಕು. ಹಾಗೆ ಮಾಡದೆ ಮಹಾರಾಜನಾದವನು ಅದಂಡ್ಯರನ್ನು (ನಿರ್ದೋಷಿ) ದಂಡಿಸೋಣದರಿಂದಲೂ, ದಂಡ್ಯ (ಶಿಕ್ಷಾರ್ಹ)ರನ್ನು ಬಿಟ್ಟುಬಿಡೋಣದರಿಂದಲೂ ಸಹ ಈ ಲೋಕದಲ್ಲಿ ರಾಜ್ಯಭ್ರಷ್ಟನಾಗಿ ಬರಬೇಕಾಗುವುದಲ್ಲದೆ ಪರದಲ್ಲಿ ನರಕವಾಸವನ್ನನುಭವಿಸಬೇಕಾಗುತ್ತದೆ.

೭. ಆದ್ದರಿಂದ ಮಹಾರಾಜನು ಧರ್ಮಶಾಸ್ತ್ರವನ್ನು ಚೆನ್ನಾಗಿ ವ್ಯಾಸಂಗಮಾಡಿ ತಿಳಿದುಕೊಂಡು ವಿನಯಸಂಪತ್ತುಳ್ಳವನಾಗಿ, ಲೋಕಾನುಗ್ರಹಕಾಮನೆಯಿಂದ ಧರ್ಮ ಶಾಸ್ತ್ರದಲ್ಲಿ ವಿಧಿಸಿರುವಂತೆ, ದಂಡಪ್ರಯೋಗ ಮಾಡುವುದೇ ಶ್ರೇಯಸ್ಕರವು.

**ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ನಿರ್ಭಯಃ।**
**ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ಸಾಧು ಪಶ್ಯತಿ ॥ ೮ ॥**

**ಬಾಲವೃದ್ಧಾತುರಯತಿದ್ವಿಜಾತಿವಿಕಲಾಬಲಾಃ।**
**ಮತ್ಸ್ಯನ್ಯಾಯೇನ ಭಕ್ಷ್ಯೇರನ್ಯದಿ ದಂಡೋ ನ ಪಾಲಯೇತ್ ॥ ೯ ॥**

**ದೇವದೈತ್ಯೋರಗನರಾಃ ಸಿದ್ಧಭೂತಪತತ್ರಿಣಃ।**
**ಉತ್ಕ್ರಾಮೇಯುಃ ಸ್ವಮರ್ಯಾದಾಂ ಯದಿ ದಂಡೋ ನ ಪಾಲಯೇತ್**

**ಏಷ ಬ್ರಹ್ಮಾಭಿಶಾಪೇಷು ಸರ್ವಪ್ರಹರಣೇಷು ಚ।**
**ಸರ್ವವಿಕ್ರಮ ಕೋಪೇಷು ವ್ಯವಸಾಯೇ ಚ ತಿಷ್ಠತಿ ॥ ೧೧ ॥**

---

೮. ಯಾವ ರಾಜನ ರಾಜ್ಯದಲ್ಲಿ ಕೆಂಪಾದ ಕಣ್ಣುಳ್ಳ ಶ್ಯಾಮವರ್ಣದ ದಂಡವು ನಿರ್ಭಯವಾಗಿ ತಿರುಗುತ್ತಿರುವುದೋ, ಆ ರಾಜ್ಯದಲ್ಲಿರುವ ಪ್ರಜೆಗಳು ಧರ್ಮ ಭೀರುಗಳಾಗಿ ಜಾಗರೂಕರಾಗಿರುತ್ತಾರೆ. ಆ ದಂಡವನ್ನು ತಿರುಗಿಸುವ ದಂಡನಾಯ ಕನೂ ಸಹ ಧರ್ಮಾತ್ಮರಾದ ಆ ಪ್ರಜೆಗಳನ್ನು ಭಯಭಕ್ತಿಯಿಂದ ಗೌರವಿಸುತ್ತಾನೆ.

೯. ಈ ರೀತಿ ಯಾವ ಮಹಾರಾಜನ ರಾಜ್ಯದಲ್ಲಿ ದಂಡನೀತಿಯು ಜನರನ್ನು ಕಾಪಾಡಲಸಮರ್ಥವಾಗುವುದೋ ಆ ಅಸದ್ರಾಜ್ಯದಲ್ಲಿ ಬಾಲಕರೂ, ವೃದ್ಧರೂ, ರೋಗಿಗಳೂ, ಸನ್ಯಾಸಿಗಳೂ, ಬ್ರಾಹ್ಮಣರೂ, ಕುಂಟ, ಕುರುಡ ಹೆಳವರೂ, ಹೆಂಗಸರೂ ಸಹ ಮತ್ಸ್ಯನ್ಯಾಯದಿಂದ ವಿಧಿನಿಷೇಧಗಳಿಲ್ಲದೆ ಭಕ್ಷಿಸುತ್ತಾರೆ. (ಅಂದರೆ ಆಹಾರ ನಿಯಮಗಳನ್ನು ಉಲ್ಲಂಘಿಸಿ ಅಭಕ್ಷ್ಯಭಕ್ಷ್ಯಣ—ಅಪೇಯಪಾನಗಳಲ್ಲಿ ಪ್ರವೃತ್ತರಾಗು ತ್ತಾರೆಂದು ತತ್ವಾರ್ಥ.)

೧೦. ಅದಾವ ಮಹಾರಾಜನ ರಾಜ್ಯದಲ್ಲಿ ದಂಡನೀತಿಯು ಜನರನ್ನು ಪಾಲಿಸಲು ಆಲಸ್ಯಮಾಡುವುದೋ ಆ ರಾಜ್ಯದಲ್ಲಿ ದೇವತೆಗಳೂ, ದೈತ್ಯರೂ, ಉರಗರೂ, ನರರೂ, ಸಿದ್ಧರೂ, ಭೂತಗಣಗಳೂ, ಪಕ್ಷಿಗಳೇ ಮೊದಲಾದ ಪ್ರಾಣಿ ವರ್ಗವೂ ಸಹ ತಮ್ಮ ತಮ್ಮ ಮರ್ಯಾದೆಯನ್ನು ಮೀರಿ ಜನರಿಗೆ ಕೇಡುಬಗೆಯ ಲಾರಂಭಿಸುವುವು.

೧೧. ಈ ದಂಡನೀತಿ ಪ್ರಯೋಗವು ಬ್ರಹ್ಮಾಭಿಶಾಪಗಳಲ್ಲೂ, ಸರ್ವ ಪ್ರಹರಣ ಗಳಲ್ಲೂ, ಸಕಲ ಪರಾಕ್ರಮಗಳಲ್ಲೂ, ಕೋಪಗಳಲ್ಲೂ, ವ್ಯವಸಾಯದಲ್ಲೂ ಉಕ್ತವಾಗಿದೆ.

ಪೂಜ್ಯಂತೇ ದಂಡಿನೋದೇವಾ ನ ಪೂಜ್ಯಂತೇ ತ್ವದಂಡಿನಃ ।
ನ ಬ್ರಾಹ್ಮಣಂ ನ ಧಾತಾರಂ ನ ಪೂಷಾರ್ಯಮಣಾವಪಿ ॥ ೧೨ ॥

ಯಜಂತೇ ಮಾನವಾಃ ಕೇಚಿತ್ಪ್ರಶಾಂತಾಃ ಸರ್ವಕರ್ಮಸು ।
ರುದ್ರಮಗ್ನಿಂ ಚ ಶಕ್ರಂ ಚ ಸೂರ್ಯಾಚಂದ್ರಮಸೌ ತಥಾ ॥ ೧೩ ॥

ವಿಷ್ಣುಂ ದೇವಗಣಾಶ್ಚಾನ್ಯೇ ದಂಡಿನಃ ಪೂಜಯಂತಿ ಹಿ ।
ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ ॥ ೧೪ ॥

ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ।
ರಾಜದಂಡಭಯಾದೇವ ಪಾಪಾಃ ಪಾಪಂ ನಕುರ್ವತೇ ॥ ೧೫ ॥

---

೧೨. ಚೆನ್ನಾಗಿ ಶಿಕ್ಷಿತರಾದ ದೇವತೆಗಳೂ ಸಹ ಪೂಜಾರ್ಹರಾಗಿ ಪರಿಣಮಿಸುತ್ತಾರೆ. ದೇವತೆಗಳೇ ಆಗಲಿ ಅಶಿಕ್ಷಿತರಾಗಿದ್ದರೆ (ಸಚ್ಛಾಸ್ತ್ರಾಭ್ಯಾಸವಿಲ್ಲದಿದ್ದರೆ) ಅಗೌರವವನ್ನು ಹೊಂದುತ್ತಾರೆ. ಅಶಿಕ್ಷಿತನಾದ ಬ್ರಾಹ್ಮಣನನ್ನೂ, ಕಡೆಗೆ ಬ್ರಹ್ಮನನ್ನೂ, ಪೂಷಾರ್ಯಮಾದಿ ದೇವತೆಗಳನ್ನೂ ಸಹ ಜನರು ಗೌರವಿಸಲಾರರು.

೧೩. ಪ್ರಶಾಂತವೃತ್ತಿಯುಳ್ಳ ಕೆಲವು ಮನುಷ್ಯರು ಸಕಲ ಕರ್ಮಗಳನ್ನು ಮಾಡುವಾಗಲೂ ರುದ್ರನನ್ನೂ, ಅಗ್ನಿಯನ್ನೂ, ಇಂದ್ರನನ್ನೂ, ಸೂರ್ಯ ಚಂದ್ರರನ್ನೂ ಪೂಜಿಸುವರು.

೧೪. ಮತ್ತು ಕೆಲವರು ವಿಷ್ಣುವನ್ನೂ, ದೇವತಾಗಣಗಳನ್ನೂ ಅರ್ಚಿಸುತ್ತಾರೆ. ಮತ್ತು ಕೆಲವರು ಶಿಕ್ಷಿತರಾದ ಪಂಡಿತರನ್ನು ಪೂಜಿಸುತ್ತಾರೆ. ಸಕಲ ಪ್ರಜೆಗಳನ್ನೂ ದಂಡವೇ ರಕ್ಷಿಸುತ್ತದೆ.

೧೫. ಜನರೆಲ್ಲರೂ ಮಲಗಿ ನಿದ್ದೆಮಾಡುತ್ತಿದ್ದಾಗ್ಯೂ ದಂಡ(ಧರ್ಮದಂಡ)ವು ಎಚ್ಚರವಾಗಿಯೇ ಇರುತ್ತದೆ. ವಿದ್ವಾಂಸರಾದ ಜನರು ದಂಡವನ್ನೇ ಧರ್ಮವೆಂದು ಹೇಳುತ್ತಾರೆ. ರಾಜದಂಡದ ಭಯವಿರುವುದರಿಂದಲೇ ಪಾಪಿಷ್ಠರಾದ ಜನರೂ ಕೂಡ ಪಾಪಕಾರ್ಯಗಳನ್ನು ನಿರ್ಭಯವಾಗಿ ಮಾಡಲು ಹೆದರುತ್ತಾರೆ.

**ಯಮದಂಡ ಭಯಾದನ್ಯೇ ಪರಸ್ಪರ ಭಯಾದಪಿ ।**
**ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಂಡೇ ಪ್ರತಿಷ್ಠಿತಂ ॥ ೧೬ ॥**

**ಅಂಧೇ ತಮಸಿ ಮಜ್ಜೇಯುರ್ಯದಿ ದಂಡೋ ನ ಪಾಲಯೇತ್ ।**
**ತಸ್ಮಾದ್ದಮ್ಯಾದಮಯತಿ ಉದ್ದಂಡಾದಂಡಯತ್ಯಪಿ ॥ ೧೭ ॥**

**ದಮನಾದ್ದಂಡನಾಚ್ಚೈವ ತಸ್ಮಾದ್ದಂಡಂ ವಿದುರ್ಬುಧಾಃ । ॥ ೧೮ ॥**

**ದಂಡಸ್ಯ ಭೀತ್ಯೈಸ್ತ್ರಿದಶೈಃ ಸಮಸ್ತೈಃ**
**ಭಾಗೋ ಧೃತಃ ಶೂಲಧರಸ್ಯ ಯಜ್ಞೇ ।**

---

೧೬. ಮತ್ತೆ ಕೆಲವರು ಯಮದಂಡಕ್ಕೆ ಹೆದರಿಕೊಂಡು ಪಾಪಕೆಲಸಕ್ಕೆ ಹಿಂತೆಗೆಯುತ್ತಾರೆ. ಹೀಗೆ ಪರಸ್ಪರ ಭಯವಿರುವುದರಿಂದಲೇ ಲೋಕವು ಧರ್ಮ ಮಾರ್ಗವನ್ನತಿಕ್ರಮಿಸದೆ ನಡೆದುಕೊಂಡು ಬರುತ್ತಲಿದೆ. ಈ ರೀತಿ ಸಾಂಸಿದ್ಧಿಕವಾದ ಈ ಲೋಕದಲ್ಲಿ ಸಮಸ್ತವೂ ದಂಡದಲ್ಲಿಯೇ ಪ್ರತಿಷ್ಠಿತವಾಗಿದೆ.

೧೭. ಇದುವರೆಗೆ ಮೇಲೆ ವಿವರಿಸಿದ ಕ್ರಮದಂತೆ ದಂಡನೀತಿಯು ಪ್ರಜೆಗಳನ್ನು ಕಾಪಾಡದೆ ಹೋಗಿದ್ದರೆ ಪ್ರಪಂಚವೆಲ್ಲವೂ ಅಂಧತಾಮಿಸ್ರವೆಂಬ (ಬರೀ ಕತ್ತಲೆ ಯಿರುವ) ನರಕದಲ್ಲಿ ಬಿದ್ದು ಮುಳುಗಿಹೋಗುತ್ತಿತ್ತು. ಆದ್ದರಿಂದ ಈ ದಂಡವು ತಪ್ಪಿತಸ್ಥರು (ಅಪರಾಧಿ) ಗಳನ್ನು ದಮನಮಾಡುವ ಶಕ್ತಿಯನ್ನು ಹೊಂದಿದೆ. ಉದ್ದಂಡ (ಮಹಾಪಾಪಿಷ್ಠ) ರನ್ನೂ ಸಹ ಬಲವಾಗಿ ಬಡಿದು ದಾರಿಗೆ ತರುವ ಶಕ್ತಿಯೂ, ಈ ರಾಜದಂಡಕ್ಕಿದೆಯೆಂದು ತಿಳಿದು ಪಾಪಭೀತರಾಗಿ, ಸಕಲ ಜನರೂ ಧರ್ಮಾಚರಣ ಪರಾಯಣರಾಗಿರಬೇಕು.

೧೮. ದಮನ, ದಂಡನವೆಂಬೆರಡು ಕೆಲಸಗಳು ಇದರಿಂದ ನಡೆಯುತ್ತಿರುವುದ ರಿಂದ ದಂಡವೆಂದು ಹೆಸರು ಬಂದಿದೆಯೆಂದು ತಿಳಿದವರು ಹೇಳುತ್ತಾರೆ.

೧೯. ವೀರಭದ್ರನ ದಂಡಕ್ಕೆ ಹೆದರಿ ದೇವತೆಗಳು ಈಶ್ವರನಿಗೆ ಹವಿರ್ಭಾಗ ವನ್ನು ಕಲ್ಪಿಸಿದ ವಿಷಯವು ಸಕಲರಿಗೂ ತಿಳಿದೇ ಇದೆ. ಮಕ್ಕಳೊಳಗೆ ಶ್ರೇಷ್ಠನಾದ

ಚಕ್ರುಃ ಕುಮಾರಂ ಧ್ವಜಿನೀಪತಿಂ ಚ
ವರಂ ಶಿಶೂನಾಂ ಚ ಭಯಾದ್ಬಲಸ್ಥಂ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯ ಖಂಡೇ ಮಾರ್ಕಂಡೇಯ ವಜ್ರಸಂವಾದೇ ಪುಷ್ಕರೋಪಾಖ್ಯಾನೇಷು ದಂಡಪ್ರಶಂಸಾ ನಾಮ ಸಪ್ತತಿತಮೋಽಧ್ಯಾಯಃ



---

ಆರು ದಿನ ವಯಸ್ಸಿನವನಾದ ಸ್ಕಂದನ ಮಹಾಬಲಪರಾಕ್ರಮದಂಡಕ್ಕೆ ಹೆದರಿ ದೇವತೆಗಳು ಅವನನ್ನು ದೇವಸೇನೆಗೆ ನಾಯಕನನ್ನಾಗಿ ಮಾಡಿದ ಚರಿತ್ರೆಯೂ ಸಹ ಸಕಲರಿಗೂ ತಿಳಿದುದಾಗಿಯೇ ಇದೆ. ಆದ್ದರಿಂದ ದಂಡದಿಂದ ದಶಗುಣವಾದ ಕಾರ್ಯಸಿದ್ಧಿಯುಂಟೆಂದು ಸಕಲರೂ ತಿಳಿಯಲಿ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಎರಡನೆಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ದಂಡಪ್ರಶಂಸೆಯೆಂಬ ಹೆಸರಿನ ಎಪ್ಪತ್ತನೆಯ ಅಧ್ಯಾಯ ಮುಗಿಯಿತು



॥ ಶ್ರೀಃ ॥

## ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕಸಪ್ತತಿತಮೋಽಧ್ಯಾಯಃ

**ರಾಮ ಉವಾಚ**

**ದಂಡಪ್ರಣಯನಾರ್ಥಾಯ ರಾಜಾ ಸೃಷ್ಟಃ ಸ್ವಯಂಭುವಾ।**
**ದೇವಭಾಗಾನುಪಾದಾಯ ಸರ್ವಭೂತಾಭಿಗುಪ್ತಯೇ ॥ ೧ ॥**

**ತೇಜಸಾ ಯದಯಂ ಕಶ್ಚಿನ್ನೈವ ಶಕ್ನೋತಿ ವೀಕ್ಷಿತುಂ।**
**ತದಾ ಭವತಿ ಲೋಕೇಷು ರಾಜಾ ಭಾಸ್ಕರವತ್ಪ್ರಭುಃ ॥ ೨ ॥**

**ಯದಸ್ಯ ದರ್ಶನೇ ಲೋಕಃ ಪ್ರಸಾದಮುಪಗಚ್ಛತಿ।**
**ನಯನಾ ನಂದಕಾರಿತ್ವಾತ್ತದಾ ಭವತಿ ಚಂದ್ರಮಾಃ। ॥ ೩ ॥**

---

## ಎಪ್ಪತ್ತೊಂದನೆಯ ಅಧ್ಯಾಯವು

೧. ಪರಶುರಾಮನು ಹೇಳುತ್ತಾನೆ:—ಬ್ರಹ್ಮನು ಸಕಲ ದೇವತೆಗಳ ಅಂಶವನ್ನೂ ತೆಗೆದುಕೊಂಡು ಅದನ್ನೆಲ್ಲಾ ಒಟ್ಟು ಸೇರಿಸಿ, ದಂಡಪ್ರಣಯನಪೂರ್ವಕವಾಗಿ ಸಕಲ ಭೂತಗಳನ್ನೂ ಸಂರಕ್ಷಿಸುವುದಕ್ಕೋಸ್ಕರ ರಾಜನೆಂಬ ಒಂದು ಮೂರ್ತಿಯನ್ನು ಸೃಷ್ಟಿಸಿರುವನು.

೨. ಈ ರೀತಿ ಸಕಲ ದೇವತಾತೇಜೋವಿಶಿಷ್ಟನಾದ ರಾಜನ ಮುಖ ತೇಜಸ್ಸನ್ನು ನೋಡಲು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದಲೇ ರಾಜನಾದವನು ಲೋಕದಲ್ಲಿ ಸೂರ್ಯಮಂಡಲದಂತೆ ಮಹಾಪ್ರಕಾಶಮಾನನಾಗಿರುತ್ತಾನೆ.

೩. ರಾಜನು ಸೂರ್ಯತೇಜಸ್ಸಿನಿಂದ ಮಾತ್ರವಲ್ಲ. ಚಂದ್ರತೇಜಸ್ಸಿನಿಂದಲೂ ಪ್ರಕಾಶಮಾನನಾಗಿರುತ್ತಾನೆ. ಅದೆಂತೆಂದರೆ:— ಯಾವ ಮಹಾರಾಜನ ಮುಖ ಚಂದ್ರ ದರ್ಶನಮಾತ್ರದಿಂದಲೇ ಲೋಕದ ಜನರು ಹಸನ್ಮುಖರಾಗಿ ರಾಜಾನುಗ್ರಹಕ್ಕೆ ಪಾತ್ರರಾಗುವರೋ ಅಂತಹ ಈ ನಯನಾನಂದಕಾರಿತ್ವವೇ ರಾಜನನ್ನು ಚಂದ್ರನೆಂದು ಕರೆಯುವುದರಲ್ಲಿ ಮುಖ್ಯವಾದ ಸಹಕಾರಮಾರ್ಗವಾಗಿರುವುದು.

ಚಾರೈರ್ಯದಾಽಯಂ ವ್ಯಾಪ್ನೋತಿ ಸರ್ವಲೋಕಂ ಯದೃಚ್ಛಯಾ।
ತದಾ ಭವತಿ ಲೋಕೇಷು ರಾಜಾ ದೇವಃ ಸಮೀರಣಃ ॥ ೪ ॥

ಯದಾಽಪರಾಧಿನಾಂ ಚೈವ ವಿಧತ್ತೇ ನಿಗ್ರಹಂ ನೃಪಃ।
ತದಾ ಭವತಿ ಲೋಕೇಷು ರಾಜಾ ವೈವಸ್ವತಃ ಸದಾ ॥ ೫ ॥

ಯದಾ ಭವತಿ ಮಾಹಾತ್ಮ್ಯಾತ್ಕ್ರುದ್ಧ ಬುದ್ಧ್ಯಾನ್ನರಾನ್ನೃಪಃ।
ಅನಿಚ್ಛನ್ನಪಿ ಲೋಕೇಷು ತದಾ ಭವತಿ ಪಾವಕಃ ॥ ೬ ॥

ಕರೋತಿ ಚ ಯದಾ ದಾನಂ ಧನಾನಾಂ ಸರ್ವತೋ ನೃಪಃ।
ವಿಸರ್ಗಾರ್ಥಂ ಸುರಶ್ರೇಷ್ಠ ತದಾ ಭವತಿ ವಿತ್ತದಃ ॥ ೭ ॥

---

೪. ಮಹಾರಾಜನನ್ನು ನಾವು ವಾಯು ದೇವರಿಗೆ ಸಮಾನನೆಂದೂ ಹೇಳಬಹುದು. ಅದೆಂತೆಂದರೆ:—ಮಹಾರಾಜನಾದವನು ಚಾರರ ಮುಖದಿಂದ ಸಮಸ್ತ ಲೋಕವೃತ್ತಾಂತವನ್ನೂ ಸ್ವೇಚ್ಛೆಯಿಂದ ತಿಳಿಯಲು ಶಕ್ತನಾದುದರಿಂದ ಸರ್ವವ್ಯಾಪಿಯಾದ ಸಮೀರಣನಿಗೆ ಸಮನಾದವನು.

೫. ಮಹಾರಾಜನಾದವನು ಅಪರಾಧಿಗಳನ್ನು ನಿಗ್ರಹಮಾಡುವುದಕ್ಕೋಸ್ಕರ ಅಪರಾಧಾನುಸಾರವಾದ ಶಿಕ್ಷೆಯನ್ನು ಕೊಡುವವನಾದುದರಿಂದ ಮಹಾರಾಜನನ್ನು ಯಮಧರ್ಮರಾಜನಿಗೆ ಸಮನಾದವನೆಂದೂ ಹೇಳಬಹುದು.

೬. ಮಹಾರಾಜನಾದವನು ತನ್ನ ವಿಶೇಷವಾದ ಮಹಿಮೆಯ ದೆಸೆಯಿಂದ ತನ್ನ ಕ್ರೋಧಕ್ಕೆ ಪಾತ್ರರಾದ ಜನರನ್ನು ತನಗೆ ಇಚ್ಛೆಯಿಲ್ಲದಿದ್ದರೂ ಸುಟ್ಟುಬಿಡಲು ಸಮರ್ಥನಾಗಿರುವುದರಿಂದ ಮಹಾರಾಜನನ್ನು ಅಗ್ನಿಗೆ ಸಮಾನನಾದವನೆಂದೂ ಹೇಳಬಹುದು.

೭. ಮಹಾರಾಜನು ಮನಸ್ಸು ಮಾಡಿದರೆ ಯಾರಿಗೆಬೇಕಾದರೂ ಸರ್ವತೋಮುಖವಾಗಿ ಬೇಕಾದಷ್ಟು ಹಣವನ್ನು ದಾನವಾಗಿ ಕೊಡಲು ಸಮರ್ಥನಾಗಿರುವುದರಿಂದ ಮಹಾರಾಜನನ್ನು ಕುಬೇರನೆಂದು ಕರೆಯಲು ಏನೇನೂ ಸಂದೇಹವಿರುವುದಿಲ್ಲ.

ಯದಾ ಚ ಧನಧಾರಾಭಿರ್ವರ್ಷನ್ಪ್ಲಾವಯತೇ ಜಗತ್ ।
ತದಾ ಸ ವರುಣಃ ಪ್ರೋಕ್ತೋ ರಾಜಾ ನಯವಿಶಾರದೈಃ ॥ ೮ ॥

ಕ್ಷಮಾಬಲೇನ ಮನಸಾ ಧಾರಯನ್ಸಕಲಾಃ ಪ್ರಜಾಃ ।
ಅವಿಶೇಷೇಣ ಧರ್ಮಜ್ಞ ಪಾರ್ಥಿವಃ ಪಾರ್ಥಿವೋ ಭವೇತ್ ॥ ೯ ॥

ಯದಾಽಧಿಪತ್ಯೇನ ಜನಾನ್ಸಮಗ್ರಾನ್ಪರಿರಕ್ಷತಿ ।
ತದಾ ಭವತಿ ದೇವೇಂದ್ರಃ ಸರ್ವಭೂತಾನುಕಂಪಿತಾ ॥ ೧೦ ॥

ಉತ್ಸಾಹಮಂತ್ರ ಶಕ್ತಿರ್ಯಾ ಪ್ರಭುಶಕ್ತಿಶ್ಚ ದೈವಿಕೀ ।
ಚತಸ್ರಃ ಶಕ್ತಯಸ್ತತ್ರ ವೈಷ್ಣವ್ಯಃ ಪರಿಕೀರ್ತಿತಾಃ ॥ ೧೧ ॥

---

೮. ನೀತಿಶಾಸ್ತ್ರಕುಶಲರಾದವರು ಹೇಳಿರುವುದೇನೆಂದರೆ:—ಮಹಾರಾಜನು ಯಾವಾಗ ಬೇಕಾದರೂ ಹಣದ ಮಳೆಯನ್ನೇ ಪ್ರಪಂಚಕ್ಕೆ ಸುರಿಸಿಬಿಡುವ ಸಾಮರ್ಥ್ಯವುಳ್ಳವನಾದುದರಿಂದ ಶ್ರೀಮನ್ಮಹಾರಾಜರನ್ನು ನಾವು ಪ್ರತ್ಯಕ್ಷ ವರುಣದೇವರೆಂದೇ ಕರೆಯಬಾರದೇಕೆ? ಹೇಳುವಿಯಾ? ವರುಣ ಕುಮಾರ ಕಂಠೀರವ!

೯. ಓ! ವರುಣಕುಮಾರ! ನಾವು ಮಹಾರಾಜರನ್ನು ಭೂದೇವತೆಯೆಂದೇ ಕರೆದುಬಿಡುವೆವು. ಅದೇಕೆನ್ನುವಿಯೋ? ತನ್ನ ಕ್ಷಮಾಬಲದಿಂದಲೇ ನಕಲ ಪ್ರಜೆಗಳನ್ನೂ ಮನಸ್ಸಿನಿಂದ ಪ್ರೀತಿಸುತ್ತಾ ಪುತ್ರನಿರ್ವಿಶೇಷವಾಗಿ ಕಾಪಾಡುತ್ತಿರುವನಾದುದರಿಂದ ಪಾರ್ಥಿವನೆಂಬ ಹೆಸರು ರಾಜನಿಗೆ ನಿಜವಾಗಿ ಸಲ್ಲುವುದರಲ್ಲಿ ತಪ್ಪೇನಿದೆ?

೧೦. ಪುಷ್ಕರ! ನನ್ನ ಅಭಿಪ್ರಾಯದಲ್ಲಿ ಮಹಾರಾಜನನ್ನು ದೇವೇಂದ್ರನೆಂದು ಕರೆಯಲಿಕ್ಕೂ ಅಡ್ಡಿಯಿಲ್ಲವೆಂದು ತೋರುತ್ತದೆ. ಅದೇಕೆನ್ನುವಿಯೋ? ತನ್ನ ಆಧಿಪತ್ಯದಿಂದ ಸಮಸ್ತ ಜನಗಳನ್ನೂ ರಾಜನು ಕಾಪಾಡುತ್ತಿರುವನು. ಸಮಸ್ತ ಪ್ರಾಣಿಗಳ ವಿಷಯದಲ್ಲೂ ರಾಜನಿಗೆ ಅಪಾರವಾದ ಪ್ರೇಮವಿರುವುದರಿಂದ ರಾಜನು ದೇವೇಂದ್ರನೇ, ಹೌದೋ? ಅಲ್ಲವೋ? ನೀನೇ ಹೇಳು.

೧೧. ಮಹಾರಾಜನಿಗೆ ಉತ್ಸಾಹಶಕ್ತಿಯೂ, ಮಂತ್ರಶಕ್ತಿಯೂ, ದೈವದತ್ತವಾದ ಪ್ರಭುಶಕ್ತಿಯೂ, ದೈವೀಶಕ್ತಿಯೂ ಸಹ ಇರುವುದರಿಂದ ಈ ನಾಲ್ಕು ಶಕ್ತಿಗಳೂ ವಿಷ್ಣುವಿನ ಅಂಶವಿಲ್ಲದವನಿಗೆ ಬರತಕ್ಕವಲ್ಲವೇ ಅಲ್ಲ.

**ಕಃ ಸಮರ್ಥಃ ಪ್ರಜಾಃ ಪಾತುಂ ವಿನಾ ವೈಷ್ಣವತೇಜಸಾ ।**
**ತಿಸ್ರಸ್ತು ಶಕ್ತಯಸ್ತಸ್ಯ ವೈಷ್ಣವ್ಯಃ ಪೃಥಿವೀಪತೇ ॥ ೧೨ ॥**

**ದಂಡಪ್ರಣಯನಂ ಸಮ್ಯಕ್ ಶ್ರೋತುಮಿಚ್ಛಾಮಿ ತತ್ತ್ವತಃ ।**
**ಕಥಂ ಸ್ವವಿಷಯೇ ತಸ್ಯ ದಂಡನೀತಿರ್ಭವೇದ್ಧ್ರುವಾ ॥ ೧೩ ॥**

**ಕಥಂ ಚ ದಂಡಂ ಪ್ರಣಯನ್ನರೇಂದ್ರೋ**
**ಧರ್ಮೇಣ ಯುಜ್ಯೇದ್ಯಶಸಾ ಚ ವೀರ ।**
**ಅರ್ಥೇನ ಕಾಮೇನ ಚ ಸರ್ವಮೇ ತ**
**ದ್ಬ್ರೂಹಿ ಯಾದೋಗಣನಾಥಪುತ್ರ ॥ ೧೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮವಾಕ್ಯಾಧ್ಯಾಯೋ ನಾಮೈಕಸಪ್ತತಿತಮೋಽಧ್ಯಾಯಃ**

---

೧೨. ವೈಷ್ಣವ ತೇಜಸ್ಸಿಲ್ಲದೆ ಹೋದರೆ ಪ್ರಜೆಗಳನ್ನು ಸಂರಕ್ಷಿಸಲು ಯಾರಿಗೆ ತಾನೇ ಶಕ್ತಿಯಿದ್ದೀತು? ಎಲೈ ಪುಷ್ಕರ ಮಹಾರಾಜನೇ! ಮೇಲೆ ಹೇಳಿದಂತೆ ಮೂರು ಶಕ್ತಿಗಳೂ (ಪ್ರಭುಮಂತ್ರೋತ್ಸಾಹ) ವೈಷ್ಣವಾಂಶವೆಂದು ಭಾವಿಸಬೇಕು.

೧೩. ಎಲೈ ಪುಷ್ಕರನೇ! ದಂಡಪ್ರಣಯನ ಶಾಸ್ತ್ರವನ್ನು ತತ್ವತಃ ತಿಳಿಯಬೇಕೆಂದು ಬಹಳ ಅಪೇಕ್ಷೆಯುಂಟಾಗಿದೆ. ಈ ದಂಡನೀತಿಯು ಸ್ವವಿಷಯದಲ್ಲಿ ಹೇಗೆ ಆಚರಿಸಲ್ಪಡಬೇಕೆಂಬುದನ್ನು ತಿಳಿಸಬೇಕು.

೧೪. ಮಹಾರಾಜನಾದವನು ಯಾವ ರೀತಿಯಾಗಿ ಈ ದಂಡನೀತಿಯನ್ನು ಪ್ರಯೋಗಿಸೋಣದರಿಂದ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳು ಫಲರೂಪವನ್ನು ಹೊಂದುವುವೋ, ಅಂತಹ ಸಮಸ್ತ ವೃತ್ತಾಂತವನ್ನೂ ನನ್ನ ಮೇಲೆ ಕೃಪೆಯಿಟ್ಟು ತಿಳಿಸಬೇಕೈ! ಪುಷ್ಕರ! ಯಾದೋಗಣನಾಥಪುತ್ರ! ಹೀಗೆಂದು ಪರಶುರಾಮನು ಪುಷ್ಕರನನ್ನು ಕುರಿತು ಪ್ರಶ್ನೆಮಾಡಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ
ಎರಡನೆಯ ಖಂಡದಲ್ಲಿ ಪರಶುರಾಮವಾಕ್ಯಾಧ್ಯಾಯವೆಂಬ ಹೆಸರಿನ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

ಅಥ

# ವಿಷ್ಣುಧರ್ಮೋತ್ತರೇಮಹಾಪುರಾಣೇ ದ್ವಿತೀಯಖಂಡೇ

## ದ್ವಿಸಪ್ತತಿತಮೋಽಧ್ಯಾಯಃ

**ಪುಷ್ಕರ ಉವಾಚ**

**ದಂಡಪ್ರಣಯನಂ ರಾಮ ಸ್ವದೇಶೇ ಶೃಣು ಭೂಭುಜಾಂ ।**
**ಯಸ್ಯ ಸಮ್ಯಕ್ಪ್ರಣಯಸಾತ್ಸ್ವರ್ಗಭಾಕ್ಪಾರ್ಥಿವೋ ಭವೇತ್ ॥ ೧ ॥**

**ತ್ರಿಯವಂ ಕೃಷ್ಣಲಂ ವಿದ್ಧಿ ಮಾಷಸ್ತತ್ಪಂಚಕಂ ಭವೇತ್ ।**
**ಕೃಷ್ಣಲಾನಾಂ ತಥಾ ಷಷ್ಟ್ಯಾ ಕರ್ಷಾರ್ಧಂ ರಾಮ ಕೀರ್ತಿತಂ ॥ ೨ ॥**

**ಸುವರ್ಣಶ್ಚ ವಿನಿರ್ದಿಷ್ಟೋ ರಾಮ ಷೋಡಶಮಾಷಕಃ ।**
**ನಿಷ್ಕಂಸುವರ್ಣಾಶ್ಚತ್ವಾರೋ ಧರಣಂ ದಶಭಿಸ್ತು ತೈಃ ॥ ೩ ॥**

---

## ಎಪ್ಪತ್ತೆರಡನೆಯ ಅಧ್ಯಾಯವು

೧. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ:—ಅಯ್ಯಾ! ಪರಶುರಾಮ! ನೀನು ಮಾಡಿದ ಪ್ರಶ್ನೆಯು ಬಹಳ ಶ್ರೇಷ್ಠವಾದುದು. ನಿನ್ನ ಅಭಿಪ್ರಾಯದಂತೆ ದಂಡಪ್ರಣಯದ ಪ್ರಕಾರವನ್ನೀಗ ಹೇಳುತ್ತೇನೆ, ಕೇಳು. ಸ್ವದೇಶ ಪಾಲಕರಾದ ಮಹಾರಾಜರು ಸ್ವದೇಶದಲ್ಲಿ ಯಾವ ರೀತಿ ದಂಡಪ್ರಣಯವನ್ನು ಮಾಡಬೇಕೋ ಅದನ್ನೀಗ ವಿಸ್ತಾರವಾಗಿ ತಿಳಿಸುತ್ತೇನೆ. ಈ ರೀತಿ ದಂಡಪ್ರಣಯನ (ಶಿಕ್ಷಾ ವಿಧಾಯಕ) ಮಾಡುವ ರಾಜನು ಸ್ವರ್ಗಭಾಗಿಯಾಗಲು ಸಂದೇಹವಿಲ್ಲ.

೨-೩. ಶಿಕ್ಷೆಗಳಲ್ಲಿ ದ್ರವ್ಯದಂಡ (ಜುಲ್ಮಾನೆ), ಕಾರಾಗಾರದ ಬಂಧನ (ಸಜ) ಗಳೆಂಬೆರಡು ಕ್ರಮಗಳುಂಟು. ಅವೆರಡರಲ್ಲಿ ಮೊದಲನೆಯದೇ ಜುಲ್ಮಾನೆ(ದ್ರವ್ಯದಂಡ).

ಇದು ಹಣಕ್ಕೆ ಸಂಬಂಧಪಟ್ಟುದಾದುದರಿಂದ ಆ ಹಣದ (ನಾಣ್ಯದ) ನಿಗದಿಯನ್ನು ತಿಳಿದಿರಬೇಕಾದುದು ಮೊದಲನೆಯ ಕೆಲಸವಾದ್ದರಿಂದ ಅದರ ಪರಿಮಾಣವನ್ನು ತಿಳಿಸಲಾಗುವುದು.

**ತಾಮ್ರರೂಪ್ಯಸುವರ್ಣಾನಾಂ ಮಾನಮೇತತ್ಪ್ರಕೀರ್ತಿತಂ ।**
**ತಾಮ್ರಕರ್ಷಾಪಕೋ ರಾಮ ಪ್ರೋಕ್ತಃ ಕಾರ್ಷಾಪಣೋ ಬುಧೈಃ　॥ ೪ ॥**

---

೪. ಭತ್ತದ ಕಾಳಿನ ತೂಕಕ್ಕೆ ೧ ಗುಲಗಂಜಿ. ೫ ಗುಲಗಂಜೀ ತೂಕಕೆ ೧ ಉದ್ದಿನ ಕಾಳಿನ ತೂಕ. ೬೦ ಗುಲಗಂಜೀ ಅಥವಾ ೧೨ ಉದ್ದಿನ ಕಾಳು ತೂಕಕ್ಕೆ ಅರ್ಧ ಕರ್ಷ ತೂಕ. ೧೬ ಉದ್ದಿನ ಕಾಳು ತೂಕಕ್ಕೆ ೧ ನಿಷ್ಕ. ಈ ಪ್ರಮಾಣ (ತೂಕ) ವು ಚಿನ್ನಕ್ಕೆ ಸಂಬಂಧಪಟ್ಟದ್ದು. ಇದು ನಮ್ಮ ಹಿಂದೂದೇಶದ ತೂಕ. ಈಗಲೂ ಗುಲಗಂಜಿ-ಹಾಗ-ಅಡ್ಡ- ಬೇಳೆ-ವೀಸ - ಮುಪ್ಪಾಗ - ಹಣ-ವರಹ - ತೊಲದ ಲೆಖ್ಖಗಳು ಭಂಗಾರ ಮಾರುವ ಅಂಗಡಿಗಳಲ್ಲಿ ಬಳಕೆಯಲ್ಲಿವೆ. ಈ ಚಿನ್ನದ ತೂಕವನ್ನು ನಾಮಲಿಂಗಾನುಶಾಸನವನ್ನು ಬರೆದಿರುವ ಅಮರಸಿಂಹನು ಹೇಳಿರುವ ಕ್ರಮದಂತೆ ಇಲ್ಲಿ ಬರೆಯುತ್ತೇನೆ. ಈ ತೂಕಕ್ಕೂ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಬರೆದಿರುವ ತೂಕಕ್ಕೂ ಸರಿಸುಮಾರಾಗಿ ಸ್ವಲ್ಪ ಹೆಚ್ಚುಕಡಿಮೆಯಾದರೂ ಹೋಲಿಕೆಯೇನೋ ಒಂದೇ ಎಂದು ತೋರುತ್ತದೆ. ಅಮರದಲ್ಲಿ ಹೇಳಿರುವುದೇನೆಂದರೆ ;—

ಮಾನಂ ತುಲಾಂಗುಳಿಪ್ರಸ್ಥೈಃ ಗುಂಜಾಃ ಪಂಚಾದ್ಯ ಮಾಷಕಃ ।
ತೇ ಷೋಡಶಾಕ್ಷಃ ಕರ್ಷೋ೯ ಸ್ತ್ರೀಫಲಂ ಕರ್ಷ ಚತುಷ್ಟಯಂ ॥
ಸುವರ್ಣಬಿಸ್ತೌ ಹೇಮ್ನೋಕ್ಷೇ ಕುರುಬಿಸ್ತಸ್ತು ತತ್ಪಲೇ ।
ತುಲಾಸ್ತ್ರಿಯಾಂ ಪಲಶತಂ ಭಾರಃ ಸ್ಯಾದ್ವಿಂಶತಿಸ್ತುಲಾಃ ॥
ಆಚಿತೋ ದಶ ಭಾರಾಃ ಸ್ಯುಃ ಶಾಕಟೋಭಾರ ಆಚಿತಃ ।
ಕಾರ್ಷಾಪಣಃ ಕಾರ್ಷಿಕಃ ಸ್ಯಾತ್ ಕಾರ್ಷಿಕೇ ತಾಮ್ರಿಕೇ ಪಣಃ ॥

ಇವು ಅಮರದ ಶ್ಲೋಕಗಳು. ಈಗ ಅನುವಾದ ಮಾಡುತ್ತಿರುವ ಶ್ಲೋಕವೂ ಸಹ, ತಾಮ್ರಕರ್ಷಾಪಕೋರಾಮ ಪ್ರೋಕ್ತಃ ಕಾರ್ಷಾಪಣೋ ಬುಧೈಃ, ಎಂದು ಉಕ್ತವಾಗಿರುವುದರಿಂದ ಈ ಎಲ್ಲ ಶ್ಲೋಕಗಳ ಅನುವಾದವನ್ನೂ ಇಲ್ಲಿ ಬರೆಯುತ್ತೇನೆ.

ಮಾನವು ತೂಕ, ಅಳತೆಯೆಂದು ಎರಡು ವಿಧ. ತುಲಾ-ತ್ರಾಸು-ಚಿಂತಾಲು-ತಕ್ಕಡಿ-ತೂಗುಕೋಲು-ಹಣ-ಧರಣ-ವರಹ-ತೊಲ-ಮಣ ಮುಂತಾದುವುಗಳಿಂದಲೂ, ಅಂಗುಲ (ಅಂಗುಳಿ) ಬೆರಳು, ಕಾಲುಗೆರೆ ಗುರ್ತು, ಲೆಕ್ಕ ಮುಂತಾದುವುಗಳಿಂದಲೂ, ಗಿದ್ನ - ಚಟಾಕು-ಪಾವು-ಪಡಿ-ಸೇರು-ಬಳ್ಳ-ಕೊಳಗ-ಖಂಡಿ ಮುಂತಾದುವುಗಳಿಂದಲೂ, ತೂಗುವ ಮತ್ತು ಅಳೆಯುವ ಲೆಖ್ಖವು ಮಾನವೆನಿಸಿಕೊಳ್ಳುವುದು. ತೂಕದ ಲೆಖ್ಖವನ್ನು ಉನ್ಮಾನವೆಂದೂ, ಅಳತೆಯ ಲೆಖ್ಖವನ್ನು ಪ್ರಮಾಣ (ಪರಿಮಾಣ) ವೆಂದೂ ಹೇಳಬಹುದು.

**ಪಣಾನಾಂ ದ್ವೇ ಶತೇ ಸಾರ್ಧೇ ಪ್ರಥಮಂ ಸಾಹಸಃ ಸ್ಮೃತಃ ।**
**ಮಧ್ಯಮಃ ಪಂಚ ವಿಜ್ಞೇಯಃ ಸಹಸ್ರಮಪಿ ಚೋತ್ತಮಃ ॥ ೫ ॥**

---

೫. ೫ ಗುಲಗಂಜಿ ತೂಕವುಳ್ಳ ಚಿನ್ನವು ೧ ಉದ್ದಿನ ಕಾಳು ತೂಕಕ್ಕೆ ಸಮವಾಗುವುದು. ೧೬ ಉದ್ದಿನ ಕಾಳಿನ ತೂಕ ಅಥವಾ ೮೦ ಗುಲಗಂಜೀ ತೂಕದ ಚಿನ್ನವು ಅಕ್ಷ ಅಥವಾ ಕರ್ಷ ತೂಕವೆನಿಸಿಕೊಳ್ಳುವುದು. ಇಂತಹ ನಾಲ್ಕು ಕರ್ಷ ತೂಕವನ್ನು ೧ ಪಲ ತೂಕವೆಂದು ಹೇಳಬೇಕು. ಇದನ್ನೇ ನಾವು ಈಗ ೧ ತೊಲ ಚಿನ್ನವೆಂದು ಹೇಳುತ್ತೇವೆ. ಈ ೧ ತೊಲ ಚಿನ್ನಕ್ಕೆ ಸುವರ್ಣವೆಂದೂ, ೨ ತೊಲ ಚಿನ್ನಕ್ಕೆ ಬಿಸ್ತವೆಂದೂ, ೩ ತೊಲ ಅಥವಾ ಅರ್ಧಪಾವು ಚಿನ್ನಕ್ಕೆ ಕುರುಬಿಸ್ತವೆಂದೂ ಹೆಸರು. ಈ ಮೂರಕ್ಕೂ ಪಲವೆಂಬ ಹೆಸರೂ ಉಂಟು. ಅಂದರೆ ಉತ್ತಮ ಪಲವು ೩ ತೊಲ ಚಿನ್ನಕ್ಕೆ ಸಮಾನವು. ಇಂತಹ ೧೦೦ ಪಲವು (೩೦೦ ತೊಲ ಅಥವಾ ೧೨॥ ಶೇರು) ೧ ತುಲೆಯೆನಿಸಿಕೊಳ್ಳುವುದು. (ಇದೇ ತುಲಾಭಾರವೆನ್ನುವುದು.) ಇಂತಹ ೨೦ ತುಲೆಗಳು (೬ ಸಾವಿರ ತೊಲ ಅಥವಾ ೨೫೦ ಸೇರು ಭಂಗಾರ) ೧ ಭಾರವೆನಿಸಿಕೊಳ್ಳುವುದು (೫ ಮಣ). ಇಂತಹ ೧೦ ಭಾರಗಳ ತೂಕಕ್ಕೆ ೧ ಆಚಿತವೆಂದು ಹೆಸರು. ಆಚಿತವೆಂದರೆ ಬಂಡಿಯ ಮೇಲೆ ಹೇರಿಕೊಂಡು ಹೋಗಬೇಕಾದಷ್ಟು ಚಿನ್ನವೆಂದು ಹೆಸರು.

ಕಾರ್ಷಾಪಣಃ ಕಾರ್ಷಿಕಃ, ಅಂದರೆ ೨ ಗುಲಗಂಜಿ ತೂಕದ ಬೆಳ್ಳಿಗೆ ೧ ಮಾಷಕವೆಂದೂ, ೧೬ ಮಾಷಕಗಳು ೧ ಕರ್ಷವೆಂದೂ ಹೇಳಿಸಿಕೊಳ್ಳುವುದು. ಅಂಥಾ ಕರ್ಷ ತೂಕದಿಂದ ಮಾಡಲ್ಪಟ್ಟ ರೂಪಾಯಿಗೆ (ಮೈಸೂರು ರಾಜಾರೂಪಾಯಿ) ಪರಿಗಟ್ಟೆ ಎಂದೂ ಹೇಳುವರು. (೧ ರೂಪಾಯಿ ತೂಕ ಅಥವಾ ೧ ತೊಲ ಬೆಳ್ಳಿ). ಈ ಕರ್ಷ ತೂಕದ ತಾಮ್ರದ ನಾಣ್ಯಕ್ಕೆ (ಹಿಂದಿನ ಅರ್ಧಾಣೆ ತಾಮ್ರದ ಬಿಲ್ಲೆ ಅಥವಾ ಮೈಸೂರು ಆನೇ ದುಡ್ಡು ತೂಕ) ಪಣವೆಂದು ಹೆಸರು.

ಟಿಪ್ಪಣಿ:— ಈ ನಾಣ್ಯಗಳೆಲ್ಲಾ ಹಿಂದೆ ಚಲಾವಣೆಯಲ್ಲಿದ್ದವು. ಈಗ ಅದರ ಮುಖವನ್ನೇ ಯಾರೂ ಕಾಣರು. ಈಗಲೂ ವಸ್ತುಸಂಗ್ರಹಾಲಯಗಳಲ್ಲಿ (ಎಗ್ಸಿಬಿಷನ್) ಹೋಗಿ ನೋಡುವುದಾದರೆ ಈ ಹಳೇ ನಾಣ್ಯಗಳೆಲ್ಲಾ ಕಣ್ಣಿಗೆ ಬೀಳುವುವು. ಇದುವರೆಗೆ ಚಿನ್ನ, ಬೆಳ್ಳಿ, ತಾಮ್ರಗಳ ನಾಣ್ಯಗಳ ಪ್ರಮಾಣವನ್ನು ತಿಳಿಸಿಯಾಯಿತು. ೨೫೦ ತಾಮ್ರದ ಕಾರ್ಷಾಪಣ (ಅರ್ಧಾಣೆ ಬಿಲ್ಲೆ) ಗಳು ಪ್ರಥಮದಂಡವೆಂದೂ ೫೦೦ ನಾಣ್ಯಗಳು ಮಧ್ಯಮವೆಂದೂ, ೧ ಸಾವಿರ ನಾಣ್ಯಗಳು ಉತ್ತಮ ಸಾಹಸ (ದಂಡವಿಧಿ) ವೆಂದೂ ಹೇಳಿಸಿಕೊಳ್ಳುವುವು.

**ಬಾಲದಾಯಾದಕಂ ರಿಕ್ಥಂ ತಾವದ್ರಾಜಾನುಪಾಲಯೇತ್ ।**
**ಯಾವತ್ಸ ಸ್ಯಾತ್ಸಮಾವೃತ್ತೋ ಯಾವದ್ವಾತೀತಶೈಶವಃ ॥ ೬ ॥**

**ವೇಶ್ಯಾಪುತ್ರಾಸು ಚೈವಂ ಸ್ಯಾದ್ರಕ್ಷಣಂ ನಿಷ್ಕುಲಾಸು ಚ ।**
**ಪತಿವ್ರತಾಸು ಚ ಸ್ತ್ರೀಷು ವಿಧವಾಸ್ವಾತುರಾಸು ಚ ॥ ೭ ॥**

**ಜೀವಂತೀನಾಂ ತು ತಾಸಾಂ ಯೇ ತದ್ಧರೇಯುಃ ಸ್ವಬಾಂಧವಾಃ ।**
**ತಾಶ್ಶಿಷ್ಯಾ ಚೌರದಂಡೇನ ಧಾರ್ಮಿಕಃ ಪೃಥಿವೀಪತಿಃ ॥ ೮ ॥**

**ಪ್ರನಷ್ಟಸ್ವಾಮಿಕಂ ರಿಕ್ಥಂ ರಾಜಾ ತ್ರ್ಯಬ್ದಂ ನಿಧಾಪಯೇತ್ ।**
**ಅರ್ವಾಕ್ ತ್ಯಬ್ದಾದ್ಧರೇತ್ಸ್ವಾಮೀ ಪರೇಣ ನೃಪತಿರ್ಹರೇತ್ ॥ ೯ ॥**

---

೬. ಪಾಲಕರೆಲ್ಲ ಮೃತರಾಗಿ ಬಾಲಕರೇ ಉಳಿದಿರುವ ಮನೆಯ ಸ್ವತ್ತು (ಮೈನರ್ ಆಸ್ತಿ) ಗಳನ್ನು ಆ ಬಾಲಕರು ಪ್ರಾಯಸಮರ್ಥರಾಗುವ (ಮೆಜಾರಿಟಿಗೆ ಬರುವ) ವರಿವಿಗೂ ಸರ್ಕಾರದವರೇ (ರಾಜನೇ) ರೂಢಿಸಿ ಕಾಪಾಡಿಕೊಂಡಿರಬೇಕು. (ಈಗಲೂ ಇದು ಸರ್ಕಾರದಲ್ಲಿ ಜಾರಿಯಲ್ಲಿದೆ.)

೭. ದಿಕ್ಕಿಲ್ಲದವರ ಮತ್ತು ಸೂಳೆಯರ ಮಕ್ಕಳು ಮತ್ತು ಯಾರೂ ದಿಕ್ಕಿಲ್ಲದ ಮಕ್ಕಳುಗಳನ್ನು ಸಹ ಸರ್ಕಾರದವರೇ ಕಾಪಾಡಬೇಕು. ಸಂಪಾದಿಸಿ ತಂದು ಹಾಕಲಾರದೆ ದೇಶಭ್ರಷ್ಟನಾದವನ ಹೆಂಡತಿಯು ಮಹಾಪತಿವ್ರತೆಯಾಗಿದ್ದರೆ ಅಂಥಹವಳನ್ನೂ, ಗಂಡಸತ್ತು ಬಡವೆಯಾದ ವಿಧವೆಯನ್ನೂ, ಖಾಯಿಲೆ ಬಿದ್ದು ದಿಕ್ಕಿಲ್ಲದೆ ನರಳುತ್ತಿರುವವರನ್ನೂ ಸಹ ಮಹಾರಾಜನೇ (ಸರ್ಕಾರವೇ) ಕಾಪಾಡಬೇಕು.

೮. ಮೇಲೆ ಬರೆದಿರುವ ಈ ವಿಧ ಜನರಿಗೆ ಆಸ್ತಿಯೇನಾದರೂ ಇದ್ದು ಅವನ್ನು ಹತ್ತಿರದ ನೆಂಟರೆಂದು ಹೇಳಿಕೊಂಡು ಬಂದು ಯಾರಾದರೂ ಸ್ವಾಧೀನಮಾಡಿಕೊಳ್ಳುವುದಾದರೆ ಅವರ ಮೇಲೆ ಕಳ್ಳತನದ ತಪ್ಪನ್ನು ಹೊರಿಸಿ ಧಾರ್ಮಿಕನಾದ ಮಹಾರಾಜನು ಶಿಕ್ಷೆಯನ್ನು ವಿಧಿಸಬೇಕು.

೯. ಗೊತ್ತುಗಾರ (ವಾರಸುದಾರ) ರಿಲ್ಲದವರ ಹಣವನ್ನಾಗಲೀ, ಆಸ್ತಿಯನ್ನಾಗಲೀ, ಮೂರುವರ್ಷಕಾಲ ಸರ್ಕಾರದಲ್ಲಿ ಕಾಪಾಡಿ (ಡಿಪಾಜಿಟ್) ಕೊಂಡಿರಬೇಕು. ಮೂರುವರ್ಷದೊಳಗೆ ಯಾರಾದರೂ ಸರಿಯಾದ ವಾರಸ್‌ದಾರರು ಬಂದರೆ ಅವರಿಗೆ ಸರ್ಕಾರದವರು ಆ ಆಸ್ತಿಯನ್ನು ಕೊಟ್ಟುಬಿಡಬಹುದು. ಮೂರುವರ್ಷದ ಅವಧಿಯಲ್ಲಿ ಯಾರೂ ಬರದೆಹೋದರೆ ಸರ್ಕಾರಕ್ಕೆ ಬಿಕಿತಕರಾರ್ ಸೇರಿಸಿಕೊಂಡುಬಿಡಬೇಕು.

ಮಮೇದಮಿತಿ ಯೋ ಬ್ರೂಯಾತ್ಸೋಽನುಯುಕ್ತೋ ಯಥಾವಿಧಿ ।
ಸಂಪಾದ್ಯ ರೂಪಸಂಖ್ಯಾದೀನ್ಸ್ವಾಮೀ ತದ್ದ್ರವ್ಯಮರ್ಹತಿ ॥ ೧೦ ॥

ಅವೇದಯಾನೋ ನಷ್ಟಸ್ಯ ದೇಶಂ ಕಾಲಂ ಚ ತತ್ತ್ವತಃ ।
ವರ್ಣರೂಪಂ ಪ್ರಮಾಣಂ ಚ ತತ್ಸಮಂ ದಂಡಮರ್ಹತಿ ॥ ೧೧ ॥

ಪ್ರನಷ್ಟಾಧಿಗತಂ ರಿಕ್ಥಂ ತಿಷ್ಠೇದರ್ಥೈರಧಿಷ್ಠಿತಂ ।
ಯಾಂಸ್ತತ್ರ ಚೌರಾನ್ಗೃಹ್ಣೀಯಾತ್ಘಾತಯೇತ್ಕುಂಜರೇಣತಾನ್ ॥ ೧೨ ॥

---

೧೦. ಈ ರೀತಿ ಸರ್ಕಾರದಲ್ಲಿ ಡಿಪಾಜಿಟ್ ಇರುವ ಹಣವು ನನ್ನದೆಂದು ಯಾರಾದರೂ ವಾರಸ್‌ದಾರರು ಬಂದರೆ ಅವರ ಗುರುತನ್ನು ಯಥಾವಿಧಿಯಾಗಿ ನಾಮ ರೂಪಗಳೊಡನೆ (ಐಡೆಂಟಿಫಿಕೇಷ್ರ) ನಿಶ್ಚಯಮಾಡಿಕ್ಕೊಂಡು ಸರ್ಕಾರಕ್ಕೆ ಖಾತರಿ ಯೆಂದು ತಿಳಿದುಬಂದರೆ ಅವನ್ನು ಕೊಟ್ಟುಬಿಡಬಹುದು.

೧೧. ಯಾವನಾದರೊಬ್ಬ ಮನುಷ್ಯನು ನಿಜವಾಗಿ ಹಣವನ್ನು ಕಳೆದು ಕ್ಕೊಂಡಿದ್ದರೆ ಆ ಹಣ ಎಲ್ಲಿತ್ತು ? ಹೇಗೆ ಹೋಯಿತು ? ಹೋದ ಹಣವೆಷ್ಟು ? ಇವೇ ಮುಂತಾದ ವಿವರಣೆಯನ್ನು ತಿಳಿಸಿ ಸರ್ಕಾರಕ್ಕೆ ಅರ್ಜಿ ಕೊಡಬೇಕು. ಅರ್ಜಿ ಸರ್ಕಾರಕ್ಕೆ ಹೋದಮೇಲೆ ವಿಚಾರಣೆ ನಡೆಯಬೇಕು. ಇದಾವುದೂ ಇಲ್ಲದೆ ಸುಳ್ಳರ್ಜಿಯನ್ನೇನಾದರೂ ಕೊಟ್ಟು ಸರಿಯಾದ ರುಜುವಾತು ಕೊಡದೇ ಹೋದರೆ ಅಂತಹ ಮನುಷ್ಯನಿಗೆ ವರ್ಣರೂಪಪ್ರಮಾಣಾನುಸಾರವಾಗಿ ದಂಡವನ್ನು ವಿಧಿಸಬೇಕು.

೧೨. ಯಾವುದಾದರೂ ಒಂದು ಮೃತನಷ್ಟಸ್ವತ್ತನ್ನು ತನ್ನ ಸ್ವಾಧೀನಮಾಡಿ ಕೊಂಡು ಸರ್ಕಾರಕ್ಕೆ (ಮಹಾರಾಜನಿಗೆ) ಹೇಳದೆ ಯಾವನಾದರೂ ಅನುಭವಿಸು ತ್ತಿರುವುದು ಸರ್ಕಾರಕ್ಕೆ ತಿಳಿದುಬಂದೊಡನೆಯೇ ಅಂತಹ ಮೋಸಗಾರನನ್ನು ಆನೆಯ ಕಾಲಿನಿಂದ ತುಳಿಸಿಬಿಡಬೇಕು. (ಇಂತಹವರು ಕಳ್ಳತನದ ಆಪಾದನೆಗೆ ಗುರಿಯಾಗ ತಕ್ಕವರೆಂದು ಭಾವಿಸಬೇಕು.)

ಮಮೇದಮಿತಿ ಯೋ ಬ್ರೂಯಾದಸತ್ಯೇನ ತಥಾ ನಿಧಿಂ ।
ತಸ್ಯ ದಂಡಂ ಹರೇದ್ರಾಜಾ ಸ್ವವಿತ್ತಸ್ಯಾಷ್ಟಮಾಂಶಕಂ ॥ ೧೩ ॥

ಚೌರ್ಯೈರಮುಷಿತೋ ಯಸ್ತು ಮುಷಿತೋಽಸ್ಮೀತಿ ಭಾಷತೇ ।
ತತ್ಪ್ರದಾತರಿ ಭೂಪಾಲೇ ಸ ದಂಡ್ಯಸ್ತಾವದೇವ ತು ॥ ೧೪ ॥

ಯೋ ಯಾವನ್ನಿಹ್ನುವೀತಾರ್ಥಂ ಮಿಥ್ಯಾ ಯೋ ವಾ ವದೇತ್ತತಃ ।
ತೌ ನೃಪೇಣ ಹ್ಯಧರ್ಮಜ್ಞೌ ದಾಪ್ಯೌ ತದ್ವಿಗುಣಂ ಧನಂ ॥ ೧೫ ॥

ಕೂಟಸಾಕ್ಷ್ಯಂ ತು ಕುರ್ವಾಣಾಂಸ್ತ್ರೀನ್ವರ್ಣಾನ್ಧಾರ್ಮಿಕೋ ನೃಪಃ ।
ಪ್ರಮಾಪಯೇನ್ಮಹಾಭಾಗ ಬ್ರಾಹ್ಮಣಂ ತು ವಿವಾಸಯೇತ್ ॥ ೧೬ ॥

---

೧೩. ಯಾವನಾದರೂ ಆಸ್ತಿವಂತನು ಯಾವುದಾದರೊಂದು ನಿಧಿಯನ್ನು ತನ್ನದೆಂದು ಅನ್ಯಾಯದಿಂದ ಹೇಳಿ ದಕ್ಕಿಹಾಕಿಕೊಳ್ಳಲು ಪ್ರಯತ್ನಪಟ್ಟರೆ ಅವನ ಮೋಸವು ತಿಳಿದು ಬಂದೊಡನೆಯೇ ಆ ಸಾಹುಕಾರನನ್ನು ವಿಚಾರಣೆಗೆ ಗುರಿಮಾಡಿ ಅವನ ಸ್ವಾರ್ಜಿತವಾದ ಆಸ್ತಿಯಲ್ಲಿ ಎಂಟನೇ ಒಂದು ಭಾಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ತೆಗೆದುಕೊಂಡುಬಿಡಬೇಕು.

೧೪. ಕಳ್ಳರು ನಿಜವಾಗಿ ತನ್ನ ಹಣವನ್ನು ಕಳದೆ ಇದ್ದಾಗ್ಯೂ ಹಣವನ್ನು ಕಳ್ಳರು ಕದ್ದುಹೋದರೆಂದು ಹೇಳುವ ಮೋಸಗಾರರನ್ನು ರಾಜನು ಹಿಡಿದು ದಂಡಿಸಬೇಕು.

೧೫. ಸ್ವಲ್ಪ ಹಣ ಹೋಗಿದ್ದಾಗ್ಯೂ ಹೆಚ್ಚು ಹಣ ಹೋಗಿದೆಯೆಂದು ಅಪಲಾಪ ಮಾಡುವ ವಂಚಕನನ್ನು ವಿಚಾರಣೆಗೆ ಗುರಿಪಡಿಸಿ ಅವನು ಸುಳ್ಳುಹೇಳಿದ ಮೊಬಲಗಿನ ಎರಡರಷ್ಟು ಜುಲ್ಮಾನೆ ವಿಧಿಸಬೇಕು.

೧೬. ಸುಳ್ಳುಸಾಕ್ಷಿ ಹೇಳುವ ವರ್ಣತ್ರಯ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ,) ದ ಜನರನ್ನು ಧಾರ್ಮಿಕನಾದ ರಾಜನು ನ್ಯಾಯವಾಗಿ ವಧೆಯನ್ನೇ ಮಾಡಿಸಿಬಿಡಬೇಕು. ಬ್ರಾಹ್ಮಣನಾದವನನ್ನು ಮಾತ್ರ ದೇಶದಿಂದ ಹೊರಡಿಸಿಬಿಡಬೇಕು.

**ಯತ್ಸ್ವಾಮಿನಾನನುಜ್ಞಾತಮಾಧಿಂ ಭುಙ್ಕ್ತೇ ವಿಚಕ್ಷಣಃ ।**
**ಅವಧ್ಯಮೂಲಂ ಕರ್ತವ್ಯಂ ತಸ್ಯ ದಂಡಂ ಮಹೀಕ್ಷಿತಾ ।**
**ವಸಾ..................ತಥಾ ಧರ್ಮೋ ನ ಹೀಯತೇ ॥ ೧೭ ॥**

**ಯೋ ನಿಕ್ಷೇಪಂ ಯಾಚಯತಿ ಯಶ್ಚ ನಿಕ್ಷಿಪ್ಯ ಯಾಚತೇ ।**
**ತಾವುಭೌ ಚೌರವಚ್ಛಾಸ್ಯೌ ದಾಪ್ಯೌ ವಾ ದ್ವಿಗುಣಂ ಧನಂ ॥ ೧೮ ॥**

**ಉಪಧಾಭಿಶ್ಚ ಯಃ ಕಶ್ಚಿತ್ಪರದ್ರವ್ಯಂ ಹರೇನ್ನರಃ ।**
**ಸ ಸಹಾಯಃ ಸ ಹಂತವ್ಯಃ ಪ್ರಕಾಶಂ ವಿವಿಧೈರ್ವಧೈಃ ॥ ೧೯ ॥**

---

೧೭. ತನ್ನ ಯಜಮಾನನ ಅಪ್ಪಣೆಯಿಲ್ಲದೆ ಅವನ ಅಧಿಷ್ಠಾನವನ್ನಾವನು ನಿರ್ಲಜ್ಜನಾಗಿ ಅನುಭವಿಸುವನೋ ಅವನೆಂತಹ ವಿಚಕ್ಷಣನಾದಾಗ್ಯೂ ಅವನನ್ನು ರಾಜನು ಜೀವಾವಧಿ ಬಂಧನ (ಸಜಕ್ಕೆ) ಕ್ಕೆ ಗುರಿಮಾಡಬೇಕು.

೧೭. —ಈ ಶ್ಲೋಕವು ಪೂರ್ತಿಯಾಗದೆ ಇದಾಗ್ಯೂ ಮತ್ತೊಂದು ಮೂರನೇ ಅರ್ಧಶ್ಲೋಕವನ್ನು ಪೂರ್ತಿಯಾಗಿ ಬರೆದು ತಥಾ ಧರ್ಮೋನ ಹೀಯತೆ ಎಂದು ಬರೆದಿರುವದ್ದರಿಂದ ಇದರ ಅರ್ಧವನ್ನು ಬಿಟ್ಟುಬಿಡಬೇಕಾಗಿದೆ.

೧೮. ಯಾವನು ಒಬ್ಬನ ವಶದಲ್ಲಿ ಕಂಡವರ ಹಣವನ್ನು ಬಚ್ಚಿಟ್ಟಿದ್ದು ಅದನ್ನು ಪುನಃ ಕೇಳಲಿಕ್ಕೆ ಬರುವನೋ, ಈ ಹಣವನ್ನಿಟ್ಟುಕೊಳ್ಳಲಿಕ್ಕೆ ಸಹಾಯ ಮಾಡುವವನಾವನೋ ಅವರಿಬ್ಬರ ಮೇಲೂ ಕಳ್ಳತನದ ತಪ್ಪಿತವನ್ನು ಹೊರಿಸಿ ಶಿಕ್ಷೆ ಮಾಡಬೇಕು.

೧೯. ಒಬ್ಬನಲ್ಲಿರುವ ಹಣವನ್ನು ರಾಜದಂಡಕ್ಕೆ ಹೆದರಿಸಿ ಯಾವ ಅಧಿಕಾರಿಯು ಲಂಚರೂಪವಾಗಿಯಾಗಲೀ ಬಹುಮಾನರೂಪವಾಗಿಯಾಗಲೀ ಕಿತ್ತುಕೊಂಡು ಅವನನ್ನು ನಿರ್ಗತಿಕನನ್ನಾಗಿ ಮಾಡುವನೋ ಅಂತಹ ಮಹಾಲಂಚಗೋರನನ್ನು ಹಿಡಿದು ಅವನ ಸಹಾಯಕ ಜನರ ಸಹಿತವಾಗಿ ಎಲ್ಲರೂ ಕಾಣುವ ಹಾಗೆ ಚಿತ್ರವಧೆ ಮಾಡಬೇಕು. ಉಪಧಾ-ಉಪದಾನವೆಂಬ ಪದಕ್ಕೆ ನಜರೆಂದೂ ಲಂಚವೆಂದೂ ಎರಡು ಅರ್ಥವುಂಟು.

**ಯೋ ಯಾಚಿತಕಮಾದಾಯ ನ ತದ್ದದ್ಯಾದ್ಯಥಾಕ್ರಮಂ ।**
**ಸ ನಿಗೃಹ್ಯ ಬಲಾದ್ದಾಪ್ಯೋ ದಂಡೋ ವೈ ಪೂರ್ವಸಾಹಸಂ ॥ ೨೦ ॥**

**ಅಜ್ಞಾನಾದ್ಯಃ ಪುಮಾಕುರ್ಯಾತ್ಪರದ್ರವ್ಯಸ್ಯ ವಿಕ್ರಯಂ ।**
**ನಿರ್ದೋಷೋ ಜ್ಞಾನಪರ್ಯಂತಂ ಚೌರವದ್ವಧಮರ್ಹತಿ ॥ ೨೧ ॥**

**ಮೂಲ್ಯಮಾದಾಯ ಯೋ ವಿದ್ಯಾಂ ಶಿಲ್ಪಂ ವಾ ನ ಪ್ರಯಚ್ಛತಿ ।**
**ದಂಡ್ಯಃ ಸಮೂಲಂ ಸಕಲಂ ಧರ್ಮಜ್ಞೇನ ಮಹೀಕ್ಷಿತಾ ॥ ೨೨ ॥**

**ದ್ವಿಜಭೋಜ್ಯೇ ತು ಸಂಪ್ರಾಪ್ತೇ ಪ್ರಾತಿವೇಶ್ಯಮಭೋಜನಂ ।**
**ಹಿರಣ್ಯಮಾಷಕಂ ದಂಡ್ಯಃ ಪಾಪೇ ನಾಸ್ತಿ ಹ್ಯತಿಕ್ರಮಃ ॥ ೨೩ ॥**

---

೨೦. ಹೆಚ್ಚು ವ್ಯಾಪಾರಮಾಡುವವರಲ್ಲಿ ಮುಖ್ಯಸ್ಥನಾದವನು ಆದಾಯಬಂದ ಹಣದಲ್ಲಿ ಪಾಲುಗಾರರೆಲ್ಲರಿಗೂ ಸಮನಾಗಿ ಹಂಚಬೇಕು. ಅಥವಾ ಷೇರಿನಂತೆ ಕ್ರಮಬದ್ಧವಾಗಿ ಹಂಚಬೇಕು. ಹಾಗೆ ಮಾಡದೆ ಮೋಸಮಾಡಿದರೆ ಹಿಂದೆ ಹೇಳಿದ ಶಿಕ್ಷೆಗೇ ಅವನೂ ಗುರಿಯಾಗಬೇಕಾಗುತ್ತದೆ.

೨೧. ಯಾವ ಮನುಷ್ಯನು ಅಜ್ಞಾನದಿಂದ ಪರರ ಸ್ವತ್ತನ್ನು ವಿಕ್ರಯಿಸುವನೋ ಅಂತಹವನು ನಿರ್ದೋಷಿಯಾದರೂ ಚೋರನಂತೆ ದಂಡಾರ್ಹನಾಗುತ್ತಾನೆ. ಇಲ್ಲಿ ಪದಾರ್ಥವನ್ನು ದಂಡನೆಯೆಂದು ತಿಳಿಯಬೇಕು.

೨೨. ವಿದ್ಯೆಯನ್ನು ಕಲಿಸುತ್ತೇನೆಂದು ನಂಬಿಕೆ ಹುಟ್ಟಿಸಿ ಹಣವನ್ನು ಪಡೆದು ವಿದ್ಯೆಯನ್ನಾಗಲೀ, ಶಿಲ್ಪವನ್ನಾಗಲೀ ಯಾವನು ಕಲಿಸದೆ ಮೋಸಮಾಡುವನೋ ಅಂತಹ ವಂಚಕನನ್ನು ಧೊರೆಯು ತಪ್ಪಿಗೆ ಗುರಿಮಾಡಿ ಅವನ ಆಸ್ತಿಯನ್ನೆಲ್ಲಾ ಮುಟ್ಟುಗೋಲು ಹಾಕಿಕೊಂಡುಬಿಡಬೇಕು.

೨೩. ಬ್ರಾಹ್ಮಣರ ಸಮಾರಾಧನೆ ಮಾಡುತ್ತಿರುವ ಕಾಲದಲ್ಲಿ ಯಾವ ಮನುಷ್ಯನು ನೆರೆಹೊರೆಯ ಮನೆಯವರನ್ನು (ಅಕ್ಕಪಕ್ಕದ ಮನೆ) ಊಟಕ್ಕೆ ಕರಿಯದೆ ಹೋಗುವನೋ, ಅವನು ತಪ್ಪಿತಸ್ಥನಾಗುವುದರಿಂದ ಅವನನ್ನು ವಿಚಾರಣೆಗೆ ಗುರಿಮಾಡಿ ಒಂದು ಉದ್ದಿನ ಕಾಳಿನಷ್ಟು ಚಿನ್ನವನ್ನು ಜುಲ್ಮಾನೆ ಹಾಕಿಬಿಡಬೇಕು.

**ಆಮಂತ್ರಿತೋ ದ್ವಿಜೋಯಸ್ತು ವರ್ತಮಾನಃ ಪ್ರತಿಗ್ರಹೇ ।**
**ನಿಷ್ಕಾರಣಂ ನಗಚ್ಛೇದ್ಯಃ ಸ ದಾಪ್ಯೋಽಷ್ಟಶತಂ ದಮಂ ॥ ೨೪ ॥**

**ಪ್ರತಿಶ್ರುತ್ಯಾ ಪ್ರದಾತಾರಂ ಸುವರ್ಣಂ ದಂಡಯೇನ್ನೃಪಃ । ॥ ೨೫ ॥**

**ಭೃತೋಽನಾರ್ತೋ ನ ಕುರ್ಯಾದ್ಯೋ ದರ್ಪಾತ್ಕರ್ಮ ಯಥೋದಿತಂ ।**
**ಸ ದಂಡ್ಯಃ ಕೃಷ್ಣಲಾನ್ಯಷ್ಟೌ ನ ದೇಯಂ ಚಾಸ್ಯ ವೇತನಂ ॥ ೨೬ ॥**

**ಅಕಾಲೇ ಯಸ್ತ್ಯಜೇದ್ ಭೃತ್ಯಂ ದಂಡ್ಯಃ ಸ್ಯಾತ್ತಾವದೇವತು ।**
**ಯೋ ಗ್ರಾಮದೇಶಸಂಘಾನಾಂ ಕೃತ್ವಾ ಸತ್ಯೇನ ಸಂವಿದಂ ।**
**ವಿಸಂವದೇನ್ನರೋ ಲೋಭಾತ್ತಂ ರಾಷ್ಟ್ರಾದ್ವಿಪ್ರವಾಸಯೇತ್ ॥ ೨೭ ॥**

---

೨೪. ಒಬ್ಬರ ಮನೆಗೆ ಊಟಕ್ಕಾಗಲೀ, ದಾನ ದಕ್ಷಿಣೆಗಾಗಲೀ ಒಪ್ಪಿಕೊಂಡ ಬ್ರಾಹ್ಮಣನು ಅವರ ಮನೆಗೆ ಹೋಗದೆ ನಿಷ್ಕಾರಣವಾಗಿ ತಪ್ಪಿಸಿಕೊಂಡು ಬೇರೆಯೊಬ್ಬರ ಮನೆಗೆ ಪ್ರತಿಗ್ರಹಾರ್ಥವಾಗಿ ಹೋದರೆ ಅವನು ತಪ್ಪಿತಸ್ಥನಾಗುತ್ತಾನೆ. ಅವನಿಗೆ ೮ ಗುಲಗಂಜಿ ತೂಕ ಚಿನ್ನವನ್ನು ದಂಡ (ಜುಲ್ಮಾನೆ) ಹಾಕಬೇಕು.

೨೫. ಒಂದುವೇಳೆ ಬ್ರಾಹ್ಮಣರನ್ನು ದಾನಕ್ಕಾಗಿ ಕರೆದುದಾನಕೊಡುತ್ತೇವೆಂದು ಹೇಳಿ, ಆ ಬ್ರಾಹ್ಮಣನು ಬಂದಾಗ ದಾನಕೊಡದೆ ಹೋಗುವ ತಪ್ಪಿತಸ್ಥನೂ ಸಹ ಮೇಲೆ ಹೇಳಿದಷ್ಟೇ ದ್ರವ್ಯವನ್ನು ದಂಡವಾಗಿ ತೆರಬೇಕು.

೨೬. ಯಜಮಾನನು (ಅಧಿಕಾರಿಯು) ಅಧಿಕಾರ ದರ್ಪದಿಂದ ಹೇಳಿದ ಮಾತನ್ನು, ಆರೋಗ್ಯಸ್ಥಿತಿಯಲ್ಲಿದ್ದಾಗ್ಯೂ ಸೇವಕನಾದವನು ಮಾಡದೆ ತಿರಸ್ಕರಿಸಿದರೆ ಎಂಟು ಗುಲಗಂಜೀ ತೂಕ ಚಿನ್ನವನ್ನು ದಂಡವಾಗಿ ತೆರುವಂತಹ ತಪ್ಪಿಗೆ ಗುರಿಯಾಗುತ್ತಾನೆ. ಅಂತಹವನಿಗೆ ಈ ವಿಧವಾದ ದಂಡವನ್ನು ವಿಧಿಸುವುದರ ಜತೆಗೆ ಅವನ ಸಂಬಳವನ್ನೂ ಸಹ ಕೊಡದೆ ತಡೆದುಬಿಡಬೇಕು.

೨೭. ಯಾವ ಮನುಷ್ಯನು ಅಕಾಲದಲ್ಲಿ ತನ್ನ ಭೃತ್ಯರನ್ನು ಬಿಟ್ಟು ಬಿಡುತ್ತಾನೆಯೋ, ಅವನು ಅಷ್ಟು ದಿನಗಳವರಿಗೆ ದಂಡಾರ್ಹನಾಗುತ್ತಾನೆ. ಯಾವನು ಗ್ರಾಮ, ದೇಶ, ಸಂಘಗಳಮೇಲೆ ಸತ್ಯವಾಗಿ ವಿರೋಧಮಾಡಿಕೊಳ್ಳುತ್ತಾನೆಯೋ (ಬಲವದ್ವಿರೋಧ) ಅಂಥವನನ್ನು ರಾಷ್ಟ್ರದಿಂದ ಹೊರಡಿಸಿಬಿಡಬೇಕು.

ಕ್ರೀತ್ವಾ ವಿಕ್ರೀಯ ವಾ ಕಿಂಚಿದ್ಯಸ್ಯೇಹಾನುಶಯೋಭವೇತ್ ।
ಸೋಽನ್ತರ್ದಶಾಹಾತ್ತತ್ಸ್ವಾಮ್ಯಾದ್ದದ್ಯಾಚ್ಚೈವಾದದೀತಚ　　॥ ೨೮ ॥

ಪರೇಣ ತು ದಶಾಹಸ್ಯ ನ ದದ್ಯಾನ್ನೈವ ದಾಪಯೇತ್ ।
ಆದದದ್ವಿದದಚ್ಚೈವ ರಾಜ್ಞಾ ದಂಡ್ಯಃ ಶತಾನಿ ಷಟ್　　॥ ೨೯ ॥

ಯಸ್ತು ದೋಷವತೀಂ ಕನ್ಯಾಂ ತ್ವನಾಖ್ಯಾಯ ಪ್ರಯಚ್ಛತಿ ।
ತಸ್ಯ ಕುರ್ಯಾ ನ್ನೃಪೋ ದಂಡಂ ಸ್ವಯಂ ಷಣ್ಣವತಿಃ ಪಣಾನ್　　॥ ೩೦ ॥

ಅಕನ್ಯೇತಿ ತು ಯಃ ಕನ್ಯಾಂ ಬ್ರೂಯಾದ್ದ್ವೇಷೇಣ ಮಾನವಃ ।
ಸ ಶತಂ ಪ್ರಾಪ್ನುಯಾದ್ದಂಡಂ ಕನ್ಯಾದೋಷಮುದರ್ಶಯನ್　　॥ ೩೧ ॥

---

೨೮-೨೯. ಯಾವುದಾದರೊಂದು ಪದಾರ್ಥವನ್ನು ಮಾರಿದ ಸಂದರ್ಭದಲ್ಲಿಯಾಗಲೀ, ತಾನೇ ಕ್ರಯಕ್ಕೆ ತೆಗೆದುಕೊಂಡ ಸಂದರ್ಭದಲ್ಲಿಯಾಗಲೀ, ಆ ಸ್ವತ್ತನ್ನು ಕ್ರಯವಾದ ಅಥವಾ ಮಾರಾಟವಾದ ಹತ್ತು ದಿವಸಗಳಲ್ಲಿ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಹಾಗೆ ಮಾಡದೆ ಹತ್ತು ದಿನ ಮೀರಿಹೋದ ಬಳಿಕ ಅವನು ಕೊಡುವುದನ್ನೂ ನಿಲ್ಲಿಸಿ ಕ್ರಯಪತ್ರವನ್ನು ರದ್ದುಮಾಡಿ ಅವನಮೇಲೆ ವಿಚಾರಣೆಮಾಡಿ ಅವನಿಗೆ ೬೦೦ ಪಣ ಜುಲ್ಮಾನೆಯನ್ನು ವಿಧಿಸಬೇಕು.

೩೦. ಯಾವನಾದರೂ ದೋಷಗ್ರಸ್ತಳಾದ ಕನ್ಯೆಯನ್ನೂ, ಆ ಕನ್ಯೆಯ ದೋಷವನ್ನೂ ಬಚ್ಚಿಟ್ಟು ಮತ್ತೊಬ್ಬನಿಗೆ ದಾನಮಾಡುವನೋ ಅಂತಹವನನ್ನು ತಪ್ಪಿತಕ್ಕೆ ಗುರಿಮಾಡಿ ರಾಜನು ೯೬ ಪಣವನ್ನು ದಂಡವಾಗಿ ವಿಧಿಸಬೇಕು

೩೧. ಯಾವನು ನಿಜವಾದ ಕನ್ಯೆಯನ್ನು ಕನ್ಯೆಯಲ್ಲವೆಂದು ಹೇಳಿ ಮತ್ತೊಬ್ಬನ ಮೇಲೆ ದ್ವೇಷಾಸೂಯೆಯಿಂದ ಕನ್ಯಾದಾನ ಮಾಡಲು ವಿಘ್ನ ಮಾಡುವನೋ ಅವನಿಗೆ ನೂರು ಪಣ ದಂಡವನ್ನು ವಿಧಿಸಬೇಕು. ಮತ್ತು ಆ ಕನ್ಯೆಯು ದೋಷಗ್ರಸ್ತಳೆಂದು ರುಜವಾತುಮಾಡಿಕೊಡಬೇಕು. (ದಂಡ ಅಥವಾ ಜುಲ್ಮಾನೆಯ ಹಣವನ್ನು ಪಣರೂಪವೆಂದು ತಿಳಿದುಕೊಳ್ಳಬೇಕು. ಈ ಪಣದ ಲೆಖ್ಖವನ್ನು ಮೊದಲೇ ತಿಳಿಸಲಾಗಿದೆ).

ಯಸ್ತ್ವನ್ಯಾಂ ದರ್ಶಯಿತ್ವಾಽನ್ಯಾಂ ವೋಢುಃ ಕನ್ಯಾಂ ಪ್ರಯಚ್ಛತಿ ।
ಉತ್ತಮಂ ತಸ್ಯ ಕುರ್ವೀತ ರಾಜಾ ದಂಡಂ ತು ಸಾಹಸಂ ॥ ೩೨ ॥

ವರೋ ದೋಷಾನಭಿಖ್ಯಾಪ್ಯ ಯಃ ಕನ್ಯಾಂ ವರಯೇದಿಹ ।
ದತ್ತಾಽಪ್ಯದತ್ತಾ ಸಾ ತಸ್ಯ ರಾಜ್ಞಾ ದಂಡ್ಯಃ ಶತದ್ವಯಂ ॥ ೩೩ ॥

ಪ್ರದಾಯ ಕನ್ಯಾಂ ಯೋಽನ್ಯಸ್ಮೈ ಪುನಸ್ತಾಂ ಸಂಪ್ರಯಚ್ಛತಿ ।
ದಂಡಃಕಾರ್ಯೋ ನರೇಂದ್ರೇಣ ತಸ್ಯಾಪ್ಯುತ್ತಮ ಸಾಹಸಃ ॥ ೩೪ ॥

ಸತ್ಯಂ ಕಾರೇಣ ವಾಚಾ ಚ ಯುಕ್ತಂ ಪರ್ಯಾಸಮಂ ಶಯಂ ।
ಲಬ್ಧೋಽನ್ಯತ್ರ ತು ವಿಕ್ರೇತಾ ಷಟ್‌ಶತಂ ದಂಡಮರ್ಹತಿ ॥ ೩೫ ॥

---

೩೨. ಮದುವೆಯಾಗುವುದಕ್ಕೆ ಮುಂಚೆ ಒಂದು ಕನ್ಯೆಯನ್ನು ತೋರಿಸಿ ಕನ್ಯಾದಾನಕಾಲದಲ್ಲಿ ಬೇರೆ ಕನ್ಯೆಯನ್ನು ಮದುವೆಮಾಡಿಕೊಡುವುದಕ್ಕೆ ಪ್ರಯತ್ನಿಸುವ ಮನುಷ್ಯನು ಉತ್ತಮ ದಂಡಕ್ಕೆ ಗುರಿಯಾಗುತ್ತಾನೆ. (ಸಾವಿರ ಪಣವನ್ನು ಉತ್ತಮ ದಂಡವೆಂದು ಮೊದಲೇ ಹೇಳಿದೆ).

೩೩. ವರನಾದವನು ಮೊದಲು ಕನ್ಯೆಯ ದೋಷಗಳನ್ನು ಉದ್ಘಾಟಿಸಿ ಬಳಿಕ ಅವಳನ್ನು ವರಿಸುತ್ತಾನೆಂದು ಭಾವಿಸೋಣ. ದೋಷವನ್ನಭಿಖ್ಯಾಪನೆ ಮಾಡಿದ ಅವನು ರಾಜನಿಂದ ದಂಡಾರ್ಹನಾಗಿ, ಆ ಕನ್ಯೆಯನ್ನು ಮದುವೆಯಾಗಲೀ, ಮದುವೆ ಯಾಗದೇ ಇರಲಿ ೨೦೦ ಪಣದಷ್ಟು ದಂಡವನ್ನು ತೆರಬೇಕಾಗುತ್ತದೆ.

೩೪. ಮೊದಲು ಒಬ್ಬನಿಗೆ ಕನ್ಯೆಯನ್ನು ಧಾರೆಯೆರೆದು ಕೊಟ್ಟ ಬಳಿಕ, ಅದೇ ಕನ್ಯೆಯನ್ನು ಇನ್ನೊಬ್ಬನಿಗೆ ಯಾವನು ದಾನಮಾಡುವ ಪ್ರಯತ್ನಮಾಡುವನೋ ಅಂತಹವನು ರಾಜದಂಡಕ್ಕೆ ಗುರಿಯಾಗಿ ಉತ್ತಮದಂಡ (೧ ಸಾವಿರ ಪಣ) ವನ್ನು ತೆರಬೇಕು.

೩೫. ಯಾವುದಾದರೊಂದು ಪದಾರ್ಥವನ್ನು ಸತ್ಯವಾಗಿ ಕ್ರಯಮಾಡುವೆ ನೆಂದು ಬ್ರಾಹ್ಮಣನಿಗೆ ಆಶೆ ತೋರಿಸಿ ಅದನ್ನು ಅವನಿಗೆ ಕೊಡದೆ ಹೆಚ್ಚು ಧನಲೋಭ ದಿಂದ ಮತ್ತೊಬ್ಬನಿಗೆ ಯಾವನು ಮಾರುವನೋ ಅವನಿಗೆ ೬೦೦ ಪಣ ದಂಡವನ್ನು ವಿಧಿಸಬೇಕು.

ವಹೇಚ್ಛುಲ್ಕಂ ತು ವಿಕ್ರೇತಾ ಸತ್ಯಂಕಾರಂ ತು ಸಂತ್ಯಜೇತ್ ।
ದ್ವಿಗುಣಂ ದಂಡಯೇದೇನಮಿತಿ ಧರ್ಮೋ ವ್ಯವಸ್ಥಿತಃ ॥ ೩೬ ॥

ಮೂಲ್ಯೈಕದೇಶಂ ದತ್ವಾ ತು ಯದಿ ಕ್ರೇತಾ ಧನಂ ತ್ಯಜೇತ್ ।
ದಂಡ್ಯಃ ಸ ಮಧ್ಯಮಂ ದಂಡಂ ತಸ್ಯ ದಂಡಸ್ಯ ಮೋಕ್ಷಣಾತ್ ॥ ೩೭ ॥

ಪ್ರುಹ್ಯಾದ್ಭೃತಸ್ತು ಯಃ ಪಾಲಂ ಗೃಹೀತ್ವಾ ಭಕ್ತವೇತನಂ ।
ಸ ತು ದಂಡ್ಯಃ ಶತಂ ರಾಜ್ಞಾ ಸುವರ್ಣಂ ಸ್ವಾಮ್ಯರಕ್ಷಣಾ ॥ ೩೮ ॥

ದಂಡ್ಯಂ ದತ್ವಾ ನ ವಿರಮೇತ್ಸ್ವಾಮಿಭಿಃ ಕೃತಲಕ್ಷಣಃ ।
ಬದ್ಧಃ ಕೃತ್ವಾಽಯಸೈಃ ಪಾಶೈಸ್ತಸ್ಯ ಕರ್ಮಕರೋ ಭವೇತ್ ॥ ೩೯ ॥

---

೩೬. ಈ ದಂಡದ್ರವ್ಯವನ್ನು ವಿಕ್ರೇತನೇ ವಹಿಸಿಕೊಳ್ಳಬೇಕು. ಸತ್ಯಂಕಾರ ನನ್ನು ಬಿಟ್ಟುಬಿಡಬೇಕು. ಸತ್ಯಂಕಾರನೆಂದರೆ ಪದಾರ್ಥ ಸಿಕ್ಕದೆ ಮೋಸಹೋದ ಮನುಷ್ಯ). ಧನಲೋಭಿಗೆ ದ್ವಿಗುಣದಂಡವನ್ನು ವಿಧಿಸಬೇಕೆಂದು ಧರ್ಮವು ವ್ಯವಸ್ಥೆ ಮಾಡಿದೆ.

೩೭. ಒಂದು ಪದಾರ್ಥವನ್ನು ಖರೀದಿಗೆ ತೆಗೆದುಕೊಳ್ಳುವಂತೆ ಹೇಳಿ ಒಟ್ಟು ಹಣದಲ್ಲಿ ಒಂದು ಪಾಲನ್ನು ಮಾತ್ರ ಕೊಟ್ಟು ಉಳಿದ ಹಣವನ್ನು ಕೊಡದೆ, ಪದಾರ್ಥ ವನ್ನೂ ಕೊಳ್ಳದೆಹೋದರೆ ಅವನು ಕೊಟ್ಟ ಹಣವನ್ನು ಕಳೆದುಕೊಳ್ಳುವನಲ್ಲದೆ ಕರಾರಿಗೆ ತಪ್ಪಿಹೋದುದಕ್ಕಾಗಿ ಮಧ್ಯಮದಂಡ (೫೦೦ ಪಣ ದಂಡ) ವನ್ನು ತೆರಬೇಕು.

೩೮. ಒಬ್ಬ ಸೇವಕನು ಮುಂಗಡವಾಗಿ(ಅಡ್ವಾನ್ಸಾಗಿ) ಸಂಬಳವನ್ನು ಪಡೆದು, ಆ ಮುಂಗಡವು ತೀರುವುದಕ್ಕೆ ಮುಂಚೆ ಕೆಲಸಕ್ಕೆ ಬಾರದೆ ತಪ್ಪಿಸಿಕೊಳ್ಳುವುದಾದರೆ ಆ ಸೇವಕನು ಸುವರ್ಣನಾಣ್ಯ ದಂಡವನ್ನು ತೆರಬೇಕು.

೩೯. ಈ ದಂಡದ್ರವ್ಯವನ್ನು ತೆರುವುದಷ್ಟೇ ಅಲ್ಲ. ದಂಡವನ್ನು ಕೊಟ್ಟಾದ ಮೇಲೂ ಯಜಮಾನನ ಕೆಲಸವನ್ನು ಮಾಡಲೇಬೇಕು. ಹಾಗೆ ಕೆಲಸಮಾಡದೆ ತಪ್ಪಿಸಿಕೊಳ್ಳುವನೆಂದು ಅವನಮೇಲೆ ಸಂದೇಹವಿದ್ದೇ ಇರುವುದರಿಂದ ಅವನಿಗೆ ಕಬ್ಬಿಣದ ಬೇಡಿಗಳನ್ನು ತೊಡಿಸಿ ಬಂಧನದಲ್ಲಿಟ್ಟು ಪ್ರತಿದಿನವೂ ಕೆಲಸ ತೆಗೆದು ಕೊಳ್ಳುತ್ತಾ ಬರಬೇಕು.

**ಧನುಶ್ಚತುಃ ಪರೀಮಾಣಂ ಗ್ರಾಮಸ್ಯ ತು ಸಮಂತತಃ ।**
**ದ್ವಿಗುಣಂ ತ್ರಿಗುಣಂ ವಾಪಿ ನಗರಸ್ಯ ತು ಕಲ್ಪಯೇತ್ ॥ ೪೦ ॥**

**ವೃತಿಂ ತತ್ರ ಪ್ರಕುರ್ವೀತ ಯಾಮುಷ್ಟ್ರೋ ನಾವಲೋಕಯೇತ್ ।**
**ಛಿದ್ರಂ ನಿವಾರಯೇತ್ಸರ್ವಂ ಶ್ವಸೂಕರಮುಖಾನುಗಂ ॥ ೪೧ ॥**

**ತತ್ರಾಪರಧೃತಂ ಧಾನ್ಯಂ ಮಹಿಷ್ಯಃ ಪಶವೋ ಯದಿ ।**
**ನ ತತ್ರ ಕಾರಯೇದ್ದಂಡಂ ನೃಪತಿಃ ಪಶುರಕ್ಷಿಣಾಂ ॥ ೪೨ ॥**

**ಅನಿರ್ದಶಾಹಾಂ ಗಾಂ ಸೂತಾಂ ವೃಷಾನ್ದೇವಪಶೂಂಸ್ತಥಾ ।**
**ಸಪಾಲಾನ್ವಾ ವಿಪಾಲಾನ್ವಾ ನ ದಂಡ್ಯಾನ್ಮನುರಬ್ರವೀತ್ ॥ ೪೩ ॥**

---

೪೦. ಊರಿನ ಸುತ್ತಲೂ ನಾಲ್ಕು ಧನುಃ ಪ್ರಮಾಣ ಗೋಮಾಳವನ್ನು ಬಿಡಬೇಕು. ನಗರದ ಸುತ್ತಿನಲ್ಲಾದರೆ ಅದರ ಎರಡರಷ್ಟು ಮೂರರಷ್ಟು ಹೆಚ್ಚಾದ ಮಾಳ (ಜಮೀನು) ವನ್ನು ಬಿಡಬೇಕು.

೪೧. ಅಲ್ಲಿ ಹುಲ್ಲಗಾವಲು (ವೃತ್ತಿ) ಮಾಡಬೇಕು. ಆ ಭೂಮಿಯನ್ನು ಒಂಟೆಯು ನೋಡಬಾರದು. ಗೋಮಾಳದ (ಜಮೀನು) ಸುತ್ತಲೂ ನಾಯಿ ನರಿ, ಹಂದಿಗಳು ನುಗ್ಗದಂತೆ ಬಲವಾದ ಬೇಲಿ ಹಾಕಬೇಕು.

೪೨. ಅಲ್ಲಿ ಬೇಕಾದ ಬೆಳೆಯನ್ನು ಬೆಳೆಯಬಹುದು. ಆ ರೀತಿ ಬೆಳೆದ ಬೆಳೆಯನ್ನು ಒಂದು ವೇಳೆ ಎಮ್ಮೆಗಳಾಗಲಿ, ಹಸುಗಳಾಗಲಿ ನುಗ್ಗಿ ಮೇದುಬಿಟ್ಟರೆ, ಆ ದನಗಳನ್ನು ಕಾಯುವವರಿಗೆ ಶಿಕ್ಷೆ ವಿಧಿಸಕೂಡದು.

೪೩. ಆ ಗೋಮಾಳದಲ್ಲಿ ಬೆಳೆಸಿದ ಬೆಳೆಗೆ ಕರು ಹಾಕಿ ಇನ್ನೂ ಹತ್ತು ದಿನವಲ್ಲದ ಹಸುವಾಗಲೀ, ದೇವಸ್ಥಾನದ ಗೂಳಿಯಾಗಲೀ, ವೃಷೋತ್ಸರ್ಗದ ಗೂಳಿಯಾಗಲೀ ನುಗ್ಗಿ ಮೇದರೂ ಅದರ ತಂಟೆಗೆ ಹೋಗದೆ ಸುಮ್ಮನಿರಬೇಕು. ಅದನ್ನು ಕಾಯುವವರಿರಲಿ, ಕಾಯದೇ ತೊಂಡು ಮೇವಿಗೇ ಬಿಟ್ಟರಲೀ, ಅವರ ತಂಟೆಗೇ ಯಾರೂ ಹೋಗಕೂಡದು. ಈ ರೀತಿ ಮನುಧರ್ಮಶಾಸ್ತ್ರದಲ್ಲಿ ವಿಧಾಯಕವಾಗಿದೆ.

**ಅತೋನ್ಯಥಾ ವಿನಷ್ಟಸ್ಯ ದಶಾಂಶಂ ದಂಡ್ಯಮರ್ಹತಿ** ॥ ೪೪ ॥

**ಪಾಲಸ್ತ್ವ ಪಾಲಕೇ ಸ್ವಾಮಿ ವಿನಾಶೇ ಕ್ಷತ್ರಿಯಸ್ಯ ತು ।**
**ಭಕ್ಷಯಿತ್ವೋಪವಿಷ್ಟಾಸು ದ್ವಿಗುಣಂ ದಂಡ್ಯಮರ್ಹತಿ** ॥ ೪೫ ॥

**ವೈರಾದ್ದಶಗುಣಂ ದಂಡ್ಯಂ ವಿನಾಶಾತ್ಕ್ಷತ್ರಿಯಸ್ಯ ತು ।**
**ಗೃಹಂ ತಡಾಗಮಾರಾಮಂ ಕ್ಷೇತ್ರಂ ಬುದ್ಧ್ವಾ ಹ್ಯಪಾಹರೇ ।**
**ಶತಾನಿ ಪಂಚ ದಂಡ್ಯಃ ಸ್ಯಾದಜ್ಞಾನಾದ್ವಿಶತೋ ದಮಃ** ॥ ೪೬ ॥

**ಸೀಮಾಬಂಧನಕಾಲೇ ತು ಸೀಮಾಬಂಧನಕಾರಿಣಾಂ ।**
**ತೇಷಾಂ ಸಂಜ್ಞಾಂ ದಧಾನಸ್ತು ಜಿಹ್ವಾಚ್ಛೇದನಮಾಪ್ನುಯಾತ್** ॥ ೪೭ ॥

---

೪೪. ಈ ವಿಧವಾದ ಪ್ರಾಣಿಗಳಲ್ಲದೆ ಬೇರೆ ವಿಧವಾಗಿ ಆ ಜಮೀನಿನ ಬೆಳೆಯು ಮತ್ತಾವ ಸ್ವಾರ್ಥಪರರಿಂದಲಾದರೂ ನಷ್ಟವಾದರೆ, ನಷ್ಟವಾದ ಬೆಳೆಯ ಹತ್ತರಷ್ಟು ಭಾಗ ದಂಡವನ್ನು ನಷ್ಟಪಡಿಸಿದವರು ತೆರಬೇಕು.

೪೫. ಕ್ಷತ್ರಿಯರ ಜಮೀನಿನಲ್ಲಿ ಪಾಲಕರಿದ್ದಾಗಲಾಗಲೀ, ಇಲ್ಲದೆಯಿದ್ದಾಗಲಾಗಲೀ ಯಾರಾದರೂ ನುಗ್ಗಿ ಬೆಳೆಯನ್ನು ನಷ್ಟಗೊಳಿಸಿದರೆ ನಷ್ಟಪಡಿಸಿದವನು ನಷ್ಟವಾದಷ್ಟು ಬೆಳೆಯ ಎರಡರಷ್ಟು ಲುಕ್ಸಾನನ್ನು ಕಟ್ಟಿಕೊಡಬೇಕು.

೪೬. ಕ್ಷತ್ರಿಯರ ಜಮೀನನ್ನಾಗಲಿ, ಮನೆಯ ಸ್ವತ್ತನ್ನಾಗಲಿ, ತೋಟದ ಬೆಳೆಯನ್ನಾಗಲಿ ಯಾವನು ದ್ವೇಷದಿಂದ ಅಪಹರಿಸುವನೋ, ಅವನು ಆ ತಪ್ಪನ್ನು ಬುದ್ಧಿಪೂರ್ವಕವಾಗಿ ಮಾಡಿದ್ದರೆ ೫೦೦ ಹಣ ದಂಡವನ್ನೂ, ತಿಳಿಯದೇ ಮಾಡಿದ್ದರೆ ೨೦೦ ಹಣ ದಂಡವನ್ನೂ ಕೊಡಬೇಕಾಗುವುದು.

೪೭. ಸೀಮಾಬಂಧನ (ಜಮೀನಿನ ಎಲ್ಲೆಕಟ್ಟು ಅಥವಾ ಬಾಂದು ಕಲ್ಲು ನಡುವ ಸಮಯ) ಕಾಲದಲ್ಲಿ ಸೀಮಾಬಂಧನಕಾರಿ (ಮೋಜಣಿದಾರರು) ಗಳನ್ನು ಯಾರು ಕಣ್ಣು ಸನ್ನೆ ಮತ್ತು ಹಸ್ತಾಭಿನಯಗಳಿಂದ ಸ್ವಾಧೀನ ಮಾಡಿಕೊಳ್ಳಲು ಪ್ರಯತ್ನಪಡುವರೋ ಅಂಥವರ ನಾಲಿಗೆಯನ್ನು ಕತ್ತರಿಸಿಬಿಡಬೇಕು.

ಅರ್ಥೇನಾಪಿ ಚ ಯೋ ವಿದ್ಯಾತ್ಸಂವಿದಂ ವ್ಯಾಪಿ ಗಚ್ಛತಿ ।
ಉತ್ತಮಂ ಸಾಹಸಂ ದಂಡ್ಯ ಇತಿ ಸ್ವಾಯಂಭುವೋಽಬ್ರವೀತ್ ॥ ೪೮ ॥

ಸ್ಥಾಪಿತಾಂ ಚಾಪಿ ಮರ್ಯಾದಾಂ ಯೇ ಭಿಂದ್ಯುಃ ಪಾಪಕಾರಿಣಾಂ ॥ ೪೯ ॥

ಸರ್ವೇ ಪೃಥಕ್ಪೃಥಗ್ದಂಡ್ಯಾ ರಾಜ್ಞಾ ಪ್ರಥಮಸಾಹಸಂ ।
ಶತಂ ಬ್ರಾಹ್ಮಣಮಾಕ್ರುಶ್ಯ ಕ್ಷತ್ರಿಯೋ ದಂಡಮರ್ಹತಿ ॥ ೫೦ ॥

ವೈಶ್ಯಶ್ಚ ದ್ವಿಶತಂ ರಾಮ ಶೂದ್ರಶ್ಚ ವಧಮರ್ಹತಿ ।
ಪಂಚಾಶದ್ಬ್ರಾಹ್ಮಣೋ ದಂಡ್ಯಃ ಕ್ಷತ್ರಿಯಸ್ಯಾಪಿ ಶಾಸನೆ ॥ ೫೧ ॥

---

೪೮. ಮತ್ತೆ ಯಾರು ಜಮೀನಿನ ಎಲ್ಲೆಕಟ್ಟಿನಹೆಚ್ಚು ಕಡಿಮೆಗಾಗಿ ಮೋಜಣಿದಾರರಿಗೆ ಹಣಕೊಟ್ಟು ಸ್ವಾಧೀನಮಾಡಿಕೊಳ್ಳುವರೋ ಅಂಥವರಿಗೆ ಸಾವಿರ ಹಣ ದಂಡವನ್ನು ವಿಧಿಸಬೇಕೆಂದು ಮನುಧರ್ಮಶಾಸ್ತ್ರವು ಸಾರಿಸಾರಿ ಹೇಳಿರುವುದು.

೪೯. ಮೊದಲು ಹಾಕಿದ್ದ ಎಲ್ಲೆ (ಮರ್ಯಾದೆ) ಯನ್ನು ಯಾರು ಪಾಪಬುದ್ಧಿಯಿಂದ ಭೇದಿಸಲು ಪ್ರಯತ್ನಪಡುವರೋ ಅವರೆಲ್ಲರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ತಪ್ಪಿತಕ್ಕೆ ಗುರಿಮಾಡಿ ಒಂದೊಂದು ಸಾವಿರ ಹಣ ದಂಡವನ್ನು ವಿಧಿಸಬೇಕು.

೫೦. ಕ್ಷತ್ರಿಯನಾದವನು ಬ್ರಾಹ್ಮಣನ ಮೇಲೆ ಕೋಪಮಾಡಿಕೊಂಡು ಬೈದರೆ ನೂರು ಹಣ ದಂಡ ತೆರುವ ತಪ್ಪಿಗೆ ಗುರಿಯಾಗುತ್ತಾನೆ.

೫೧. ವೈಶ್ಯನಾದವನು ಬ್ರಾಹ್ಮಣನನ್ನು ಬೈದರೆ ಇನ್ನೂರು ಹಣ ದಂಡವನ್ನು ತೆರಬೇಕು. ಶೂದ್ರನಾದವನು ಬ್ರಾಹ್ಮಣನಮೇಲೆ ಆಕ್ರೋಶಮಾಡಿ ಬೈದರೆ ಅಂತಹವನನ್ನು ಕೊಂದೇಬಿಡಬೇಕು. (ಇದು ಯುಗಾಂತರದ ಮಾತಾಗಿ ಪರಿಣಮಿಸಿದೆ). ಬ್ರಾಹ್ಮಣನು ಬ್ರಾಹ್ಮಣನನ್ನು ಬೈದರೆ ಈ ತಪ್ಪಿತವನ್ನು ಕ್ಷತ್ರಿಯ ರಾಜನು ವಿಚಾರಣೆ ಮಾಡಿ ಬೈದ ಬ್ರಾಹ್ಮಣನಿಗೆ ಐವತ್ತು ಹಣ ದಂಡವನ್ನು ವಿಧಿಸಬೇಕು.

ವೈಶ್ಯೇ ಚಾಪ್ಯರ್ಧಪಂಚಾಶಚ್ಛೂದ್ರೇ ದ್ವಾದಶಕೋಽಧಮಃ ।
ಕ್ಷತ್ರಿಯಸ್ಯಾಪ್ನುಯಾ ದ್ವೈಶ್ಯಃ ಸಾಹಸಂ ಪೂರ್ವಮೇವ ತು ॥ ೫೨ ॥

ಶೂದ್ರಃ ಕ್ಷತ್ರಿಯಮಾಕ್ರುಶ್ಯ ಜಿಹ್ವಾಚ್ಛೇದನಮಾಪ್ನುಯಾತ್ ।
ಪಂಚಾಶತ್ಕ್ಷತ್ರಿಯೋ ದಂಡ್ಯಸ್ತಥಾ ವೈಶ್ಯಾಭಿಶಾಸನೆ ॥ ೫೩ ॥

ಶೂದ್ರೇ ಚೈನಾರ್ಧಪಂಚಾಶತ್ತಥಾ ಧರ್ಮೋ ನ ಹೀಯತೆ ।
ವೈಶ್ಯಸ್ಯಾಕ್ರೋಶನೇ ದಂಡ್ಯಃ ಶೂದ್ರಶ್ಚೋತ್ತಮಸಾಹಸಂ ॥ ೫೪ ॥

ಶೂದ್ರಾಕ್ರೋಶೇ ತಥಾ ವೈಶ್ಯಃ ಶತಾರ್ಧಂ ದಂಡ್ಯಮರ್ಹತಿ ।
ಸವರ್ಣಾಕ್ರೋಶನೇ ದಂಡ್ಯಸ್ತಥಾ ದ್ವಾದಶಕಃ ಸ್ಮೃತಃ ॥ ೫೫ ॥

ವಾದೇಷು ವಚನೀಯೇಷು ತದೇವ ద్విಗುಣಂ ಭವೇತ್ ।
ಏಕಜಾತಿರ್ದ್ವಿಜಾತಿಂ ತು ವಾಚಾ ದಾರುಣಯಾ ಕ್ಷಿಪನ್ ।
ಜಿಹ್ವಾಯಾಃ ಪ್ರಾಪ್ನುಯಾಚ್ಛೇದಂ ಜಘನ್ಯಪ್ರಭವೋ ಹಿ ಸಃ ॥ ೫೬ ॥

---

೫೨. ಬ್ರಾಹ್ಮಣನು ಕ್ಷತ್ರಿಯನನ್ನು ಬೈದರೆ ಐವತ್ತು ಹಣ ದಂಡ, ವೈಶ್ಯನನ್ನು ಬೈದರೆ ೨೫ ಹಣ ದಂಡ, ಶೂದ್ರನನ್ನು ಬೈದರೆ ೧೨|| ಹಣ ದಂಡಹಾಕಬೇಕು. ವೈಶ್ಯನು ಕ್ಷತ್ರಿಯನನ್ನು ಬೈದರೆ ಸಾವಿರ ಹಣ ದಂಡವನ್ನು ತೆರಬೇಕು.

೫೩. ಶೂದ್ರನು ಕ್ಷತ್ರಿಯನನ್ನು ಬೈದರೆ ನಾಲಿಗೆಯನ್ನೇ ಕತ್ತರಿಸಿಬಿಡಬೇಕು. ಕ್ಷತ್ರಿಯನು ವೈಶ್ಯನನ್ನು ಬೈದರೆ ೫೦ ಹಣ ದಂಡವನ್ನು ವಿಧಿಸಬೇಕು.

೫೪. ಕ್ಷತ್ರಿಯನು ಶೂದ್ರನನ್ನು ಬೈದರೆ ೨೫ ಹಣ ದಂಡವನ್ನು ಕೊಡಬೇಕು. ಹೀಗೆ ಮಾಡಿದರೆ ಧರ್ಮಕ್ಕೆ ಲೋಪ ಬರುವುದಿಲ್ಲ. ವೈಶ್ಯನನ್ನು ಶೂದ್ರನು ಬೈದರೆ ಉತ್ತಮ, ಸಾಹಸದಂಡ (೧ ಸಾವಿರ ಹಣ) ವನ್ನು ವಿಧಿಸಬೇಕು.

೫೫. ವೈಶ್ಯನು ಶೂದ್ರನನ್ನು ಬೈದರೆ ೫೦ ಹಣ ದಂಡವನ್ನು ಕೊಡಬೇಕು. ಶೂದ್ರನು ತನ್ನ ಜಾತಿಯವನನ್ನೇ ಬೈದರೆ ೧೨ ಹಣ ದಂಡವನ್ನು ತೆರಬೇಕು.

೫೬. ಮಾತನಾಡುತ್ತಿದ್ದಂತೆಯೇ ಜಗಳಕ್ಕೆ ಆರಂಭವಾಗಿ ಏಕಜಾತಿಯೆನಿಸಿದ ಶೂದ್ರನು ಉಳಿದ ಉತ್ತಮ ವರ್ಣದ ದ್ವಿಜಾತಿಗಳನ್ನು ಕಠಿನವಾದ ಮಾತಿನಿಂದ ಆಕ್ಷೇಪಣೆ ಮಾಡಿದ ಸಂದರ್ಭದಲ್ಲಿ, ಅವನ ನಾಲಿಗೆಯನ್ನು ಕತ್ತರಿಸಿಬಿಡಬೇಕು. ಏಕೆಂದರೆ ಹೀನಯೋನಿಯಲ್ಲುತ್ಪನ್ನನಾದುದರಿಂದಲೇ ಅವನು ಉತ್ತಮವರ್ಣಾಶ್ರಮದವರನ್ನು ಗೌರವಿಸಲೇಬೇಕೆಂದು ಮುಖ್ಯ ತಾತ್ಪರ್ಯ.

**ನಿಖನ್ಯೋಽಯೋಮಯಃ ಶಂಕುರ್ಜ್ವಲನ್ನಾಸ್ಯೇ ದಶಾಂಗುಲಃ ॥ ೫೭ ॥**

**ಧರ್ಮೋಪದೇಶಧರ್ಮೇಣ ದ್ವಿಜಾನಾಮಸ್ಯ ಕುರ್ವತಃ ।**
**ತಪ್ತಮಾಸಿಂಚಯೇತ್ತೈಲಂ ವಕ್ತ್ರೇ ಶ್ರೋತ್ರೇ ಚ ಪಾರ್ಥಿವಃ ॥ ೫೮ ॥**

**ಶೃತಂ ದೇಶಂ ಚ ಜಾತಿಂ ಚ ಕರ್ಮ ಶಾರೀರಮೇವ ಚ ।**
**ವಿತಥಂ ತು ಬ್ರುವರ್ದಂಡ್ಯೋ ರಾಜ್ಞಾ ದ್ವಿಗುಣಸಾಹಸಂ ॥ ೫೯ ॥**

**ಯಸ್ತು ಪಾತಕ ಸಂಯುಕ್ತೈಃ ಕ್ಷಿಪೇದ್ವರ್ಣಾಂತರೌ ವಿಶಃ ।**
**ಉತ್ತಮಂ ಸಾಹಸಂ ತಸ್ಮಿರ್ದಂಡ್ಯಃ ಪಾತ್ಯೋ ಯಥಾಕ್ರಮಂ ॥ ೬೦ ॥**

---

೫೭ ಈ ರೀತಿ ಶೂದ್ರನು ಉತ್ತಮವರ್ಣಾಶ್ರಮೀಯರನ್ನು ಕಠಿನಪದಗಳಿಂದ ಬೈದು ಅಥವಾ ಆಕ್ಷೇಪಿಸುತ್ತಿದ್ದಾಗಲೇ ಅವನ ಆವೇಶವು ಇನ್ನೂ ಹೆಚ್ಚುತ್ತಾ ಹೋಗಿ ಹೆಸರನ್ನೂ, ಜಾತಿಯನ್ನೂ ಹಿಡಿದು ಸಂಬೋಧಿಸಿದವನಾಗಿ ಬಯ್ಯುವುದಕ್ಕಾರಂಭಿಸಿದರೆ ಕೂಡಲೆ ಅವನನ್ನು ಹಿಡಿದು ಜೀವಸಹಿತವಾಗಿ ಹೂತುಬಿಡಬೇಕಲ್ಲದೆ, ಅವನ ಬಾಯಲ್ಲಿ ಹತ್ತಂಗುಲ ಉದ್ದದ ಕಬ್ಬಿಣದ ತುಂಡನ್ನು ಚೆನ್ನಾಗಿ ಕಾಸಿ ಇಟ್ಟುಬಿಡಬೇಕು.

೫೮. ಯಾವ ಹೀನಜಾತಿಪ್ರಸೂತನು ಬ್ರಾಹ್ಮಣರಿಗೆ ಧರ್ಮೋಪದೇಶ ಮಾಡಲು ಪ್ರಯತ್ನಪಡುವನೋ ಅಂಥವನ ಬಾಯಿಗೂ ಕಿವಿಗಳಿಗೂ ಎಣ್ಣೆಯನ್ನು ಚೆನ್ನಾಗಿ ಕಾಯಿಸಿ ಮಹಾರಾಜನು ಹಾಕಿಸಿಬಿಡಬೇಕು.

೫೯. ಕೋರ್ಟಿನಲ್ಲಿ ಜಡ್ಜಿಯ ಮುಂದೆ ನಿಂತಾಗ ಅವನ ಕುಲಗೋತ್ರನಾಮಗಳನ್ನು ಬರೆದುಕೊಂಡು ಸತ್ಯವಾಗಿ ಹೇಳುತ್ತೇನೆಂದು ಹೇಳಿಸಿ ಪ್ರಮಾಣ ಮಾಡಿಸುವುದುಂಟು. ಆ ರೀತಿ ಪ್ರಮಾಣ ಮಾಡಿಸುವ ಸಮಯದಲ್ಲಿ ಅವನ ಊರು, ಜಾತಿ, ಕೆಲಸ, ಹೆಸರುಗಳನ್ನು ಹೇಳುವಾಗ ಸುಳ್ಳನ್ನೇನಾದರೂ ಹೇಳಿ, ಅದು ಋಜುವಾತಾದರೆ ದ್ವಿಗುಣ ಸಾಹಸ (೨ ಸಾವಿರ ಹಣ ದಂಡ) ವನ್ನು ವಿಧಿಸಬೇಕು. (ಸಾಹಸಂ ತು ದಮೋದಂಡಃ ಎಂದು ಅಮರದಲ್ಲಿ ಹೇಳಿದೆ.)

೬೦. ಯಾವ ಮನುಷ್ಯನು ಪಾಪಪೂರಿತವಾದ ಮಾತುಗಳಿಂದ ವೈಶ್ಯಕ್ಷತ್ರಿಯರನ್ನು ಬೈಯುವನೋ ಅವನಿಗೆ ಕ್ರಮಾನುಸಾರವಾಗಿ ಉತ್ತಮದಂಡವನ್ನು ವಿಧಿಸಬೇಕು. (೧ ಮತ್ತು ೨ ಸಾವಿರ ಪಣ).

ರಾಜ್ಞೋ ನಿವೇಶ್ಯ ನಿಯಮಂ ಪ್ರಥಮಂ ಯಾಂತಿ ಯೇ ಮಿಥಃ ॥ ೬೧ ॥
ಸರ್ವೇ ದ್ವಿಗುಣದಂಡ್ಯಾಸ್ತೇ ವಿಪ್ರಲಂಭಾನ್ನೃಪಸ್ಯ ತು ।

ಪ್ರೀತ್ಯಾ ಮಯಾಸ್ಯಾಭಿಹಿತಂ ಪ್ರಮಾದೇನಾಥವಾ ವದೇತ್ ।
ಭೂಯೋ ನ ಚೈವಂ ವಕ್ಷ್ಯಾಮಿ ಸ ತು ದಂಡಾರ್ಧಭಾಗ್ಭವೇತ್ ॥ ೬೨ ॥

ಕಾಣಂ ವಾಪ್ಯಥವಾ ಖಂಜಮಂಧಂ ವಾಪಿ ತಥಾವಿಧಂ ।
ತಥ್ಯೇನಾಽಪಿ ಬ್ರುವರ್ದಾಪ್ಯೋ ದಂಡಃ ಕಾರ್ಷಾಪಣಾವರಂ ॥ ೬೩ ॥

ಮಾತರಂ ಪಿತರಂ ಜ್ಯೇಷ್ಠಂ ಭ್ರಾತರಂ ಶ್ವಶುರಂ ಗುರುಂ ।
ಆಕ್ಷಾರಯಂಚ್ಛತಂ ದಂಡ್ಯಃ ಪಂಥಾನಂ ಚಾದದದ್ಗುರೋಃ ॥ ೬೪ ॥

---

೬೧-೬೨. ರಾಜನಿಯಮಕ್ಕೆ ಬದ್ಧನಾಗಿ ನಿಯಮವನ್ನು ತಿಳಿದು ಮೊದಲು ಸುಳ್ಳನ್ನು ಹೇಳುವವನು ಒಂದಕ್ಕೆರಡರಷ್ಟು ದಂಡವನ್ನು ಕೊಡಬೇಕು. ಸುಳ್ಳು ಹೇಳಿಯಾದಮೇಲೆ, ನಾನು ತಮಾಷೆಗೋಸ್ಕರ, ವಿನೋದಕ್ಕೋಸ್ಕರ ಅಥವಾ ಇನ್ನೊಬ್ಬನಮೇಲಿನ ಕೋಪದಿಂದ ಅಥವಾ ಹಠದಿಂದ ಹೇಳಿದೆನೆಂದೂ, ಹಾಗೆ ಹೇಳಿದುದು ತಪ್ಪೆಂದೂ ಒಪ್ಪಿಕೊಳ್ಳುವುದಾದರೆ ಅರ್ಧ ಶಿಕ್ಷೆಯನ್ನು ವಜಾ ಮಾಡ ಬಹುದು.

೬೩. ಕುರುಡಕುಂಟಹೆಳವರಮೇಲೂ ವಿಕಲಾಂಗರಮೇಲೂ ಅಂತಹ ವಿಧ ರಾದ ಬೇರೆಬೇರೆ ಪಾಪಜನ್ಮಗಳಮೇಲೂ ಸುಳ್ಳುಸಾಕ್ಷ್ಯವನ್ನು ಹೇಳುವವನು ಒಂದು ಗುಲಗಂಜೀತೂಕದ ಚಿನ್ನವನ್ನು ದಂಡಕೊಡಬೇಕು.

೬೪. ಯಾವನು ಮಾತಾಪಿತೃಗಳನ್ನೂ, ಹಿರಿಯ ಅಣ್ಣನನ್ನೂ, ಮಾವನನ್ನೂ, ಗುರುವನ್ನೂ, ಗುರುವು ಹೋಗುವ ದಾರಿಯನ್ನೂ ಆಕ್ಷೇಪಣೆಮಾಡುವನೋ ಅಥವಾ ವಿರೋಧಿಸುವನೋ ಅವನು ನೂರು ಹಣ ದಂಡವನ್ನು ತೆರುವ ತಪ್ಪಿಗೆ ಗುರಿಯಾಗು ತ್ತಾನೆ.

**ಗುರುವರ್ಜ್ಯಂ ತು ಮಾರ್ಗಾರ್ಹೇ ಯೋ ಮಾರ್ಗಂ ನ ಪ್ರಯಚ್ಛತಿ ।**
**ಸ ರಾಜ್ಞಾ ಕೃಷ್ಣಲಂ ದಂಡಸ್ತಸ್ಯ ಪಾಪಸ್ಯ ಶಾಂತಯೇ ॥ ೬೫ ॥**

**ಏಕಜಾತಿರ್ದ್ವಿಜಾತಿಂತು ಯೇನಾಂಗೇನಾಪರಾಧ್ನುಯಾತ್ ।**
**ತದೇವ ಚ್ಛೇದಯೇತ್ತಸ್ಯ ಕ್ಷಿಪ್ರಮೇವಾ ವಿಚಾರಯನ್ ॥ ೬೬ ॥**

**ಅವನಿಷ್ಠೀವತೋ ದರ್ಪಾದ್ದ್ವಾವೋಷ್ಠೌ ಛೇದಯೇನ್ನೃಪಃ ।**
**ಅವಸೇಚಯತೋ ಮೇಢ್ರಮವಶಬ್ದಯತೋ ಗುದಂ ॥ ೬೭ ॥**

**ಮಹಾಸನಮಭಿಪ್ರೇಪ್ಸುರುತ್ಕೃಷ್ಟಸ್ಯಾವಕೃಷ್ಟಜಃ ॥ ೬೮ ॥**

**ಕೃತಾಂಕಃ ಸ ವಿನಿರ್ವಾಸ್ಯೋ ಹ್ಯಂಗಂ ವಾಸ್ಯ ವಿಕರ್ತಯೇತ್ ।**
**ಕೇಶೇಷು ಗೃಹ್ಣತೋ ಹಸ್ತೌ ಛೇದಯೇದವಿಚಾರಯನ್ ।**
**ಪಾದಯೋರ್ದಂಡಿಕಾಯಾಂ ತು ಗ್ರೀವಾಯಾಂ ವೃಷಣೇಷು ವಾ ॥ ೬೯ ॥**

---

೬೫. ಗುರುವಿನಿಂದ ವರ್ಜಿಸಲ್ಪಟ್ಟ ಮಾರ್ಗವನ್ನು ಯಾವನು ಲಕ್ಷಿಸದೆ ಆ ಗುರುವಿಗೆ ಬೇರೆ ಮಾರ್ಗವನ್ನೂ ಕೊಡದೆ, ಗುರುವಿಗೆ ತೊಂದರೆ ಕೊಡುವನೋ ಅಂಥವನು ಒಂದು ಗುಲಗಂಜಿ ತೂಕದಷ್ಟು ಚಿನ್ನವನ್ನು ದಂಡವಾಗಿ ಕೊಡಬೇಕು.

೬೬. ಏಕಜಾತಿಯುವ (ಶೂದ್ರ) ನು ದ್ವಿಜಾತಿಯುವರ ವಿಷಯದಲ್ಲಿ (ಬ್ರಾಹ್ಮಣ ಕ್ಷತ್ರಿಯ, ವೈಶ್ಯ,) ಯಾವ ಅವಯುವದಿಂದ ತಪ್ಪುಮಾಡುವನೋ ಅಂತಹ ಅಂಗವನ್ನು ಸ್ವಲ್ಪವೂ ವಿಚಾರವೇಮಾಡದೆ ಆ ಕೂಡಲೇ ಕತ್ತರಿಸಿಬಿಡಬೇಕು.

೬೭. ಆ ಶಿಕ್ಷಾವಿಧಿಯನ್ನು ಸ್ವಲ್ಪ ವಿವರಿಸಿ ಈಗ ಹೇಳಲಾಗುವುದು. ದ್ವಿಜಾತಿಯ ಜನರನ್ನು ಅವಮಾನಕರವಾಗಿ ದರ್ಪದಿಂದ ಆಕ್ಷೇಪಿಸಿದವನ ಎರಡು ತುಟಿಗಳನ್ನೂ ರಾಜನು ಛೇದಿಸಿಬಿಡಬೇಕು. ಉತ್ತಮಜಾತಿಯುವರೊಡನೆ ವ್ಯಭಿಚಾರ ಮಾಡಿದ್ದರೆ ಅವನ ಶಿಶ್ನವನ್ನು ಕತ್ತರಿಸಿಬಿಡಬೇಕು. ಅವರ ಮುಂದೆ ಅಪಾನವಾಯು ವನ್ನು ಘಟ್ಟಿಯಾಗಿ ಬಿಟ್ಟರೆ ಗುದವನ್ನೇ ಕತ್ತರಿಸಿಬಿಡಬೇಕು.

೬೮-೭೦. ಉತ್ತಮಜಾತಿಯ ಜನರ ಅಡಿಗೆಯ ಮನೆಗೆ ಹೀನಜಾತಿಯುವನೇ ನಾದರೂ ನುಗ್ಗಿಬಿಟ್ಟರೆ ಅವನಿಗೆ ಬರೆಹಾಕಿ ಓಡಿಸಬೇಕು. ಅಥವಾ ನುಗ್ಗಲು ಪ್ರಯತ್ನಿಸಿದ ಅಂಗವನ್ನು ಕತ್ತರಿಸಿಬಿಡಬೇಕು. ಮತ್ತು ಅವನ ಜುಟ್ಟನ್ನು ಎಡಗೈ

**ತ್ವಗ್ಭೇದಕಃ ಶತಂ ದಂಡ್ಯೋ ಲೋಹಿತಸ್ಯ ಚ ದರ್ಶಕಃ ॥ ೭೦ ॥**

**ಅಸ್ಥಿಭೇತ್ತಾ ಚ ಷಣ್ಣಿಷ್ಕಾನ್ಪ್ರಮಾಪ್ಯಶ್ಚ ಪ್ರಮಾಪಕಃ ।**
**ಅಂಗಭಂಗಕರಸ್ಯಾಂಗಂ ತದೇವಾಪಹರೇನ್ನೃಪಃ ॥ ೭೧ ॥**

**ದಂಡಪಾರುಷ್ಯ ಕೃದ್ದದ್ಯಾತ್ಸಮುತ್ಥಾನವ್ಯಯಂ ತಥಾ ।**
**ಅರ್ಧಪಾದಕರಾಃ ಕಾರ್ಯಾ ಗೋಗಜಾಶ್ವೋಷ್ಟ್ರಘಾತಕಾಃ ॥ ೭೨ ॥**

**ಪಶುಕ್ಷುದ್ರಮೃಗಾಣಾಂ ಚ ಹಿಂಸಾಯಾಂ ದ್ವಿಗುಣೋ ದಮಃ ।**
**ಪಂಚಾಶತ್ತು ಭವೇದ್ದಂಡ್ಯಸ್ತಥೈವ ಮೃಗಪಕ್ಷಿಷು ॥ ೭೩ ॥**

---

ಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ಕತ್ತಿಯಿಂದ ಅದನ್ನು ಕತ್ತರಿಸಿ ಓಡಿಸಬೇಕು. ಅವರ ಕಾಲು, ಮೊಣಕಾಲು, ಕತ್ತು, ಬೀಜಗಳ ಚರ್ಮವನ್ನು ಸುಲಿಸಬೇಕಲ್ಲದೆ ನೂರು ಹಣ ಅಪರಾಧವನ್ನೂ ಸಹ ಹಾಕಬೇಕು.

೭೧. ಮೂಳೆ ಮುರಿಯುವಂತೆ ಒಬ್ಬನನ್ನು ಮತ್ತೊಬ್ಬನು ಹೊಡೆದರೆ ಆರು ನಿಷ್ಕದಂಡವನ್ನು ವಿಧಿಸಬೇಕು. ಒಬ್ಬನನ್ನು ಮತ್ತೊಬ್ಬನು ಖೂನಿ ಮಾಡಿದರೆ ಅಂಥವನನ್ನು ಗಲ್ಲಿಗೆ ಏರಿಸಿಬಿಡಬೇಕು. ದೇಹದ ಅವಯುವವೊಂದನ್ನಾವನು ಭಂಗ ಮಾಡುವನೋ, ಹೊಡೆದವನ ಅದೇ ಅಂಗವನ್ನು ರಾಜನು ಭಂಗಪಡಿಸಿಬಿಡಬೇಕು.

೭೨. ಹಸು, ಆನೆ, ಕುದುರೆ, ಒಂಟೆ ಮುಂತಾದುವುಗಳನ್ನು ಕಾಲುಮುರಿಯು ವಂತೆ ಯಾವನಾದರೂ ದೊಣ್ಣೆಯಿಂದ ಕ್ರೂರವಾಗಿ ಹೊಡೆದುದಾದರೆ, ಅಂತಹ ಏಟು ತಿಂದ ಪ್ರಾಣಿಗೆ ನೋವು ಮಾದು ಎದ್ದು ಚೇತರಿಸಿಕೊಂಡು ತಿರುಗಾಡುವವರಿವಿಗೂ ಆಗುವ ಅದರ ಸಂರಕ್ಷಣೆಯ ಖರ್ಚನ್ನು ಹೊಡೆದವನಿಂದ ಕೊಡಿಸಬೇಕು.

೭೩. ಪಶುಗಳನ್ನೂ ಕ್ಷುದ್ರಮೃಗಗಳನ್ನೂ ಹೊಡೆದು ಹಿಂಸೆ ಮಾಡಿದರೆ ದಂಡವನ್ನು ಎರಡುಪಾಲು ಹೆಚ್ಚಾಗಿ ಕೊಡಬೇಕು. ಮೃಗಪಕ್ಷಿಗಳನ್ನು ಹೊಡೆದವನು ೫೦ ಹಣ ದಂಡವನ್ನು ಕೊಡಬೇಕು.

**ಕ್ರಿಮಿಕೀಟೇಷು ದಂಡಃ ಸ್ಯಾದ್ರಜತಸ್ಯ ತು ಮಾಷಕಂ ।**
**ತಸ್ಯಾನುರೂಪಂ ಮೂಲ್ಯಂ ಚ ಪ್ರದದ್ಯಾತ್ಸ್ವಾಮಿನೇ ತಥಾ ॥ ೭೪ ॥**

**ಸಸ್ವಾಮಿಕಾನಾಂ ಮರಕೆ ಶೇಷಾಣಾಂ ದಂಡಮೇವ ತು ।**
**ವೃಕ್ಷಂ ತು ಸಫಲಂ ಛಿತ್ವಾ ಸುವರ್ಣಂ ದಂಡಮರ್ಹತಿ ॥ ೭೫ ॥**

**ದ್ವಿಗುಣಂ ದಂಡಯೇಚ್ಚೈತ್ಯೇ ಪಥಿ ಸೀಮ್ನಿ ಜಲಾಶಯೇ ।**
**ಛೇದನಾದಫಲಸ್ಯಾಪಿ ಮಧ್ಯಮಃ ಸಾಹಸಃ ಸ್ಮೃತಃ ॥ ೭೬ ॥**

---

೭೪. ಕ್ರಿಮಿಕೀಟಗಳನ್ನು (ಇರುವೆ, ನೊಣ, ಮುಂತಾದುವು) ಹಿಂಸೆಮಾಡಿದರೆ ಒಂದು ಉದ್ದಿನ ಪ್ರಮಾಣ ಬೆಳ್ಳಿಯನ್ನು ದಂಡ ಕೊಡಬೇಕು. ಅಥವಾ ಏಟುತಿಂದ ಪ್ರಾಣಿಗಳ ಯೋಗ್ಯತಾನುಸಾರವಾಗಿ ರಾಜನು ದಂಡವನ್ನು ವಿಧಿಸಬಹುದು. ವಸೂಲಾದ ಮೊಬಲಗು ಆ ಪ್ರಾಣಿಯ ಯಜಮಾನನಿಗೆ ಸಲ್ಲತಕ್ಕದ್ದು.

೭೫. ಗೋಕಾಯಿಗಳನ್ನು (ಆಡು, ಕುರಿ, ಕೋಳಿ, ಇತ್ಯಾದಿ) ಕಟ್ಟಿಕೊಂಡಿರುವ ರೈತನನ್ನು ಪ್ರಾಣಿಗಳ ಸಹಿತವಾಗಿ ಯಾವನಾದರೂ ಹೊಡೆದುಕೊಂದರೆ ಅವನ ಆಶ್ರಯದಲ್ಲಿದ್ದ ಸಕಲ ಜನರಿಗೂ ದಂಡವನ್ನು ವಿಧಿಸಬೇಕು.

೭೬. ಫಲಬಿಡುತ್ತಿದ್ದ ಮರವನ್ನು ಫಲಸಹಿತವಾಗಿ ಕತ್ತರಿಸಿ ಹಾಕಿದರೆ ಒಂದು ಸುವರ್ಣ ದಂಡವನ್ನು ಕೊಡಬೇಕು. ವಿಸ್ತಾರವಾಗಿ ಬೆಳೆದು ಹಬ್ಬಿ ಅನೇಕರಿಗೆ ನೆರಳನ್ನು ಕೊಡಲು ಆಶ್ರಯಸ್ಥಾನವಾಗಿದ್ದ ಚೈತ್ಯ (ವೃಕ್ಷ) ವನ್ನಾರಾದರೂ ತರಿದು ಹಾಕಿದರೆ ದ್ವಿಗುಣವಾದ ದಂಡವನ್ನು (೨ ತೊಲ ಚಿನ್ನ) ಕೊಡಬೇಕು. ಚೈತ್ಯವೆಂದರೆ ದೇವಸ್ಥಾನ, ಮಸೀದಿ, ಯಜ್ಞಶಾಲೆ, ಬೌದ್ಧಾಲಯ, ಜನಗಳಿಗೆ ನೆರಳುಕೊಡುವ ವೃಕ್ಷಗಳೆಂದೂ ನಾನಾರ್ಥಗಳಿವೆ. (ಚೈತ್ಯಮಾಯಶನೇ ಬುದ್ಧೇ ಡಿಂಭೇ ಚೋದ್ದೇಶ ಪಾದಪೇ.—ಇತಿ ನಾನಾರ್ಥರತ್ನಮಾಲಾ.) ಇಂತಹ ಮರಗಳು ದಾರಿಯಲ್ಲಿ ಬೆಳೆದಿರುವವಗಳನ್ನಾದರೂ, ಕೆರೆಕೊಳಗಳ ತೀರಗಳಲ್ಲಿ ಬೆಳೆದಿರುವುವುಗಳನ್ನಾದರೂ ತರಿದರೂ ಸಹ ಶಿಕ್ಷೆಗೆ ಗುರಿಯಾಗಬೇಕು. ಇಂತಹ ಮರಗಳು ಹಣ್ಣುಬಿಡದೆ ಇದ್ದರೂ ಸಹ ಅವುಗಳನ್ನು ತರಿದುಹಾಕಿದರೆ ಮಧ್ಯಮದಂಡ (೫೦೦ ಹಣ-ಪಣ) ವನ್ನು ತೆರಬೇಕು.

ಗುಲ್ಮವಲ್ಲೀ ಲತಾನಾಂ ತು ಸುವರ್ಣಸ್ಯ ಚ ಮಾಷಕಂ ।
ವೃಥಾ ಛೇದೇ ತೃಣಸ್ಯಾಪಿ ದಂಡಃ ಕರ್ಷಾಪಣಂ ಭವೇತ್ ॥ ೭೭ ॥

ತ್ರಿಭಾಗಂ ಕೃಷ್ಣಲಾಂದಂಡ್ಯಃ ಪ್ರಾಣಿನಸ್ತಾಡನೇ ತಥಾ ।
ದೇಶಕಾಲಾನುರೂಪೇಣ ಮೂಲ್ಯಂ ರಾಮ! ದ್ರುಮಾದಿಷು ॥ ೭೮ ॥

ತತ್ಸ್ವಾಮಿನಿ ತಥಾ ದದ್ಯಾದ್ದಂಡಮುಕ್ತಂ ಚ ಪಾರ್ಥಿವೇ ।
ಯತ್ರಾತಿವರ್ತತೇ ಯುಗ್ಯಂ ವೈಗುಣ್ಯಾದ್ರಜಕಸ್ಯ ತು ॥ ೭೯ ॥

ತತ್ರ ಸ್ವಾಮೀ ಭವೇದ್ದಂಡ್ಯೋ ನಾಪ್ತಶ್ಚೇದ್ಯಾಜಕೋ ಭವೇತ್ ।
ಪ್ರಾಣಕಶ್ಚ ಭವೇದಾಪ್ತಃ ಪ್ರಾಜಕೋ ದಂಡಮರ್ಹತಿ ॥ ೮೦ ॥

---

೭೭. ಬಳ್ಳಿಗಳನ್ನಾಗಲೀ ಪೊದೆಗಳನ್ನಾಗಲೀ ತರಿದವನು ಒಂದು ಉದ್ದಿನಕಾಳು ತೂಕದಷ್ಟು ಚಿನ್ನವನ್ನು ದಂಡಕೊಡಬೇಕು. ವ್ಯರ್ಥವಾಗಿ ಹುಲ್ಲನ್ನು ಕತ್ತರಿಸಿದರೆ ಕಾರ್ಷಾಪಣ (೧ ಗುಲಗಂಜಿ) ದಂಡವನ್ನು ವಿಧಿಸಬೇಕು.

೭೮. ಮೂಕಪ್ರಾಣಿಗಳನ್ನು ಸುಮ್ಮಸುಮ್ಮನೆ ಹೊಡೆದರೆ ೩ ಗುಲಗಂಜಿ ತೂಕ ಚಿನ್ನವನ್ನು ಜುಲ್ಮಾನೆ ಹಾಕಬೇಕು. ಮರಗಳನ್ನು ತರಿದ ಸಂದರ್ಭದಲ್ಲಿ ದೇಶಕಾಲಾನುಸಾರವಾಗಿ ದಂಡವನ್ನು ವಿಧಾಯಕ ಮಾಡಬೇಕು.

೭೯. ಹೀಗೆ ವಸೂಲಾದ ಜುಲ್ಮಾನೆ ಮೊಬಲಗನ್ನು ಮಾಲಿಕನಿಗೆ ಕೊಡಿಸಿ ಬಿಡಬೇಕು. ಅಗಸನ ಕತ್ತೆಯೊಂದು ವಿನಹ ಯಾವ ವಿಧವಾದ ವಾಹನೋಪಯುಕ್ತ ಪ್ರಾಣಿಗಳನ್ನು ಹೊಡೆದರೂ, ಆ ರೀತಿ ಹೊಡೆದ ಅದರ ಯಜಮಾನನನ್ನು ಶಿಕ್ಷಿಸಬೇಕು.

೮೦. ಯಥಾರ್ಥವಾಗಿ ಹಿಂಸಿಸಲ್ಪಡುವ ಪಶುವಿನ ಯಜಮಾನನಾದ ಯಾಜಕ (ಸೋಮಯಾಜಿ) ನಿಗೆ ಈ ಶಿಕ್ಷೆಯು ಅನ್ವಯವಾಗುವುದಿಲ್ಲ. ಇದು ವೇದೋಕ್ತಧರ್ಮವು. ಇದರಲ್ಲಿ ಪ್ರಾಣಕನನ್ನು ಆಪ್ತನೆಂದೂ, ಪ್ರಾಜಕನು ದಂಡಾರ್ಹನೆಂದೂ ಹೇಳಿದ್ದಾರೆ.

**ನಾಸ್ತಿ ದಂಡಂ ಚ ತಸ್ಯಾಪಿ ತಥಾ ತ್ರಾಹೀತಿ ಜಲ್ಪತಃ ॥ ೮೧ ॥**

**ದ್ರವ್ಯಾಣಿ ಯೋ ಹರೇದ್ಯಸ್ಯ ಜಾನತೋಽಜಾನತೋಽಪಿ ವಾ ।**
**ಸ ತಸ್ಯೋತ್ಪಾದಯೇತ್ತುಷ್ಟಿಂ ರಾಜ್ಞೋ ದದ್ಯಾತ್ತತೋ ದಮಂ ॥ ೮೨ ॥**

**ಯಸ್ತು ರಜ್ಜುಂ ಘಟಂ ಕೂಪಾದ್ಧರೇದ್ಭಿಂದ್ಯಾಚ್ಚ ತಾಂ ಪ್ರಪಾಂ ।**
**ಸ ದಂಡಂ ಪ್ರಾಪ್ನುಯಾನ್ಮಾಷಂ ತಚ್ಚ ಸಂಪ್ರತಿಪಾದಯೇತ್ ॥ ೮೩ ॥**

---

೮೧. ಈ ದಂಡಾರ್ಹನೂ ತ್ರಾಹಿ ಎಂದು ಕೇಳಿಕೊಂಡರೆ ತಪ್ಪಿತಸ್ಥನಾಗುವುದಿಲ್ಲ. ವೇದದಲ್ಲಿ ಹೇಳಿರುವ ಪಶುವಿಶಸನಾದಿಗಳನ್ನು ಈ ಕಾಲದಲ್ಲಿ ಯಾರೂ (ಅನೇಕರು) ಒಡಂಬಡುವುದಿಲ್ಲವಾದರೂ ಪರಂಪರೆಯಾಗಿ ನಡೆದುಬಂದಿರುವ ಶ್ರೌತ ಕರ್ಮಗಳು ವೇದಪ್ರತಿಪಾದಿತವಾಗಿರುವದರಿಂದ ಈ ವಿಚಾರದಲ್ಲಿ ನಾವೂ ಸಹ ವೇದ ಶರಣರಾದ್ದರಿಂದ ಯಾವ ಅಭಿಪ್ರಾಯವನ್ನೂ ಬರೆಯುವುದಿಲ್ಲ.

೮೨. ಯಾವನಾದರೊಬ್ಬನು ಇನ್ನೊಬ್ಬನ ಹಣವನ್ನು ತಿಳುವಳಿಕೆಯಿಂದಲಾಗಲೀ ತಿಳುವಳಿಕೆಯಿಲ್ಲದೆಯೇ ಆಗಲಿ ತೆಗೆದುಕೊಂಡುಬಿಟ್ಟನೆಂದು ಭಾವಿಸೋಣ. ಅಂತಹ ಸಮಯದಲ್ಲಿ ರಾಜನಾದವನು ಹಣಕಳೆದುಕೊಂಡವನಿಗೆ ಅವನು ಕಳೆದುಕೊಂಡಷ್ಟು ಹಣವನ್ನು ಅವನಿಗೆ ಕೊಟ್ಟು ಅವನ ಮನಸ್ಸಮಾಧಾನಮಾಡಿ ಆ ಬಳಿಕ ಹಣ ಕದ್ದವನನ್ನು ವಿಚಾರಣೆಗೆ ಗುರಿಮಾಡಿ ಶಿಕ್ಷಿಸಬೇಕು.

೮೩. ಜನರು ನೀರು ಕುಡಿಯಲೆಂದು ಬಿಸಿಲ್ಗಾಲದಲ್ಲಿ ಯಾರಾದರೂ ಧರ್ಮಾತ್ಮರು ಮಾರ್ಗಮಧ್ಯದಲ್ಲಿ ಭಾವಿಯನ್ನು ತೋಡಿಸಿ ಅರವಟ್ಟಿಗೆಯನ್ನು ಕಟ್ಟಿಸಿ ಅಲ್ಲಿ ಸೇದುವ ಹಗ್ಗವನ್ನೂ ಒಂದು ನೀರು ಕುಡಿಯುವ ಚೆಂಬ (ಪಾತ್ರೆ) ಯನ್ನೂ ಇಟ್ಟಿರುತ್ತಾರೆ. ಯಾವನೋ ಹೊಟ್ಟೆಗಿಲ್ಲದ ಪೋಕರಿಯು ಆ ಚಂಬನ್ನೂ ಹಗ್ಗವನ್ನೂ ಕದ್ದು ಆ ಅರವಟ್ಟಿಗೆಯನ್ನೂ ನಾಶಪಡಿಸಿ ಹೋಗುವುದಾದರೆ ಆ ಅಯೋಗ್ಯನಿಗೆ ಒಂದು ಉದ್ದಿನಕಾಳು ತೂಕ ಚಿನ್ನವನ್ನು ದಂಡಹಾಕಬೇಕಲ್ಲದೆ ಕದ್ದ ಪದಾರ್ಥಗಳನ್ನೂ ಕೊಡಿಸಿಬಿಡಬೇಕು.

**ದಾನಂ ದಶಭ್ಯಃ ಕುಂಭೀಭ್ಯೋ ಹರತೋಽಭ್ಯಧಿಕಂ ಬುಧಃ ।**
**ಶೇಷೇ ಪ್ಯೇಕಾದಶಗುಣಂ ದಂಡಂ ತಸ್ಯ ಪ್ರಕಲ್ಪಯೇತ್ ॥ ೮೪ ॥**
**ಸುವರ್ಣರಜತಾದೀನಾಂ ಚೋತ್ತಮಾನಾಂ ಚ ವಾಸಸಾಂ ।**

**ಪುರುಷಾಣಾಂ ಕುಲೀನಾನಾಂ ನಾರೀಣಾಂ ಚ ವಿಶೇಷತಃ ।**
**ಮುಖ್ಯಾನಾಂ ಚೈವ ರತ್ನಾನಾಂ ಹರಣೇ ವಧಮರ್ಹತಿ ॥ ೮೫ ॥**

**ಮಹಾಪಶೂನಾಂ ಹರಣೇ ವಸ್ತ್ರಾಣಾಮೌಷಧಸ್ಯ ಚ ।**
**ಕಾಲಮಾಸಾದ್ಯ ಕಾರ್ಯಂ ಚ ರಾಜಾ ದಂಡಂ ಪ್ರಕಲ್ಪಯೇತ್ ॥ ೮೬ ॥**

**ಗೋಷು ಬ್ರಾಹ್ಮಣಸಂಸ್ಥಾಸು ಸ್ಥೂಲಕಾರ್ಯಾವಿಭೇದನೇ ।**
**ಅಶ್ವಾಪಹಾರಕಶ್ಚೈವ ಸದ್ಯಃ ಕಾರ್ಯೋಽರ್ಧಪಾದಿಕಃ ॥ ೮೭ ॥**

---

೮೪. ಯಾವನಾದರೂ ಕಳ್ಳನು ಹತ್ತು ಕೊಳಗಕ್ಕಿಂತ ಹೆಚ್ಚಾಗಿ ಧಾನ್ಯವನ್ನು ಕದ್ದುಕೊಂಡು ಹೋಗಿದ್ದ ಸಂದರ್ಭದಲ್ಲಿ ಅವನನ್ನು ಪತ್ತೆಹಚ್ಚಿ ಅವನು ಕದ್ದ ಧಾನ್ಯದ ಹನ್ನೊಂದರಷ್ಟು ಪಾಲನ್ನು ಹೆಚ್ಚಾಗಿ ದಂಡವಾಗಿ ತೆರಿಸಬೇಕು.

೮೫. ಚಿನ್ನದ ಒಡವೆಗಳು, ಬೆಳ್ಳಿ ಪಾತ್ರೆಗಳು, ಒಳ್ಳೇ ಸೀರೆ, ಮುಗುಟ ಮುಂತಾದುವುಗಳು ; ಕುಲೀನ ಪುರುಷ, ಕುಲೀನ ಸ್ತ್ರೀಯರು, ಮುಖ್ಯ ಮುಖ್ಯವಾದ ಅಮೌಲ್ಯರತ್ನಗಳೇ ಮುಂತಾದುವುಗಳನ್ನು ಅಪಹರಿಸುವ ಚೋರನನ್ನು ಹಿಡಿದು ಅವನನ್ನು ವಧೆ ಮಾಡಿಯೇಬಿಡಬೇಕು.

೮೬. ಮಹಾಪಶುಗಳನ್ನೂ, ವಸ್ತ್ರಗಳನ್ನೂ, ಔಷಧಗಳನ್ನೂ ಕದ್ದ ಕಳ್ಳನನ್ನು ಹಿಡಿದು ಮಹಾರಾಜನಾದವನು, ಆ ಕಾರ್ಯದ ಬಲಾಬಲಗಳನ್ನೂ, ಕಾಲವನ್ನೂ ನೋಡಿ ಶಿಕ್ಷೆಯನ್ನು ವಿಧಿಸಬೇಕು.

೮೭. ದನಕರುಗಳ ಕರೋಹಟ್ಟಿಯಲ್ಲೂ, ಬ್ರಾಹ್ಮಣರ ಸಭೆಗಳಲ್ಲೂ, ದೊಡ್ಡ ದೊಡ್ಡ ಕೆಲಸ ನಡೆಯುತ್ತಿರುವ ಜಾಗದಲ್ಲೂ ಸಹ ಪದಾರ್ಥಗಳನ್ನು ಕದಿಯುವವನನ್ನೂ, ಕುದುರೆಯ ಕಳ್ಳನನ್ನೂ ಹಿಡಿದು ಅರ್ಧಕಾಲು ಕತ್ತರಿಸಿಬಿಡಬೇಕು.

ಸೂತ್ರಕಾರ್ಪಾಸಕಿಲ್ವಾನಾಂ ಗೋಮಯಸ್ಯ ಗುಡಸ್ಯ ಚ ।
ದಧ್ನಃ ಕ್ಷೀರಸ್ಯ ತಕ್ರಸ್ಯ ಪಾನೀಯಸ್ಯ ಫಲಸ್ಯ ಚ ॥ ೮೮ ॥

ವೇಣುವೈದಲಭಾಂಡಾನಾಂ ಲವಣಾನಾಂ ತಥೈವ ಚ ।
ಮೃಣ್ಮಯಾನಾಂ ಚ ಸರ್ವೇಷಾಂ ಮೃದೋ ಭಸ್ಮನ ಏವ ಚ । ॥ ೮೯ ॥

ಮದ್ಯಾನಾಂ ಪಕ್ಷಿಣಾಂ ಚೈವ ತೈಲಸ್ಯ ಚ ಘೃತಸ್ಯ ಚ ।
ಮಾಂಸಸ್ಯ ಮಧುನಶ್ಚೈವ ಯಚ್ಚಾನ್ಯತ್ಪಶುಸಂಭವಂ ॥ ೯೦ ॥

ಅನ್ಯೇಷಾಮೇವಮಾದೀನಾಂ ಮತ್ಸ್ಯಾನಾಮೋದನಸ್ಯ ಚ ।
ಪಕ್ವಾನ್ನಾನಾಂ ಚ ಸರ್ವೇಷಾಂ ತನ್ಮೂಲ್ಯಾದ್ದ್ವಿಗುಣೋ ದಮಃ ॥ ೯೧ ॥

ಪುಷ್ಪೇಷು ಹರಿತೇ ಧಾನ್ಯೇ ಗುಲ್ಮವಲ್ಲೀಲತಾಸು ಚ ।
ಅಲ್ಪೇಷು ಪರಿಪೂರ್ಣೇಷು ದಂಡಃ ಸ್ಯಾತ್ಪಂಚಮಾಷಕಃ ॥ ೯೨ ॥

ಪರಿಪೂರ್ಣೇಷು ಧಾನ್ಯೇಷು ಶಾಕಮೂಲಫಲೇಷು ಚ ।
ನಿರನ್ವಯೇ ಶತಂ ದಂಡ್ಯಃ ಸಾನ್ವಯೇ ಚ ಶತಂ ದಮಃ ॥ ೯೩ ॥

---

೮೮-೯೧. ಇದರ ಕೆಳಗೆ ವಿವರಿಸಿದ ಪದಾರ್ಥಗಳನ್ನು ಕಳುವುಮಾಡಿದರೆ ಅದರ ಬೆಲೆಯ ಎರಡರಷ್ಟು ಮೊಬಲಗನ್ನು ದಂಡವಾಗಿ ತೆಗೆದುಕೊಳ್ಳಬೇಕು. ದಾರ, ಹತ್ತಿ, ಸಗಣಿ, ಬೆಲ್ಲ, ಮೊಸರು, ಹಾಲು, ಮಜ್ಜಿಗೆ, ಪಾನೀಯ, ವಸ್ತ್ರಗಳು, ಹಣ್ಣುಗಳು, ಬಿದಿರು, ಮಡಿಕೆ, ಉಪ್ಪು, ಸಕಲ ವಿಧವಾದ ಮೃಣ್ಮಯ ವಸ್ತುಗಳು ವಿಭೂತಿ, ಮದ್ಯ, ಪಕ್ಷಿಗಳು, ಎಣ್ಣೆ, ತುಪ್ಪ, ಮಾಂಸ, ಜೇನುತುಪ್ಪ, ಪಶುಜನ್ಯವಾದ ಇತರ ಪದಾರ್ಥಗಳೇ ಮುಂತಾದುವುಗಳು, ಮೀನು, ಅನ್ನ, ವಿವಿಧ ಪಕ್ವಾನ್ನಗಳು.

೯೨. ಹೂವು, ಅರಿಶಿನ, ಧಾನ್ಯಗಳು, ಬಳ್ಳಿ, ಪೊದೆ ಇವುಗಳನ್ನು ಸ್ವಲ್ಪವೇ ಕದಿಯಲಿ, ತುಂಬಾ ಕದಿಯಲಿ ಅಂಥವನಿಗೆ ಐದು ಉದ್ದಿನ ಕಾಳಿನ ತೂಕ ಚಿನ್ನವನ್ನು ದಂಡವಾಗಿ ವಿಧಿಸಬೇಕು.

೯೩. ಬೆಳೆಯು ಕುಯ್ಲಿಗೆ ಬಂದಿದ್ದ ಸಮಯದಲ್ಲೂ, ತರಕಾರಿ, ಹಣ್ಣು, ಗೆಡ್ಡೆಗಳನ್ನು ಕುಯ್ಯಬೇಕೆಂದಿರುವ ಸಮಯದಲ್ಲೂ ಅದನ್ನು ಹತ್ತಾ (ಪೂರ್ತಿ) ಕದ್ದೊಯ್ದರೂ, ಸ್ವಲ್ಪ ಭಾಗವನ್ನೇ ಕದ್ದು ಕುಯ್ದುಕೊಂಡು ಹೋದರೂ ನೂರು ಪಣದವರಿಗೆ ದಂಡವನ್ನು ವಿಧಿಸಬೇಕು.

**ಯೇನ ಯೇನ ಯಥಾಽಂಗೇನ ಸ್ತೇನೋ ನೃಷು ವಿಚೇಷ್ಟತೆ ।**
**ತತ್ತದೇವ ಹರೇದಸ್ಯ ಪ್ರತ್ಯಾದೇಶಾಯ ಪಾರ್ಥಿವಃ । ॥೯೪॥**

**ದ್ವಿಜೋಧ್ವಗಃ ಕ್ಷೀಣವೃತ್ತಿರ್ದ್ವಾವಿಕ್ಷೂದ್ವೇ ಚ ಮೂಲಕೇ ।**
**ತ್ರಪುಸೋರ್ವಾರುಕೌ ದ್ವೌದ್ವೌ ತಾವನ್ಮಾನಂ ಫಲೇಷು ಚ ॥೯೫॥**

**ತಥಾ ಚ ಸರ್ವಧಾನ್ಯಾನಾಂ ಮುಷ್ಟಿಗ್ರಾಹೇಣ ಭಾರ್ಗವ ।**
**ಶಾಕಂ ಶಾಕಪ್ರಮಾಣೇನ ಗೃಹ್ಯಮಾಣೋ ನ ದುಷ್ಯತಿ ॥೯೬॥**

**ವಾನಸ್ಪತ್ಯಂ ಮೂಲಫಲಂ ದಾರ್ವ್ಯಗ್ನ್ಯರ್ಥಂ ತಥೈವ ಚ ।**
**ತೃಣಂ ಚ ಗೋಭ್ಯೋ ದಾನಾರ್ಥಮಸ್ತೇಯಂ ಮನುರಬ್ರವೀತ್ ॥೯೭॥**

---

೯೪. ಯಾವ ಯಾವ ಅವಯವಗಳಿಂದ ಹೇಗೆ ಹೇಗೆ ಕಳ್ಳನೂ, ದುರಾಚಾರಿಯೂ ಆದವನು ಪಾಪಕರ್ಮಾದಿಗಳನ್ನು ಮಾಡುವನೋ, ಮಹಾರಾಜನಾದವನು ಗುರುತಿಗೋಸ್ಕರ ಅವನ ಆಯಾಯ ಅಂಗಗಳನ್ನೇ ಛೇದಿಸಿಬಿಡಬೇಕು.

೯೫. ಯಾವ ಕೆಲಸವೂ ಇಲ್ಲದ ನಿರುದ್ಯೋಗಿಯಾದ ಬ್ರಾಹ್ಮಣನು ಮಾರ್ಗ ಕ್ರಮಣಮಾಡುತ್ತಿರುವಾಗ ಕಬ್ಬಿನ ಗದ್ದೆಯಲ್ಲಿರುವ ಎರಡು ಕಬ್ಬಿನ ಜಲ್ಲೆಗಳನ್ನೂ, ಒಂದೆರಡು ಗೆಡ್ಡೆಗೆಣಸುಗಳನ್ನೂ, ಸಾಲುಗಿಡದಲ್ಲಿರುವ ಹಣ್ಣುಗಳನ್ನೂ ಕುಯ್ದು ತೆಗೆದುಕೊಂಡು ತಿಂದರೆ ಅಪರಾಧವೆನಿಸುವುದಿಲ್ಲ.

೯೬. ಅದೇ ಮೇರೆ ಬ್ರಾಹ್ಮಣನು ಯಾವ ಧಾನ್ಯವನ್ನಾಗಲೀ ಮುಷ್ಟಿ ಪ್ರಮಾಣದಷ್ಟು ತೆಗೆದುಕೊಂಡರೆ ದೋಷಾರ್ಹನಾಗುವುದಿಲ್ಲ. ಕಾಯಿಪಲ್ಯಗಳನ್ನೂ ಸಹ ಪ್ರಮಾಣಕ್ಕೆ ತಕ್ಕಂತೆ ಯಾರಿಗೂ ಹೇಳದೆ ಕುಯ್ದುಕೊಂಡರೂ ಅದನ್ನು ಅಪರಾಧವನ್ನಾಗಿ ಗಣಿಸಕೂಡದು.

೯೭. ಕಾಡಿನಲ್ಲಿ ಬೆಳೆದಿರುವ ಗೆಡ್ಡೆಗೆಣಸುಗಳನ್ನಾಗಲೀ, ಸಮಿತ್ಕುಶಗಳನ್ನು ಅಗ್ನಿಯಜನಕ್ಕಾಗಲೀ, ಹಸುಗಳ ಮೇವಿಗೋಸ್ಕರ ಹುಲ್ಲನ್ನಾಗಲೀ ಯಾರು ಕುಯ್ದುಕೊಂಡು ಹೋದರೂ ಅದನ್ನು ಕಳುವಿನ ಮಾಲೆಂದು ತಿಳಿಯಕೂಡದೆಂದು ಮನುಧರ್ಮಶಾಸ್ತ್ರವು ಹೇಳಿರುವುದು.

**ಅದೇವವಾಟಜಂ ಪುಷ್ಪಂ ದೇವತಾರ್ಥಂ ತಥೈವ ಚ।**
**ಆದದಾನಃ ಪರಕ್ಷೇತ್ರಾನ್ನ ದಂಡಂ ದಾತುಮರ್ಹತಿ ॥೯೮॥**

**ಶೃಂಗಿಣಂ ನಖಿನಂ ಚಾಪಿ ದಂಷ್ಟ್ರಿಣಂ ವಾ ವಧೋದ್ಯತಂ।**
**ಯೋ ಹನ್ಯಾನ್ನ ಸಪಾಪೇನ ಲಿಪ್ಯತೇ ಮನುಜಃ ಕ್ವಚಿತ್ ॥೯೯॥**

**ಗುರುಂ ವಾ ಬಾಲವೃದ್ಧೌವಾ ಬ್ರಾಹ್ಮಣಂ ವಾ ಬಹುಶ್ರುತಂ।**
**ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ॥೧೦೦॥**

**ನಾತತಾಯಿವಧೇ ದೋಷಃ ಕರ್ತುರ್ಭವತಿ ಕಶ್ಚನ।**
**ಪ್ರಕಾಶಂ ವಾಽಪ್ರಕಾಶಂ ವಾ ಮನ್ಯುಸ್ತಂ ಮನ್ಯುಮರ್ಹತಿ ॥೧೦೧॥**

---

೯೮. ದೇವಸ್ಥಾನಕ್ಕೆ ಸಂಬಂಧಪಡದ ಸ್ಥಳಗಳಲ್ಲಿ ಬಿಟ್ಟಿರುವ ಹೂವುಗಳನ್ನೂ, ಇತರರ ಹೊಲಗಳಲ್ಲಿ ಬಿಟ್ಟಿರುವ ಹೂವು, ತೂಲಸಿಗಳನ್ನೂ ದೇವರ ಪೂಜೆಗೋಸ್ಕರ ಕುಯ್ದುಕೊಂಡು ಹೋದರೆ ಅದು ಅಪರಾಧವೆನಿಸುವುದಿಲ್ಲ.

೯೯. ಯಾವ ಮನುಷ್ಯರಾದರೆ ಬಲಿಕೊಡುವುದಕ್ಕಾಗಿ ತೆಗೆದುಕೊಂಡು ಹೋಗುತ್ತಿರುವ ಕೋಣ-ಟಗರು ಮುಂತಾದ ಶೃಂಗವುಳ್ಳ ಪ್ರಾಣಿಗಳನ್ನಾಗಲೀ, ಜಿಂಕೆ ಮುಂತಾದ ನಖವುಳ್ಳ ಪ್ರಾಣಿಗಳನ್ನಾಗಲೀ ಕೊಂದುಹಾಕಿದರೆ ಅವರಿಗೆ ಯಾವ ಪಾಪವೂ ಸಂಭವಿಸುವುದಿಲ್ಲ.

೧೦೦. ಗುರುವೇ ಆಗಿರಲಿ, ಹುಡುಗನೇ ಆಗಿರಲಿ, ಮುದುಕನೇ ಆಗಿರಲಿ, ಬಹಳ ವಿದ್ಯಾವಂತನಾದ ಬ್ರಾಹ್ಮಣನೇ ಆಗಿರಲಿ, ಯಾವನು ಆತತಾಯಿಯೆಂದು ತಿಳಿದುಬರುವುದೋ ಅಂಥವನನ್ನು ವಿಚಾರಣೆಯೇ ಮಾಡದೆ ಕೊಂದುಹಾಕಿಬಿಡಬೇಕು.

೧೦೧. ಆತತಾಯಿಯನ್ನು ಯಾರೇ ಕೊಂದರೂ, ಕೊಂದುಹಾಕಿದವನಿಗೆ ಯಾವ ಪಾಪವೂ ಸಂಘಟಿಸುವುದಿಲ್ಲ. ಅಂತಹ ಆತತಾಯಿಯನ್ನು ಎಲ್ಲ ಜನರೂ ನೋಡುತ್ತಿರುವ ಸಮಯದಲ್ಲಿ ಪ್ರತ್ಯಕ್ಷವಾಗಿಯಾಗಲೀ, ರಹಸ್ಯವಾಗಿಯೇ ಆಗಲಿ ಯಾರು ಬೇಕಾದರೂ ಕೊಂದುಬಿಡಬಹುದು.

ಗೃಹಕ್ಷೇತ್ರಾಭಿಹರ್ತಾರಂ ತಥಾ ಪತ್ನ್ಯಭಿಗಾಮಿನಂ ।
ಅಗ್ನಿದಂ ಗರದಂ ಚೈವ ತಥಾ ಹಸ್ತೋದ್ಯತಾಯುಧಂ ॥ ೧೦೨ ॥

ಅಭಿಚಾರಂ ಚ ಕುರ್ವಾಣಂ ರಾಜಗಾಮಿ ಚ ಪೈಶುನಂ ।
ಏತೇ ಹಿ ಕಥಿತಾ ಲೋಕೇ ಧರ್ಮಜ್ಞೈರಾತತಾಯಿನಃ ॥ ೧೦೩ ॥

ಪರಸ್ತ್ರಿಯಂ ನ ಸಂಭಾಷೇತ್ತೀರ್ಥೇಽರಣ್ಯೇ ಗೃಹೇಽಪಿ ವಾ ।
ನದೀನಾಂ ಚೈವ ಸಂಭೇದೇ ಸಂಗ್ರಹಣಮವಾಪ್ನುಯಾತ್ ॥ ೧೦೪ ॥

ನ ಸಂಭಾಷಂ ಸಹ ಸ್ತ್ರೀಭಿಃ ಪ್ರತಿಷಿದ್ಧಂ ಸಮಾಚರೇತ್ ।
ಪ್ರತಿಷಿದ್ಧಸ್ತು ಸಂಭಾಷಃ ಸುವರ್ಣಂ ದಂಡಮರ್ಹತಿ ॥ ೧೦೫ ॥

---

೧೦೨. ಈ ರೀತಿ ವಧಾರ್ಹರಾದ ಆತತಾಯಿಗಳಾರೆಂಬುದನ್ನು ಈಗ ವಿವರಿಸಲಾಗುವುದು. ಗೃಹಕ್ಷೇತ್ರಾದಿಗಳನ್ನಪಹಾರಮಾಡುವವನು, ಪರರ ಪತ್ನಿಯರಲ್ಲಿ ವ್ಯಭಿಚಾರ ಮಾಡುವವನು, ಮನೆ ಮೆದೆ ಮುಂತಾದುವುಗಳಿಗೆ ಬೆಂಕಿಯನ್ನು ಹಾಕುವವನು, ವಿಷಕೊಟ್ಟು ಸಾಯಿಸುವವನು, ಕೈಯಲ್ಲಿ ಕತ್ತಿ ಮೊದಲಾದ ಆಯುಧವನ್ನು ಧರಿಸಿ ಮತ್ತೊಬ್ಬರನ್ನು ಖೂನಿಮಾಡುವವನು.

೧೦೩. ಮಾಟ-ಕುಶಲ ಮುಂತಾದುವನ್ನು ಮಾಡುವವನು, ರಾಜನನ್ನಾಕ್ರಮಿಸುವವನು, ಚಾಡಿಕೋರನು, ಇವರೇ ಮೊದಲಾದವರು ಆತತಾಯಿಗಳೆಂಬ ಮಹಾಪಾಪಿಷ್ಠರ ಗುಂಪಿಗೆ ಸೇರಿದವರೆಂದು ಧರ್ಮಜ್ಞರು ವಿವರಿಸಿರುವರು.

೧೦೪. ಯಾವ ಪುರುಷನೇ ಆಗಲಿ ಪರಸ್ತ್ರೀಯರನ್ನು ನದೀತೀರದಲ್ಲಾಗಲೀ, ವಿಜನವಾದ ಅರಣ್ಯದಲ್ಲಾಗಲೀ, ವಿಜನವಾದ ಗೃಹದಲ್ಲಾಗಲೀ, ಎರಡು ಪಾಲಾಗಿ ಹೋಳೆಯು ಕವಲೊಡೆಯುವ ಜಾಗದಲ್ಲಿಯಾಗಲೀ ನೋಡಿದಾಗ ಮಾತನಾಡಿಸಿದರೆ ದೋಷಭಾಗಿಯಾಗುವನು.

೧೦೫. ಹೆಂಗಸರೊಡನೆ ಮಾತನಾಡುವುದೇ ಶುದ್ಧ ತಪ್ಪು. ಇಂತಹ ನಿಷೇಧಕಾರ್ಯವನ್ನು ಮಾಡುವವನಿಗೆ ಒಂದು ಚಿನ್ನದ ನಾಣ್ಯವನ್ನು ದಂಡವಾಗಿ ವಿಧಿಸಬೇಕು.

ನೈಷ ಚಾರೇಣದಾರೇಷು ವಿಧಿರ್ನಾತ್ಮೋಪಜೀವಿಷು ।
ಸಜ್ಜಯಂತಿ ಮನುಷ್ಯೈಸ್ತೇ ನಿಗೂಢಂ ವಿಚರಂತ್ಯುತ ॥ ೧೦೬ ॥

ಕಿಂಚಿದೇವ ತು ಸಾಮ್ಯಂ ಸ್ಯಾತ್ಸಂಭಾಷೇತಾಭಿಚಾರಯನ್ ।
ಪ್ರೇಷ್ಯಾಸು ಚೈವ ಸರ್ವಾಭಿರಹಃ ಪ್ರವ್ರಜಿತಾಸು ಚ ॥ ೧೦೭ ॥

ಯೋऽಕಾಮಾಂ ದೂಷಯೇತ್ಕನ್ಯಾಂ ಸ ಸದ್ಯೋ ವಧಮರ್ಹತಿ ।
ಸಕಾಮಾಂ ದೂಷಮಾಣಸ್ತು ಪ್ರಾಪ್ಯಃ ಪ್ರಥಮಸಾಹಸಂ ॥ ೧೦೮ ॥

ಭಿಕ್ಷುಕೋऽಪ್ಯಥವಾ ನಾರೀ ಯೋऽಪಿ ಚ ಸ್ಯಾತ್ಕುಶೀಲವಃ ।
ಪ್ರವಿಶೇತ್ಪ್ರತಿಷಿದ್ಧಸ್ತು ಪ್ರಾಪ್ನುಯಾದ್ದ್ವಿಶತಂ ದಮಂ ॥ ೧೦೯ ॥

---

೧೦೬. ಹೆಂಗಸರೆಂದರೆ ಪರಸ್ತ್ರೀಯರೆಂದು ಭಾವಿಸಬೇಕು. ಯಾರು ಸ್ವದಾರ ನಿರತರಾಗಿ ಆತ್ಮೋಪಜೀವಿಗಳಾಗಿರುವರೋ ಅವರ ವಿಷಯದಲ್ಲಿ ಈ ವಿಧಿಯು ಉಕ್ತವಾಗಿಲ್ಲ. ಮತ್ತು ತಮ್ಮ ತಮ್ಮ ಸೇವಕರೊಡನೆ ಪ್ರಾಪಂಚಿಕವಾದ ಮತ್ತು ಗೃಹಕೃತ್ಯಸಂಬಂಧವಾದ ವ್ಯವಹಾರಸಂದರ್ಭಗಳಲ್ಲಿ ಇದು ಅನ್ವಯಿಸುವುದಿಲ್ಲ.

೧೦೭. ಧರ್ಮನಿಬಂಧನೆಯುಳ್ಳ ಮಾತನಾಡುವಾಗಲೂ ಇದು ಅನ್ವಯಿಸುವುದಿಲ್ಲ. ಮತ್ತೇನೆಂದರೆ ;—ಮಾತನಾಡುವಾಗ ಮನಸ್ಸಿನಲ್ಲಿ ದುರಭಿಪ್ರಾಯವನ್ನು ಅಡಗಿಸಿಕೊಂಡು ಮಾತನಾಡುವವರಿಗೂ, ಇಂತಹ ವಿಷಯಗಳನ್ನು ರಹಸ್ಯವಾಗಿ ಮಾತನಾಡುವವರಿಗೂ ಇದು ಅನ್ವಯಿಸತಕ್ಕದ್ದು.

೧೦೮. ಯಾವ ಮನುಷ್ಯನು ಅಕಾಮಳಾದ ಕನ್ಯೆಯನ್ನು ಭೋಗಿಸಲು (ದೂಷಿಸಲು) ಪ್ರಯತ್ನಮಾಡುವನೋ ಅವನು ಸದ್ಯೋವಧಾರ್ಹನೆನಿಸುವನು. ಸಕಾಮಳಾದ (ಪರಕೀಯ) ಕನ್ಯೆಯನ್ನು ದೂಷಿಸುವವನು ಪ್ರಥಮಸಾಹಸ (೨೫೦ ಹಣ) ದಂಡಕ್ಕೆ ಗುರಿಯಾಗಬೇಕು.

೧೦೯. ಹೆಂಗಸೊಬ್ಬಳೇ ಮನೆಯೊಳಗಿರುವ ಸಮಯದಲ್ಲಿ ಆಕೆಯ ಅಪ್ಪಣೆಯನ್ನು ಪಡೆಯದೆ ಒಬ್ಬ ಭಿಕ್ಷುಕನಾಗಲೀ, ಒಬ್ಬ ಸಂಗೀತಗಾರನಾಗಲೀ ಒಳಗೆ ಪ್ರವೇಶಿಸಕೂಡದು. ಹಾಗೇನಾದರೂ ಅತಿಕ್ರಮಪ್ರವೇಶ ಮಾಡಿದರೆ ೨೦೦ ಹಣ ದಂಡವನ್ನು ತೆರಬೇಕು.

ಯಶ್ಚ ಸಂಚಾರಕಸ್ತತ್ರ ಪುರುಷಃ ಸ ತಥಾ ಭವೇತ್ ।
ಾರದಾರಿಕವದ್ದಂಡ್ಯೋ ಯಶ್ಚ ಸ್ಯಾದವಕಾಶದಃ ॥ ೧೧೦ ॥

ಲಾತ್ಸಂದೂಷಯನ್ಯಸ್ತು ಪರಭಾರ್ಯಾಂನರಃ ಕ್ವಚಿತ್ ।
ವಧದಂಡೋ ಭವೇತ್ತಸ್ಯ ನಾಪರಾಧೋ ಭವೇತ್ಸ್ತ್ರಿಯಾಃ ॥ ೧೧೧ ॥

ಸಸ್ತ್ರ್ಯತೀಯಂ ಯಾ ಕನ್ಯಾ ಸ್ವಗೃಹೇ ಪ್ರತಿಪದ್ಯತೆ ।
ದಂಡ್ಯಾ ಸಾ ಭವೇದ್ರಾಜ್ಞಾ ವರಯಂತಿ ಪತಿಂ ಸ್ವಯಂ ॥ ೧೧೨ ॥

ಸ್ವದೇಶೇ ಕನ್ಯಕಾಂ ದತ್ವಾ ತಾಮಾದಾಯ ತಥಾ ವ್ರಜನ್ ।
ರದೇಶೇ ಭವೇದ್ವಧ್ಯಃ ಸ್ತ್ರೀ ಚೌರಃ ಸ ತಥಾ ಭವೇತ್ ॥ ೧೧೩ ॥

---

೧೧೦. ಆ ರೀತಿ ಅತಿಕ್ರಮಪ್ರವೇಶ ಮಾಡುವ ಮನುಷ್ಯನು ಪರದಾರಾಭಿ ಗಾಮಿಯಂತೆ ತಪ್ಪುಗಾರನಾಗುತ್ತಾನೆ. ಆ ರೀತಿ ಅವನನ್ನು ಒಳಕ್ಕೆ ಬಿಡಲು ಸಹಾಯ ಮಾಡುವವನೂ ಸಹ ತಪ್ಪುಗಾರನಾಗುತ್ತಾನೆ.

೧೧೧. ಯಾವನು ಪರಸ್ತ್ರೀಯರನ್ನು ಬಲಾತ್ಕಾರದಿಂದ ಭೋಗಿಸುವನೋ ಅವನನ್ನು ವಧೆಯೇ ಮಾಡಿಬಿಡಬೇಕು. ಇಂತಹ ಸಂದರ್ಭದಲ್ಲಿ ಹೆಂಗಸು ತಪ್ಪಿತಸ್ಥ ಳಾಗುವುದಿಲ್ಲ.

೧೧೨. ಮದುವೆಯಾಗದೆ ಇರುವ ಕನ್ಯೆಯು ಮೂರು ಮುಟ್ಟಾಗುವವರಿಗೂ ತಂದೆಯು ಮದುವೆಮಾಡದೆ ಇದ್ದರೆ ಆ ಬಳಿಕ ತಾನೇ ಸ್ವಯಂವರ ಮಾಡಿಕೊಂಡು ವಿವಾಹವಾದರೆ ಅದು ತಪ್ಪಿತವಾಗುವುದಿಲ್ಲ.

೧೧೩. ತಂದೆಯಾದವನು ತಮ್ಮೂರಿನಲ್ಲಿ ತನ್ನ ಮಗಳನ್ನು ಒಬ್ಬನಿಗೆ ಕೊಟ್ಟು ಮದುವೆಮಾಡಿದ ತರುವಾಯ, ದ್ರವ್ಯಾಶಾಪಿಶಾಚದಿಂದ ಕೂಡಿದವನಾಗಿ ಪರದೇಶಕ್ಕೆ ಹೋಗಿ ಆ ಹುಡುಗಿಯನ್ನು ಹಣ ತೆಗೆದುಕೊಂಡು ಮತ್ತೊಬ್ಬನಿಗೆ ಮದುವೆಮಾಡಿದರೆ ಅವನನ್ನು ಸ್ತ್ರೀಚೋರನೆಂಬ ಅಪರಾಧಕ್ಕೆ ಗುರಿಮಾಡಿ ವಧೆಮಾಡಿಬಿಡಬೇಕು.

**ಅದ್ರವ್ಯಾಂ ಮೃತಪತ್ನೀಂ ತು ಸಂಗೃಹ್ಣನ್ನಾಪರಾಧ್ನುತಿ ।**
**ಸಾರ್ಥಾಂ ವೈ ತಾಂ ಚ ಗೃಹ್ಣಾನೋ ದಂಡಮುತ್ತಮು ಮರ್ಹತಿ ॥ ೧೧೪ ॥**

**ಉತ್ಕೃಷ್ಟಂ ಯಾ ಭಜೇತ್ಕನ್ಯಾ ದೇಯಾ ತಸ್ಯೈವ ಸಾ ಭವೇತ್ ।**
**ಜಘನ್ಯಂ ಸೇವಮಾನಾಂ ಚ ಸಂಯುತಾಂ ವಾಸಯೇದ್ಗೃಹೇ ॥ ೧೧೫ ॥**

**ಉತ್ತಮಾಂ ಸೇವಮಾನಸ್ತು ಜಾಘನ್ಯೋ ವಧಮರ್ಹತಿ ।**
**ಜಘನ್ಯಮುತ್ತಮಾ ನಾರೀ ಸೇವಮಾನಾ ತಥೈವ ಚ ॥ ೧೧೬ ॥**

**ಭರ್ತಾರಂ ಲಂಘಯೇದ್ಯಾ ತು ಸ್ತ್ರೀ ಜ್ಞಾತಿಬಲದರ್ಪಿತಾ ।**
**ತಾಂ ಶ್ವಭಿಃ ಖಾದಯೇದ್ರಾಜಾ ಸಂಸ್ಥಾನೇ ಬಹು ಸಂಸ್ಥಿತೇ ॥ ೧೧೭ ॥**

---

೧೧೪. ಗಂಡ ಸತ್ತುಹೋಗಿ ಏನೂ ಗತಿಯಿಲ್ಲದ ಬಡವೆಯನ್ನು ಮನೆಯಲ್ಲಿಟ್ಟು ಕೊಂಡು ಅನ್ನವಸ್ತ್ರಗಳನ್ನು ಕೊಟ್ಟು ಕಾಪಾಡಿದರೆ ದೋಷವಿಲ್ಲ. ಅನುಕೂಲಸ್ಥಳಾದ ವಿಧವೆಯನ್ನು ಸ್ವಾಧೀನಮಾಡಿಕೊಂಡು ದುರ್ಮಾರ್ಗನಿರತನಾಗುವವನು ೧೦೦೦ ಹಣ ದಂಡವನ್ನು ಕೊಡಬೇಕು.

೧೧೫. ಯಾವಳಾದರೂ ಕನ್ಯೆಯು ತನಗಿಂತ ಉತ್ತಮನಾದ ವರನನ್ನು ವರಿಸಿದರೆ ಅವಳನ್ನು ಅವನಿಗೇ ಕೊಟ್ಟು ಮದುವೆಮಾಡಿಬಿಡಬೇಕು. ಹಾಗಲ್ಲದೆ ಹೀನಜಾತಿಯವನನ್ನು ಅಪೇಕ್ಷಿಸುವುದಾದರೆ ಅವಳನ್ನು ಮನೆಯಿಂದ ಹೊರಕ್ಕೆ ಹೋಗಲು ಅವಕಾಶಕೊಡದೆ ಮನೆಯಲ್ಲೇ ನಿರ್ಬಂಧದಲ್ಲಿಡಬೇಕು.

೧೧೬. ಶೂದ್ರನಾದವನು ತನಗಿಂತ ಉತ್ತಮವರ್ಣದ ಸ್ತ್ರೀಯನ್ನು ಅನುಭವಿಸಿದರೆ ಅವನು ವಧಾರ್ಹನಾಗುತ್ತಾನೆ. ಉತ್ತಮವರ್ಣದ ಸ್ತ್ರೀಯು ಅದೇ ಮೇರೆ ತನಗಿಂತ ಕೀಳುಜಾತಿಯವನನ್ನಪೇಕ್ಷಿಸುವುದೂ ವಧಾರ್ಹವಾದ ದಂಡವೆನಿಸುವುದು.

೧೧೭. ಜ್ಞಾತಿಗಳ ಬಲದಿಂದ ದರ್ಪಿತಳಾಗಿ ಯಾವ ಸ್ತ್ರೀಯು ಗಂಡನನ್ನು ಬಿಟ್ಟುಬಿಡುವಳೋ ಅವಳನ್ನು ರಾಜನು ಬಹುಜನ ಸೇರಿದ ಸಭೆಯ ಮುಂದೆ ನಾಯಿಗಳನ್ನು ಬಿಟ್ಟು ಕಚ್ಚಿಸಬೇಕು.

**ಹೃತಾಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ ।**
**ವಾಸಯೇತ್ಸ್ವೈರಿಣೀಂ ನಿತ್ಯಂ ಸವರ್ಣೇನಾಭಿದೂಷಿತಾಂ ॥ ೧೧೮ ॥**

**ಜ್ಯಾಯಸಾ ದೂಷಿತಾ ನಾರೀ ಮುಂಡನಂ ಸಮವಾಪ್ನುಯಾತ್ ।**
**ಮಾಸಂ ಚ ಮಲಿನಾ ನಿತ್ಯಂ ಸಾ ಗ್ರಾಸಾನ್ಪ್ರಾಪ್ನುಯಾದ್ದಶ ॥ ೧೧೯ ॥**

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಕ್ಷತ್ರವಿಟ್ ಶೂದ್ರಯೋನಯಃ ।**
**ವ್ರಜದಾಪ್ಯೋ ಭವೇದ್ರಾಮ ದಂಡ ಉತ್ತಮಸಾಹಸಂ ॥ ೧೨೦ ॥**

**ವೈಶ್ಯಾಗಮೇ ತು ವಿಪ್ರಸ್ಯ ಕ್ಷತ್ರಿಯಸ್ಯಾನ್ತ್ಯಜಾಗಮೇ ।**
**ಮಧ್ಯಮಂ ಪ್ರಥಮಂ ವೈಶ್ಯೋ ದಂಡ್ಯಃ ಶೂದ್ರಾಗಮೇ ಭವೇತ್ ॥ ೧೨೧ ॥**

**ಶೂದ್ರಃ ಸವರ್ಣಾಗಮನೇ ಶತಂ ದಂಡ್ಯೋ ಮಹೀಭುಜಾ ।**
**ವೈಶ್ಯಶ್ಚ ದ್ವಿಗುಣಂ ರಾಮ ಕ್ಷತ್ರಿಯಸ್ತ್ರಿಗುಣಂ ತಥಾ ॥ ೧೨೨ ॥**

---

೧೧೮. ತನ್ನ ಸರ್ವಾಧಿಕಾರವನ್ನೂ ಕಳೆದುಕೊಂಡು ಮಲಿನಳಾಗಿರುವ, ಅನ್ನದಂಡವಾಗಿ ಜೀವಿಸಿರುವ, ಸ್ವಜನರಿಂದ ಪರಿತ್ಯಕ್ತಳಾದ ವ್ಯಭಿಚಾರಿಣಿಯನ್ನು ಊರುಬಿಟ್ಟು ಓಡಿಸಿಬಿಡಬೇಕು.

೧೧೯. ಯಾವ ಹೆಂಗಸು ತನ್ನ ಅಣ್ಣನಿಂದ ದೂಷಿತಳಾಗುವಳೋ ಅಂತಹ ಪತಿವಿಹೀನಳಾದ ನಾರಿಯು ತಲೆಯನ್ನು ಬೋಳಿಸಿ, ಕೊಳೆ ಬಟ್ಟೆಯನ್ನುಡಿಸಿ, ಒಂದು ತಿಂಗಳವರಿಗೂ, ಹತ್ತುತುತ್ತು ಅನ್ನವನ್ನು ಮಾತ್ರ ಕೊಡುತ್ತಲಿರಬೇಕು.

೧೨೦. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳು, ಕ್ರಮವಾಗಿ ಕ್ಷತ್ರಿಯ, ವೈಶ್ಯ, ಶೂದ್ರ ಸ್ತ್ರೀಯರುಗಳಲ್ಲಿ ಪ್ರವೇಶಮಾಡಿದರೆ ಉತ್ತಮದಂಡ (೧ ಸಾವಿರ ಹಣ) ಕ್ಕೆ ಪಾತ್ರರಾಗುವರು.

೧೨೧. ಬ್ರಾಹ್ಮಣನು ವೈಶ್ಯಸ್ತ್ರೀಯ ಸಂಪರ್ಕದಿಂದಲೂ, ಕ್ಷತ್ರಿಯನು ಅಂತ್ಯಜ ಸ್ತ್ರೀಯ ಸಂಪರ್ಕದಿಂದಲೂ, ವೈಶ್ಯನು ಶೂದ್ರಸ್ತ್ರೀಯ ಸಂಪರ್ಕದಲ್ಲಿಯೂ ಕ್ರಮವಾಗಿ ಪ್ರಥಮದಂಡ, ಮಧ್ಯಮದಂಡಗಳನ್ನು ತೆರಬೇಕಾದ ಅಪರಾಧಕ್ಕೆ ಗುರಿಯಾದವರಾಗುತ್ತಾರೆ.

೧೨೨. ಶೂದ್ರನು ಸ್ವಜಾತಿಯ ಪರಸ್ತ್ರೀ ಸಂಪರ್ಕನಾದರೆ ನೂರು ಹಣ ದಂಡವನ್ನು ತೆರಬೇಕಾಗುತ್ತದೆ. ಇದೇ ಮೇರೆ ವೈಶ್ಯನು ದ್ವಿಗುಣದಂಡವನ್ನೂ, ಕ್ಷತ್ರಿಯನು ತ್ರಿಗುಣದಂಡವನ್ನೂ ತೆರಬೇಕಾಗುವುದು.

ಬ್ರಾಹ್ಮಣಶ್ಚ ಭವೇದ್ದಂಡ್ಯಸ್ತಥಾ ರಾಮ ಚತುರ್ಗುಣಂ।
ಗುಪ್ತಾಸ್ವೇವ ಭವೇದ್ದಂಡಮುಗುಪ್ತಾಸ್ವಪಿ ತತ್ಸ್ಮೃತಂ ॥೧೨೩॥

ಮಾತಾ ಮಾತೃಷ್ವಸಾ ಶ್ವಶ್ರೂರ್ಮಾತುಲಾನೀ ಪಿತೃಷ್ವಸಾ।
ಪಿತೃವ್ಯಸಖಿಶಿಷ್ಯಸ್ತ್ರೀ ಭಗಿನೀ ತತ್ಸಖೀ ತಥಾ ॥೧೨೪॥

ಭಾಗಿನೇಯೀ ತಥಾ ಚೈವ ರಾಜಪತ್ನೀ ತಥೈವ ಚ।
ಇತ್ಯಗಮ್ಯಾಸ್ತು ನಿರ್ದಿಷ್ಟಾಸ್ತಾಸಾಂ ತು ಗಮನೇ ನರಃ ॥೧೨೫॥

ಶಿಶ್ನಸ್ಯೋತ್ಕರ್ತನಂ ಕೃತ್ವಾ ತತಸ್ತುವಧಮರ್ಹತಿ।
ಭ್ರಾತೃಭಾರ್ಯಾಗಮೇ ಪೂರ್ವಾದ್ದಂಡಸ್ತು ವಧಮರ್ಹತಿ ॥೧೨೬॥

ಚಂಡಾಲೀಂ ವಾ ಶ್ವಪಾಕೀಂ ವಾ ಗಚ್ಛನ್ವಧಮವಾಪ್ನುಯಾತ್।
ತಿರ್ಯಗ್ಯೋನೌ ತು ಗೋವರ್ಜ್ಯಂ ಮೈಥುನಂ ಯೋ ನಿಷೇವತೇ ॥೧೨೭॥

---

೧೨೩. ಇಂತಹ ತಪ್ಪನ್ನೇ ಬ್ರಾಹ್ಮಣನು ಮಾಡಿದರೆ ನಾಲ್ಕರಷ್ಟು ದಂಡವನ್ನು ತೆರಬೇಕಾಗುವುದು. ಈ ಕೆಲಸವನ್ನು ಗುಟ್ಟಾಗಿಯೇ ಮಾಡಲಿ, ಪ್ರಕಾಶವಾಗಿಯೇ ಮಾಡಲಿ ಶಿಕ್ಷೆಯನ್ನು ಬೇರೆ ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ.

೧೨೪-೧೨೬. ವಧಾರ್ಹವಾದ ತಪ್ಪಿತಗಳನ್ನಿದರ ಕೆಳಗೆ ವಿವರಿಸಲಾಗಿದೆ:— ಇವೆಲ್ಲಾ ಅಗಮ್ಯಾಗಮನ ದೋಷಗಳೆಂದು ತಿಳಿಯಬೇಕು. ತಾಯಿ, ಚಿಕ್ಕಮ್ಮ, ದೊಡ್ಡಮ್ಮ (ಸಪತ್ನಿ ಮಾತೃ ಸಹ) ಅತ್ತೆ, ಸೋದರಮಾವನ ಹೆಂಡತಿ-ತಂದೆಯ ಅಕ್ಕ ತಂಗಿಯರು (ಸೋದರತ್ತೆ) ಚಿಕ್ಕಪ್ಪನ ಹೆಂಡತಿ, ಶಿಷ್ಯನ ಹೆಂಡತಿ, ಅಕ್ಕತಂಗಿಯರು, ಅವರ ಸಖಿಯರು, ಸೋದರ ಸೊಸೆ (ಅಕ್ಕತಂಗಿಯರ ಮಕ್ಕಳು) ರಾಜನ ಹೆಂಡತಿ, ಇಷ್ಟು ಜನರೂ ಅಗಮ್ಯಾಗಮಗಣಕ್ಕೆ ಸೇರಿದವರಾದುದರಿಂದ ಇಂತಹವರೊಡನೆ ಸಂಪರ್ಕಮಾಡಿದವನ ಶಿಶ್ನವನ್ನು ಮೊದಲು ಕತ್ತರಿಸಿಹಾಕಿದ ಬಳಿಕ ಅವನನ್ನು ಕೊಂದುಬಿಡಬೇಕು.

೧೨೭. ಹೊಲತಿ ಮಾದಗಿತ್ತಿಯರ ಕೂಡ ವಿಹರಿಸುತ್ತಿರುವವನನ್ನೂ ಸಹ ಕತ್ತುಕತ್ತರಿಸಿ ಕೊಂದುಬಿಡಬೇಕು. ತಿರ್ಯಗ್ಯೋನಿ (ನಾಯಿ, ಹಂದಿ, ಕತ್ತೆ ಇತ್ಯಾದಿ) ಗಳಲ್ಲಿ ಸಂಭೋಗಮಾಡುವ ದುರಾತ್ಮನನ್ನು ಒಂದು ಚಿನ್ನದ ಹಣ ದಂಡಕ್ಕೆ ಗುರಿಮಾಡಬೇಕು.

**ಸ ಪಣಂ ಪ್ರಾಪ್ನುಯಾದ್ದಂಡಂ ತಸ್ಯಾಶ್ಚ ಯವಸೋದಕಂ ।**
**ಸುವರ್ಣಂ ಚ ಭವೇದ್ದಂಡ್ಯೋ ಗಾಂ ವ್ರಜನ್ಮನುಜೋತ್ತಮ ॥ ೧೨೮ ॥**

**ವೇಶ್ಯಾಗಾಮೀ ಭವೇದ್ದಂಡ್ಯೋ ವೇಶ್ಯಾಶುಲ್ಕಸಮಂ ಪಣಂ ।**
**ಗೃಹೀತ್ವಾ ವೇತನಂ ವೇಶ್ಯಾ ಲೋಭಾದನ್ಯತ್ರ ಗಚ್ಛತಿ ॥ ೧೨೯ ॥**

**ವೇತನಂ ದ್ವಿಗುಣಂ ದದ್ಯಾದ್ದಂಡಂ ಚ ತ್ರಿಗುಣಂ ತಥಾ ।**
**ಅನ್ಯಮುದ್ದಿಶ್ಯ ವೇಶ್ಯಾಂ ಯೋ ನಯೇದನ್ಯಸ್ಯ ಕಾರಣಾತ್ ॥ ೧೩೦ ॥**

**ತಸ್ಯ ದಂಡಂ ಭವೇದ್ರಾಮ ಸುವರ್ಣಸ್ಯ ಚ ಮಾಷಕಂ ।**
**ನೀತ್ವಾ ಭೋಗಂ ನ ಯೋ ದದ್ಯಾದ್ದಾಪ್ಯೋ ದ್ವಿಗುಣವೇತನಂ ॥ ೧೩೧ ॥**

---

೧೨೮. ಅವನಿಗೆ ಆಹಾರಾರ್ಥವಾಗಿ ಹುಲ್ಲುಕೊಟ್ಟು ತಿನ್ನಿಸಬೇಕು. ಕಲಗಚ್ಚು ಕುಡಿಸಬೇಕು. ದನ (ಹಸು) ದೊಡನೆ ಸಂಭೋಗಮಾಡಿದರೆ ಸುವರ್ಣದಂಡವನ್ನು ವಿಧಿಸುವುದಲ್ಲದೆ ಯವಸೋದಕವನ್ನು ಸೇವನೆ ಮಾಡಿಸಬೇಕು.

೧೨೯. ಸೂಳೆಯರೊಡನೆ ಸಂಭೋಗಮಾಡುವವನು ಆ ವೇಶ್ಯೆಗೆ ಕೊಟ್ಟ ಶುಲ್ಕಕ್ಕೆ ತಕ್ಕಷ್ಟು ರಾಜದಂಡವನ್ನು ತೆರಬೇಕು. ಒಬ್ಬ ಮಿಂಡನ ಬಳಿ ಹಣವನ್ನು ಪಡೆದು ಅವನೊಡನೆ ಸಂಭೋಗಮಾಡದೆ ಅವನಿಗೆ ಮೋಸಮಾಡಿ ದ್ರವ್ಯಾಶೆಯೊಡನೆ ಕೂಡಿ ಮತ್ತೊಬ್ಬ ಮಿಂಡನನ್ನಾವಳು ಬೆರೆಯುವಳೋ ಅಂತಹ ದುರಾಚಾರಿಣಿಯಾದ ಸೂಳೆಯು ಮೊದಲು ಹಣ ಪಡೆದವನ ಹಣಕ್ಕೆ ಎರಡರಷ್ಟು ನಷ್ಟವನ್ನೂ ರಾಜ ದಂಡವನ್ನೂ ಕೊಡಬೇಕು.

೧೩೦. ರಾಜದಂಡವನ್ನು ಅವಳಿಗೆ ಮೂರರಷ್ಟು ವಿಧಿಸಬೇಕು. ಯಾವನು ಬೇರೆಯೊಬ್ಬನಿಗೋಸ್ಕರ ಒಬ್ಬಳು ಅಭಿಸಾರಿಕೆಯನ್ನು ಗೊತ್ತುಮಾಡಿ ಸಂಕೇತ ಸ್ಥಳಕ್ಕೆ ಕರೆದೊಯ್ಯುವನೋ, ಅಂತಹ ತಲೆಹಿಡುಕನಿಗೆ ಒಂದು ಉದ್ದಿನಕಾಳು ತೂಕ ಚಿನ್ನವನ್ನು ದಂಡವಾಗಿ ವಿಧಿಸಬೇಕು.

೧೩೧. ಆ ತಲೆಹಿಡುಕನು ಆ ರೀತಿ ಬೇರೆ ವಿಟನಿಗೋಸ್ಕರ ಕರೆದುಕೊಂಡು ಹೋದ ಆ ಜಾರಸ್ತ್ರೀಯನ್ನು ಅವನೊಡನೆ ಸಂಭೋಗಮಾಡಿಸದೆ ಮೋಸಮಾಡಿದರೆ ಎರಡು ಉದ್ದಿನಕಾಳು ಚಿನ್ನದ ದಂಡವನ್ನು ತೆರಬೇಕು.

**ರಾಜ್ಞಾ ಚ ದ್ವಿಗುಣಂ ದಂಡ್ಯಸ್ತಥಾ ಧರ್ಮೋ ನ ಹೀಯತೇ ।**
**ಬಹೂನಾಂ ವ್ರಜತಾಮೇಕಾಂ ಸರ್ವೇ ತದ್ದ್ವಿಗುಣಂ ದಮಂ ॥ ೧೩೨ ॥**

**ಸರ್ವೇ ಪೃಥಕ್ಪೃಥಗ್ರಾಮ್ಯ ದಂಡಂ ಚ ದ್ವಿಗುಣಂ ಪಣಾತ್ ।**
**ನ ಮಾತಾ ನಪಿತಾ ನ ಸ್ತ್ರೀ ಋತ್ವಿಗ್ಯಾಜ್ಯಸ್ಯ ಸೂನವಃ ॥ ೧೩೩ ॥**

**ಅನ್ಯೋನ್ಯಾಃ ಪತಿತಾಸ್ತ್ಯಾಜ್ಯಾಸ್ತ್ಯಾಗೇ ದಂಡ್ಯಃ ಶತಾನಿ ಷಟ್ ।**
**ಪತಿತಾ ಗುರವಸ್ತ್ಯಾಜ್ಯಾ ನ ತು ಮಾತಾ ಕದಾಚನ ॥ ೧೩೪ ॥**

**ಗರ್ಭಧಾರಣಪೋಷಾಭ್ಯಾಂ ತೇನ ಮಾತಾ ಗರೀಯಸೀ ।**
**ಸಂದಂಶಹೀನೌ ಕರ್ತವ್ಯೌ ಕೂಟಾಕ್ಷೋಪಾಧಿದೇವಿನೌ ॥ ೧೩೫ ॥**

---

೧೩೨. ಇಂತಹ ಜನರನ್ನು ಹಿಡಿದು ರಾಜನು ಮೂರರಷ್ಟು ದಂಡವನ್ನು ವಿಧಿಸಬೇಕು. ಒಬ್ಬಳೇ ಹೆಂಗಸು ಮಿತಿಯೇ ಇಲ್ಲದೆ ಅನೇಕ ಮಂದಿ ವಿಟರ ಬಳಿಗೆ ಹೋಗುತ್ತಿದ್ದರೆ ಅಂತಹವಳಿಗೆ ಸಾಮಾನ್ಯ ವ್ಯಭಿಚಾರಿಗಳಿಗಿಂತ ಎರಡರಷ್ಟು ಜುಲ್ಮಾನೆ ವಿಧಿಸಬೇಕು.

೧೩೩. ಮತ್ತು ಅವಳ ಹತ್ತಿರಕ್ಕೆ ಹೋಗುವವರೆಲ್ಲರಿಗೂ ಬೇರೆಬೇರೆಯಾಗಿ ಎರಡರಷ್ಟು ಹಣವನ್ನು ದಂಡವಾಗಿ ವಿಧಿಸಬೇಕು. ತಾಯಿಯೇ ಆಗಿರಲಿ, ತಂದೆಯೇ ಆಗಿರಲಿ, ಬೇರೆ ಹೆಂಗಸಾಗಲೀ, ಋತ್ವಿಕ್ಕುಗಳೇ ಆಗಿರಲೀ, ಪುರೋಹಿತರಾಗಿರಲಿ, ಅವರ ಮಕ್ಕಳೇ ಆಗಲಿ, ಯಾರೇ ಆಗಲಿ, ದುರ್ವ್ಯಾಪಾರಮಾಡಿದರೆಂದರೆ ತ್ಯಾಜ್ಯ ರಾಗುವರು.

೧೩೪. ಅಂತಹ ತ್ಯಾಜ್ಯರು ಆರುನೂರು ಹಣವನ್ನು ದಂಡಕೊಡಬೇಕು. ಗುರುಗಳೇ ಆಗಲಿ, ಪತಿತರಾದರೆಂಬ ಮೇಲೆ ಅವರನ್ನು ನಿರ್ದಾಕ್ಷಿಣ್ಯವಾಗಿ ತ್ಯಾಗಮಾಡಿ ಬಿಡಲೇಬೇಕು. ಆದರೆ ಅವಳೆಂತಹವಳೇ ಆಗಿರಲಿ ತಾಯಿಯಾದವಳನ್ನು ಮಾತ್ರ ಎಂದೆಂದಿಗೂ ತ್ಯಾಗಮಾಡಬಾರದು.

೧೩೫. ತಾಯಿಯಾದವಳು ತನ್ನ ಗರ್ಭದಲ್ಲಿ ಮುಚ್ಚಿಟ್ಟುಕೊಂಡು ಪೋಷಣೆ ಮಾಡಿ ಮಕ್ಕಳನ್ನು ಭೂಲೋಕಕ್ಕೆ ತರುವುದರಿಂದ ಅವರು (ಮಕ್ಕಳು) ದೊಡ್ಡವರಾದ ಮೇಲೆ ಅಂತಹ ಪೋಷ್ಯವಸ್ತುವನ್ನು ಕೈಬಿಡಬಾರದು. (ಮಗನನ್ನು ಹೊಟ್ಟೆಯಲ್ಲಿ ಬಚ್ಚಿಟ್ಟುಕೊಂಡು ಕಾಪಾಡಿದಂತೆ, ಅವಳ ದೋಷಗಳನ್ನೂ ಸಹ ಮಕ್ಕಳು ತಮ್ಮ ಹೊಟ್ಟೆಯಲ್ಲಿ ಬಚ್ಚಿಟ್ಟುಕೊಂಡು ಅವಳನ್ನು ಭಕ್ತಿಯಿಂದ ಕಾಪಾಡಬೇಕೆಂಬುದೇ ಮುಖ್ಯಾರ್ಥವು.).

**ಅಧೀಯಾನಮನಧ್ಯಾಯೇ ದಂಡಃ ಕರ್ಷಾಪಣತ್ರಯಂ ।**
**ಅಧ್ಯಾಪಕಶ್ಚ ದ್ವಿಗುಣಂ ತಥಾಚಾರಸ್ಯ ಲಂಘನೇ ॥೧೩೬॥**

**ಅಂತಂ ಸಸ್ಯಭವೇ ದಂಡಃ ಸುವರ್ಣಸ್ಯ ಚ ಕೃಷ್ಣಲಂ ।**
**ಭಾರ್ಯಾ ಪುತ್ರಶ್ಚ ದಾಸಶ್ಚ ಶಿಷ್ಯೋ ಭ್ರಾತಾ ಚ ಸೋದರಃ ॥೧೩೭॥**

**ಪ್ರಾಪ್ತಾಪರಾಧಾಸ್ತೇ ದಂಡ್ಯಾ ರಜ್ವಾ ವೇಣುದಲೇನ ವಾ ।**
**ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗೇ ಕಥಂಚ ನ ॥೧೩೮॥**

**ಅತೋನ್ಯಥಾ ಯತ್ಪ್ರಹರೇತ್ಪ್ರಾಪ್ತಃ ಸ್ಯಾಚ್ಚೌರ ಕಿಲ್ಬಿಷಂ ।**
**ದ್ಯೂತಂ ಸಮಾಹ್ವಯಂ ಚೈವ ಯೋ ನಿಷಿದ್ಧಂ ಸಮಾಚರೇತ್ ॥೧೩೯॥**

---

೧೩೬. ಅನಧ್ಯಯನ ದಿವಸಗಳಲ್ಲಿ ಯಾವನು ಪಾಠ ಓದುವನೋ, ಅವನು ಮೂರು ತಾಮ್ರದ ನಾಣ್ಯ (ಕರ್ಷಾಪಣ) ಗಳ ದಂಡವನ್ನು ಕೊಡಬೇಕು. ಪೂರ್ವಾಚಾರವನ್ನು ಮೀರಿ ಅನಧ್ಯಯನ ದಿವಸದಲ್ಲಿ ಪಾಠಹೇಳುವ ಅಧ್ಯಾಪಕನು ಆರು ತಾಮ್ರದ ಬಿಲ್ಲೆ (ಮೂರಾಣೆ) ದಂಡವನ್ನು ಕೊಡಬೇಕು.

೧೩೭. ಪೈರು ಮೊಳಕೆಯಾಗಿದ್ದಾಗ ಯಾರು ಅವನ್ನು ಕಿತ್ತು ನಾಶಮಾಡುವರೋ, ಅಂಥವರು ಒಂದು ಗುಲಗಂಜಿ ತೂಕ ಚಿನ್ನವನ್ನು ದಂಡಕೊಡಬೇಕು. ಹೆಂಡತಿಯಾಗಲಿ, ಮಗನಾಗಲಿ, ಆಳೇ ಆಗಲಿ, ಶಿಷ್ಯನಾಗಲಿ, ಅಣ್ಣತಮ್ಮಂದಿರೇ ಆಗಲಿ, ಯಾರೇ ತಪ್ಪುಮಾಡಿದರೂ ಶಿಕ್ಷಾರ್ಹರಾಗುತ್ತಾರೆ.

೧೩೮. ತಪ್ಪುಮಾಡಿದ ಜನರಿಗೆ ಜುಲ್ಮಾನೆ ಅಥವಾ ಸಜಗಳನ್ನು ವಿಧಿಸದೆ ಇದ್ದ ಸಂದರ್ಭದಲ್ಲಿ ಛಡೀಶಿಕ್ಷೆಗೆ ಗುರಿಮಾಡಬೇಕು. ಹಗ್ಗದ ತುದಿಗೆ ಗಂಟುಹಾಕಿ ಆ ನೂಲುಹಗ್ಗದಿಂದಲಾಗಲಿ, ಬಿದಿರಿನ ಬೆತ್ತ (ಛಡಿ) ದಿಂದಾಗಲಿ ಬೆನ್ನುಮೇಲೆ ಹೊಡಿಯಬೇಕು. ಯಾವ ಸಂದರ್ಭದಲ್ಲಿಯೂ ತಲೆಯಮೇಲೆ ಹೊಡೆಯಬಾರದು.

೧೩೯. ಬೆನ್ನುಮೇಲೆ ಹೊಡೆಯದೆ ಇನ್ನಾವ ಅಂಗದಮೇಲೆ ಹೊಡೆದಾಗ್ಯೂ ಕದ್ದ ಕಳ್ಳನಂತೆ ತಪ್ಪಿಗೆ ಗುರಿಯಾಗಬೇಕಾಗುವುದು. ನಿಷಿದ್ಧಕರ್ಮಗಳಾದ ದ್ಯೂತಾದಿಗಳನ್ನಾಡುವವನು ಗುಟ್ಟಾಗಿಯೇ ಆಗಲಿ, ಪ್ರಕಟವಾಗಿಯೇ ಆಗಲಿ ಆಡುವುದಾದರೆ ರಾಜನು ತನ್ನ ಇಚ್ಛಾನುಸಾರವಾಗಿ ಅವನಿಗೆ ಶಿಕ್ಷೆಯನ್ನು ವಿಧಿಸಬಹುದು.

ಪ್ರಚ್ಛನ್ನಂ ವಾ ಪ್ರಕಾಶಂ ವಾ ಸ ದಂಡ್ಯಃ ಪಾರ್ಥಿವೇಚ್ಛಯಾ ।
ವಾಸಾಂಸಿ ಫಲಕೇಶ್ಲಕ್ಷ್ಣೇ ನೇನಿಜ್ಯಾದ್ರಜಕಃ ಶನೈಃ ॥ ೧೪೦ ॥

ಅತೋಽನ್ಯಥಾ ತು ಕುರ್ವೀತ ದಂಡಸ್ಸ್ಯಾದ್ರುಕ್ಮಕೃಷ್ಣಲಂ ।
ರಕ್ಷಾಂಸ್ಯಧಿಕೃತಾ ರಾಮ ಪ್ರಜೇಯಂ ಯೈರ್ವಿಲಿಸ್ಯತೇ ॥ ೧೪೧ ॥

ಕಾರ್ಯಿಕೇಭ್ಯೋಽರ್ಥಮಾದಾಯ ಹನ್ಯುಃ ಕಾರ್ಯಾಣಿ ಕಾರ್ಯಿಣಾಂ ।
ತೇಷಾಂ ಸರ್ವಸ್ವಮಾದಾಯ ರಾಜಾ ಕುರ್ಯಾತ್ಪ್ರವಾಸನಂ ॥ ೧೪೨ ॥

ಯೇ ನಿಯುಕ್ತಾಃ ಸ್ವಕಾರ್ಯೇಷು ಹನ್ಯುಃ ಕಾರ್ಯಾಣಿ ಕಾರ್ಯಿಣಾಂ ।
ನಿರ್ಘೃಣಾಃ ಕ್ರೂರಮನಸಃ ಸರ್ವಕಾರ್ಯೋಪರೋಧಿನಃ ॥ ೧೪೩ ॥

---

೧೪೦. ಒಗೆಯುವುದಕ್ಕೆ ಹಾಕಿದ ಬಟ್ಟೆಗಳನ್ನೂ, ತೊಳೆಯುವುದಕ್ಕೆ ಕೊಟ್ಟ ಮಣೆಗಳನ್ನೂ ಕದಿಯುವ ಅಥವಾ ವಿರೂಪಮಾಡುವ ಅಗಸನು ಒಂದು ಗುಲಗಂಜಿ ತೂಕದಷ್ಟು ಚಿನ್ನವನ್ನು ದಂಡಕೊಡಬೇಕು.

೧೪೧. ಯಾವನಾದರೊಬ್ಬ ನಿಜಗಾರನೆನಿಸಿದ ಮನುಷ್ಯನು (ಕಂಟ್ರಾಕ್ಟರನು) ಯಾವುದಾದರೊಂದು ಕೆಲಸಮಾಡಿಕೊಡುವಂತೆ ಒಪ್ಪಿ ಮುಂಗಡವಾಗಿ (ಅಡ್ವಾನ್ಸ್) ಹಣಪಡೆದು ಒಪ್ಪಿಕೊಂಡ ಕೆಲಸವನ್ನು ಸಕಾಲದಲ್ಲಿ ಮಾಡಿಕೊಡದೆ ಯಜಮಾನನಿಗೆ ತೊಂದರೆಮಾಡಿ ಕಾರ್ಯವಿಘ್ನಮಾಡುವನೋ ಅವನ ಸರ್ವಸ್ವವನ್ನೂ ತೆಗೆದು (ಕಿತ್ತು) ಕೊಂಡು ದೇಶವನ್ನು ಬಿಟ್ಟು ಓಡಿಸಬೇಕು.

೧೪೨-೧೪೩. ಮನೆ ಕಟ್ಟಿಸಿ ಕೊಡುತ್ತೇನೆಂದಾಗಲೀ, ಜಮೀನು ಕೊಡಿಸುತ್ತೇನೆಂದಾಗಲಿ, ನಂಬಿಕೆ ಹೇಳಿ ಹಣವನ್ನು ಮುಂಗಡವಾಗಿ ಪಡೆದು ಹಣಕೊಟ್ಟವರ ಕೆಲಸವನ್ನು ಮಾಡಿಕೊಡದೆ ಆ ಹಣದಿಂದ ತನ್ನ ಕಾರ್ಯವನ್ನು ಸಾಧಿಸಿಕೊಂಡು ಯಜಮಾನನ ಕಾರ್ಯವನ್ನು ಹಾಳುಮಾಡುವ ನಿಷ್ಕರುಣಿಗಳಾದ ಕಠಿನಮನಸ್ಕರನ್ನೂ ಮೇಲೆ ಹೇಳಿದ ಶಿಕ್ಷೆಗೆ ಗುರಿಪಡಿಸಬೇಕು.

**ಧನೋಷ್ಮಣಾ ಪಚ್ಯಮಾನಾಂ ಸ್ತಾನ್ನಿಃ ಸ್ವಾನ್ಕಾರಯೇನ್ನೃಪಃ ।**
**ಕೂಟಶಾಸನಕರ್ತ್ರ್ವಾಂಶ್ಚ ಪ್ರಕೃತೀನಾಂ ಚ ದೂಷಕಾನ್ ॥ ೧೪೪ ॥**

**ಸ್ತ್ರೀಬಾಲಬ್ರಾಹ್ಮಣಘ್ನಾಂ ಶ್ಚ ವಧ್ಯಾಂ ಶ್ಚಾಸೇವಿನಸ್ತಥಾ ।**
**ಅಮಾತ್ಯಃ ಪ್ರಾಡ್ವಿವಾಕೋವಾ ಯಃ ಕುರ್ಯಾತ್ಕಾರ್ಯಮನ್ಯಥಾ ॥ ೧೪೫ ॥**

**ತಸ್ಯಸರ್ವಸ್ವಮಾದಾಯ ತಂ ರಾಜಾ ವಿಪ್ರವಾಸಯೇತ್ ।**
**ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ॥ ೧೪೬ ॥**

---

೧೪೪. ಧನಮದದಿಂದ ಕುದಿಯುತ್ತಾ ಕಣ್ಣೇಕಾಣದೆ ಕೊಬ್ಬಿ ಕುಣಿಯುತ್ತಿರುವ ಧನಮದಾಂಧರ ಹಣವನ್ನೆಲ್ಲಾ ರಾಜನು ಕಿತ್ತುಕೊಂಡು ಅವರನ್ನು ದರಿದ್ರರನ್ನಾಗಿ ಮಾಡಿಬಿಡಬೇಕು. (ಏಕೆಂದರೆ ಅಂಥವರಿಂದ ಅನರ್ಥಪ್ರಸಂಗಗಳು ಸಂಭವಿಸುವುದು ಸಿದ್ಧ.)

೧೪೫-೧೪೬. ಶಾಸನ ಸಭೆಗಳಲ್ಲಿ ಕೂಟಶಾಸನ (ದೋಷಪೂರಿತ ಶಾಸನ ಅಥವಾ ಧರ್ಮಶಾಸ್ತ್ರ ವಿರುದ್ಧವಾದ ಶಾಸನ) ಗಳನ್ನು ಮಾಡುವ ಮಂತ್ರಿಗಳನ್ನು ಅಥವಾ ಶಾಸನಸಭಾಸದಸ್ಯರನ್ನೂ, ಪ್ರಕೃತಿದೂಷಕರನ್ನೂ, ಸ್ತ್ರೀ, ಬಾಲ, ಬ್ರಾಹ್ಮಣಾದಿಗಳನ್ನು ಕೊಂದವರನ್ನೂ ವಧಾರ್ಹರಾದ ಜನರನ್ನೂ ಸಹ ಶಿಕ್ಷಿಸದೆ ಆ ಕಾರ್ಯವನ್ನು ಅನ್ಯಥಾಮಾಡಲು ಪ್ರಯತ್ನಪಡುವ ಅಧಿಕಾರಿಯು ಅಮಾತ್ಯನೇ ಆಗಿರಲೀ ನ್ಯಾಯಾಧ್ಯಕ್ಷ(ಹೈಕೋರ್ಟ್ ಜಡ್ಜಿ) ನೇ ಆಗಿರಲಿ, ಅವನು ಮಾಡಿದ ಅಕಾರ್ಯ ಪ್ರವರ್ತನೆಯನ್ನು ಕಂಡುಹಿಡಿದ ಬಳಿಕ ಅವನ ಸರ್ವಸ್ವವನ್ನೂ ಕಿತ್ತುಕೊಂಡು ಮಹಾರಾಜನು ಅವನನ್ನು ರಾಜ್ಯದಿಂದ ದಾಟಿಸಿಬಿಡಬೇಕು.

ಟಿಪ್ಪಣಿ ಮತ್ತು ಅರ್ಥ ವಿಶೇಷಗಳು :— ಕೂಟಶಾಸನವೆಂದರೆ ದೋಷ ಅಥವಾ ಪಾಪಪೂರಿತ ಶಾಸನವೆಂದು ಅರ್ಥವನ್ನು ಬರೆದಿದೇನೆ. ನಾನಾರ್ಥರತ್ನಮಾಲೆಯಲ್ಲಿ ಕೂಟವೆಂಬ ಪದಕ್ಕೆ ಕಪಟ, ಸುಳ್ಳುಹೇಳುವಿಕೆ, ಇಂದ್ರಜಾಲ, ಮೊದಲಾದ ಮಾಯೆಯೆಂದೂ, ಪಾಪವೆಂದೂ ನಾನಾರ್ಥಗಳನ್ನು ಹೇಳಿರುವುದರಿಂದ ದೇಶದಲ್ಲಿ ವಿಧಿಸುವ ಧರ್ಮಶಾಸನವು ನಿಷ್ಪಾಪವಾದುದಾಗಿಯೂ, ಧರ್ಮಶಾಸ್ತ್ರಸಮ್ಮತವಾಗಿಯೂ ಇರಬೇಕೆಂದು ತಾತ್ಪರ್ಯ. (೨) ಪ್ರಕೃತಿ ದೂಷಕರೆಂದರೆ ಯಾರೆಂಬುದನ್ನು ಸ್ವಲ್ಪ ವಿಸ್ತರಿಸಿ ಬರೆಯುತ್ತೇನೆ. ನಾನಾರ್ಥರತ್ನಮಾಲಾ ನಿಘಂಟಿನಲ್ಲಿ, ಪ್ರಕೃತಿಃ ಪಂಚಭೂತೇಷು ಸ್ವಭಾವೇ ಸಚಿವಾದಿಷು । ಪ್ರಧಾನೇ ಕಾರಣೇ ಗುಹ್ಯೇ ಜಂತೌ ಛಂದಸಿ

ಮಾತರಂ || ಪ್ರಕೃತಿರ್ಗುಣ ಸಾಮ್ಯೇ ಸ್ಯಾ ದಮಾತ್ಯಾದಿ ಸ್ವಭಾವಯೋಃ । ಯೋನೌ ಲಿಂಗೇ ಪೌರವರ್ಗೇ । ಎಂದು ಹೇಳಿರುತ್ತಾರೆ.

ಮತ್ತೊಂದು ಕೋಶದಲ್ಲಿ, ಪ್ರಕೃತಿರ್ಗುಣಸಾಮ್ಯೇ ಸ್ಯಾ ದಮಾತ್ಯಾದಿ ಸ್ವಭಾವಯೋಃ। ಎಂಬುದಾಗಿಯೂ; ಅಮರದಲ್ಲಿ, ಪ್ರಧಾನಂ ಪ್ರಕೃತಿಃ ಎಂದೂ, ಪ್ರಕೃತಿರ್ಯೋನಿ ಲಿಂಗೇ ಚ ಎಂಬುದಾಗಿಯೂ ಅರ್ಥ ಬರೆದಿರುತ್ತಾರೆ.

ಈ ಪದದ ಅರ್ಥವನ್ನು ಬರೆಯುವಾಗ ಬಹು ಜಾಗರೂಕತೆಯಿಂದ ಬರೆಯ ಬೇಕಾದುದು ಮುಖ್ಯ ಕರ್ತವ್ಯವಾಗಿದೆ. ಏಕೆಂದರೆ ದೇಶಹಿತಸಾಧನೆಗೆ ತಳಹದಿಯೆನಿಸಿದ ನ್ಯಾಯವಿಧಾಯಕಸಭೆಗೆ ಸಂಬಂಧಪಟ್ಟ ಈ ವಿಷಯ (ಪದ) ದ ಅರ್ಥವು ಪ್ರಜಾ ಸಾಮಾನ್ಯಕ್ಕೂ ತಿಳಿದಿರಬೇಕಾದುದು ಅತ್ಯವಶ್ಯಕವಾದ್ದರಿಂದಲೂ, ಈಗ ಬರೆಯುತ್ತಿರುವ ವಿಚಾರವು ಸಂಪೂರ್ಣವಾಗಿ ಧರ್ಮಶಾಸ್ತ್ರವೇ ಆಗಿರುವುದರಿಂದಲೂ, ಕೂಟ, ಪ್ರಕೃತಿಯೆಂಬ ಪದಗಳ ಅರ್ಥವನ್ನು ಆಧಾರಸಹಿತವಾಗಿ ಇಲ್ಲಿ ವಿಸ್ತಾರವಾಗಿ ಬರೆದಿದೇನೆ.

ಪ್ರಕೃತಿಯೆಂದರೆ:—ಪೃಥಿವ್ಯಪ್ತೇಜೋವಾಯ್ವಾಕಾಶಗಳೆಂಬ ಪಂಚಭೂತಗಳು. ಅಥವಾ ಮನುಷ್ಯನ ವೈಯಕ್ತಿಕ ಸ್ವಭಾವ. ಮತ್ತು ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲಗಳೆಂಬ ಏಳು ರಾಜ್ಯಾಂಗಗಳು. (ರಾಜ್ಯಾಂಗಾನಿ ಪ್ರಕೃತಯಃ ಪೌರಾಣಾಂ ಶ್ರೇಣಯೋಽಪಿ ಚ ಇತ್ಯಮರೇಽಪಿ). ಮತ್ತು ಸಾಂಖ್ಯರಿಗಭಿಮತವಾದ ಮೂಲಪ್ರಕೃತಿ, ಪ್ರಧಾನ, ಉಪಾದಾನಕಾರಣ, ಯೋನಿ, ಪ್ರಾಣಿ, ಛಂದೋಭೇದ, ತಾಯಿ ಮತ್ತು ಸತ್ವರಜಸ್ತಮೋಗುಣಗಳ ಸಮಾವಸ್ಥೆಯುಳ್ಳ ಮೂಲಪ್ರಕೃತಿ, ಪುಂಸ್ತ್ರೀನಪುಂಸಕಲಿಂಗಗಳು, ಪೌರಜನರು (ಊರಿನ ಪ್ರಜೆಗಳು), ಇವಿಷ್ಟನ್ನೂ ಪ್ರಕೃತಿಯೆಂದು ವಿವರಿಸಿದಾರೆ.

ಇಂತಹ ಪ್ರಕೃತಿಗಳಲ್ಲಿ ಯಾವುದಾದರೊಂದನ್ನು ದೂಷಣೆಮಾಡುವವನೂ ಸಹ ಅಪರಾಧವರ್ಗಕ್ಕೆ ಸೇರಬೇಕಾಗುವುದೆಂದು ಧರ್ಮವು ವಿಧಿಸಿರುವಾಗ ಶಾಸನ ಸಭಾಸದಸ್ಯರೂ, ಮಂತ್ರಿವರ್ಗದವರೂ, ಪ್ರಧಾನಾಮಾತ್ಯರೂ ಎಂತಹ ಉದಾತ್ತ ಭಾವನೆಯುಳ್ಳವ (ಧರ್ಮದೇವತಾಸ್ವರೂಪ) ರಾಗಿರಬೇಕೆಂಬುದನ್ನು ಧರ್ಮಶಾಸ್ತ್ರ ಕಾರರು ಕಂಠೋಕ್ತವಾಗಿ ಸ್ಪಷ್ಟವಾಗಿ ಹೇಳಿದಾರೆ. ಆದ್ದರಿಂದ ಕೂಟಶಾಸನಕರ್ತೃಗಳೂ ಪ್ರಕೃತಿದೂಷಕರೂ ಸಹ ಅಪರಾಧಿವರ್ಗಕ್ಕೆ ಸೇರಿದವರೆಂದು ಮುಖ್ಯವಾದ ಅಭಿಪ್ರಾಯ.

ಏತಾನ್ಸರ್ವಾನ್ಪೃಥಗ್ವಿದ್ಯಾನ್ಮಹಾಪಾತಕಿನೋ ನರಾನ್ ।
ಮಹಾಪಾತಕಿನೋ ವಧ್ಯಾ ಬ್ರಾಹ್ಮಣಂ ತು ವಿವಾಸಯೇತ್ ॥ ೧೪೭ ॥

ಕೃತಚಿಹ್ನಂ ಸ್ವಕಾದ್ದೇಶಾಚ್ಛ್ರುಣುಚಿಹ್ನಕ್ರಮಂ ತಥಾ ।
ಗುರುತಲ್ಪೇ ಭಗಃ ಕಾರ್ಯಃ ಸುರಾಪಾನೇ ಸುರಾಧ್ವಜಃ ॥ ೧೪೮ ॥

ಸ್ತೇಯೇ ತು ಶ್ವಪದಂ ವಿದ್ಯಾದ್ಬ್ರಹ್ಮಹಣ್ಯ ಶಿರಾಃ ಪುಮಾನ್ ।
ಅಸಂಭಾಷ್ಯಾ ಹ್ಯಸಂಲಾಪ್ಯಾ ಅಸಂಪಾದ್ಯಾ ವಿಶೇಷತಃ ॥ ೧೪೯ ॥

---

೧೪೭. ಬ್ರಹ್ಮಹತ್ಯೆ ಮಾಡಿದವನೂ, ಸುರಾಪಾನ ಮಾಡಿದವನೂ, ಕಳ್ಳನೂ, ಗುರುತಲ್ಪ (ಹಾಸಿಗೆ) ದ ಮೇಲೆ ಮಲಗುವವನೂ ಮಹಾಪಾತಕಿಗಳೆಂದೆನಿಸಿಕೊಳ್ಳುವವರು. ಇಂತಹ ಮಹಾಪಾಪಿಗಳೆಲ್ಲರೂ ವಧ್ಯರಾಗುತ್ತಾರೆ. ಈ ಮಹಾಪಾಪಗಳನ್ನು ಮಾಡಿದ ಬ್ರಾಹ್ಮಣನನ್ನು ಮಾತ್ರ ವಧೆ ಮಾಡದೆ ಗಡೀಪಾರು (ವಿವಾಸನೆ) ಮಾಡಿಬಿಡಬೇಕು.

೧೪೮ ೧೪೯. ಮಹಾಪಾತಕಿಯಾದ ಬ್ರಾಹ್ಮಣನನ್ನು ದೇಶಭ್ರಷ್ಟನನ್ನಾಗಿ ಮಾಡುವ ಸಮಯದಲ್ಲಿ ಹಾಗೆಯೇ ಕಳುಹಿಸಕೂಡದು. ಅವನನ್ನು ದೇಶದಿಂದ ಅಟ್ಟುವಾಗ ಅವನ ದೇಹದಮೇಲೆ (ತೋಳಿನಮೇಲೋ, ಬೆನ್ನಿನಮೇಲೋ) ಏನಾದರೊಂದು ಗುರುತು (ಚಿಹ್ನೆಯನ್ನು) ಮಾಡಿ ಓಡಿಸಬೇಕು. ಆ ಚಿಹ್ನಕ್ರಮವೇನೆಂಬುದನ್ನೀಗ ಹೇಳುತ್ತೇನೆ. ಗುರುತಲ್ಪಗಾಮಿಯ ಮೈಮೇಲೆ ಯೋನಿಚಿಹ್ನೆಯನ್ನು (ಬರೆ ಹಾಕಿ) ಮಾಡಬೇಕು. ಮದ್ಯಪಾಯಿ (ಕುಡುಕ) ಯ ಮೈಮೇಲೆ ಹೆಂಡದಂಗಡಿಯ ಗುರುತು ಮಾಡಬೇಕು. ಕಳ್ಳನ ಮೈಮೇಲೆ ನಾಯಿಯ ಕಾಲಿನ ಗುರುತನ್ನು ಮಾಡಬೇಕು. ಬ್ರಹ್ಮಹತ್ಯ ಮಾಡಿದ ಬ್ರಾಹ್ಮಣನ ಮೈಮೇಲೆ ತಲೆಯಿಲ್ಲದ ಒಂದು ಮುಂಡದ ಗುರುತನ್ನು ಮಾಡಬೇಕು. ಇಂತಹ ಮಹಾಪಾಪಿಗಳ ಸಂಗಡ ಯಾರೂ ಮಾತನಾಡಬಾರದು. ಸಲ್ಲಾಪ ಮಾಡಕೂಡದು. ಅವರೊಡನೆ ವಿಶೇಷವಾದ ಸ್ನೇಹಸಂಪಾದನೆ ಮಾಡಕೂಡದು.

ಕ್ತವ್ಯಾಶ್ಚ ತಥಾ ರಾಮ ಜ್ಞಾತಿಸಂಬಂಧಿಬಾಂಧವೈಃ ।
ುಹಾಪಾತಕಿನೋ ವಿತ್ತಮಾದಾಯ ನೃಪತಿಃ ಸ್ವಯಂ ॥ ೧೫೦ ॥

ಪ್ಸು ಪ್ರವೇಶಯೇದ್ದಂಡಂ ವರುಣಾಯೋಪಪಾದಯೇತ್ ।
ಹೋಢಂ ನ ವಿನಾ ಚೌರಂ ಘಾತಯೇದ್ಧಾರ್ಮಿಕೋ ನೃಪಃ ॥ ೧೫೧ ॥

ಹೋಢಂ ಸೋಪಕರಣಂ ಘಾತಯೇದವಿಚಾರಯರ್ ।
ಗ್ರಾಮೇಷ್ವಪಿ ಚ ಯೇ ಕೇಚಿಚ್ಚೌರಾಣಾಂ ಭಕ್ತದಾಯಕಾಃ ॥ ೧೫೨ ॥

ನಾಣ್ಡಾವಕಾಶದಾಶ್ಚೈವ ಸರ್ವಾಂಸ್ತಾನಪಿ ಘಾತಯೇತ್ ।
ರಾಷ್ಟ್ರೇಷು ರಾಷ್ಟ್ರಾಧಿಪತೇಃ ಸಮಂತಾಚ್ಚೈವ ದೂಷಕಾನ್ ॥ ೧೫೩ ॥

---

೧೫೦. ಅಂತಹ ಮಹಾಪಾಪಿಯನ್ನು ಜ್ಞಾತಿಸಂಬಂಧಿಬಾಂಧವರೆಲ್ಲರೂ ನಿರ್ದಾಕ್ಷಿಣ್ಯವಾಗಿ (ನಿಷ್ಕರುಣೆಯಿಂದ) ತ್ಯಾಗಮಾಡಿಬಿಡಬೇಕು. ಪರಶುರಾಮ! ಇಂತಹ ಪಾಪಿಯ ವಿಷಯದಲ್ಲಿ ಮಾಡಬೇಕಾದ ಶಿಕ್ಷೆಯನ್ನು ಇನ್ನೂ ಹೇಳುತ್ತೇನೆ, ಕೇಳು. ಇಂತಹವನ ಆಸ್ತಿಯನ್ನೆಲ್ಲಾ ರಾಜನು (ಸರಕಾರವು) ಕಿತ್ತುಕೊಂಡು ದರಿದ್ರನನ್ನಾಗಿ ಮಾಡಿಬಿಡಬೇಕು.

೧೫೧. ಇಷ್ಟೇ ಅಲ್ಲವಯ್ಯ, ಅವನಿಗೆ ಶಿಕ್ಷೆ! ಇವನು ಮಾಡಿದ ಈ ಪಾಪಕಾರ್ಯವನ್ನು ವರುಣನಿಗೆ ತಿಳಿಸುವುದಕ್ಕಾಗಿ ನೀರಿನಲ್ಲಿ ದಂಡವನ್ನು ಮುಳುಗಿಸಬೇಕು. ಈ ಕಳ್ಳನನ್ನು ಕುಟುಂಬಸಪರಿವಾರನಾಗಿಯೇ ಶಿಕ್ಷೆಗೆ ಗುರಿಮಾಡಬೇಕೇ ಹೊರತು ಒಬ್ಬನಿಗೇ ಶಿಕ್ಷೆಯನ್ನು ವಿಧಿಸಬಾರದು.

೧೫೨. ವಿಚಾರವೇ ಮಾಡದೆ ಇಂತಹ ಪಾಪಿಗಳನ್ನು ದೇಶಬಿಟ್ಟೋಡಿಸಿದ ಬಳಿಕ ಅವರು ಯಾವ ಹಳ್ಳಿಗೆ ಹೋದರೂ ಅವರಿಗೆ ಅಲ್ಲಿ ಯಾರೂ ಅನ್ನವನ್ನು ಕೊಡದೆ ಸಾಯಿಸಬೇಕು.

೧೫೩. ಅಡಿಗೆ ಮಾಡಿಕೊಳ್ಳುವುದಕ್ಕೆ ಪಾತ್ರೆಗಳು ಬೇಕೆಂದು ಕೇಳಿದರೆ ಅವನ್ನು ಕೊಡಕೂಡದು. ಅಂತಹವರನ್ನು ಯಾರೇ ಕಂಡರೂ ಹುಚ್ಚನನ್ನು ಕಂಡಂತೆ ರೇಗಿಸಿ ದಂಡಪ್ರಹಾರ ಮಾಡುತ್ತಲೇ ಇರಬೇಕು. (ಹೀಗೆ ಮಾಡುತ್ತಾ ಬಂದರೆ ದಿಕ್ಕಿಲ್ಲದ ಆ ಪಾಪಿಯು ಬೇಗ ಸತ್ತುಹೋಗುತ್ತಾನೆ ಎಂದು ತಾತ್ಪರ್ಯವು.) ಯಾವ ರಾಜನ ರಾಜ್ಯದಲ್ಲಿ ಈ ಶಿಕ್ಷೆಯು ವಿಧಾಯಕಮಾಡಲ್ಪಟ್ಟಿತೋ ಆ ದೇಶದ ಮೂಲೆ ಮೂಲೆಗಳಲ್ಲಿಯೂ ಈ ನೈರ್ಘೃಣ್ಯವು ಜಾರಿಯಲ್ಲಿ ಬರಬೇಕು.

**ಅಭ್ಯಾಘಾತೇಷು ಮಧ್ಯಸ್ಥಾಃ ಕ್ಷಿಪ್ರಂ ಶಾಸ್ಯಾಸ್ತು ಚೌರವತ್ ।**
**ದಸ್ಯಪ್ರಪೀಡಿತಾನಾಂ ಹಿ ಪಥಿ ಮೋಹಾದಿದರ್ಶನೆ ॥ ೧೫೪ ॥**

**ಶಕ್ತಿತೋ ನಾಭಿಧಾವಂತೋ ನಿರ್ವಾಸ್ಯಾಃ ಸಪರಿಚ್ಛದಾಃ ।**
**ರಾಜ್ಞಃ ಕೋಶಾಪಹರ್ತೃಂಶ್ಚ ಪ್ರತಿಕೂಲೇಷು ಚ ಸ್ಥಿತಾನ್ ॥ ೧೫೫ ॥**

**ಅರೀಣಾಮುಪಜಪ್ತ್ರೂಂಶ್ಚ ಘಾತಯೇದ್ವಿವಿಧೈರ್ವಧೈಃ ।**
**ಸಂಧಿಂ ಭಿತ್ವಾ ತು ಯೇ ಚೌರ್ಯಂ ರಾಜ್ಞಃ ಕುರ್ವಂತಿ ತಸ್ಕರಾಃ ॥ ೧೫೬ ॥**

---

೧೫೪. ಈ ಪಾಪಿಗಳು ತಮ್ಮ ಪಾಪಕ್ಕಾಗಿ ಪರಿತಪಿಸುತ್ತಾ ಒಂದೂರಿನಿಂದ ಇನ್ನೊಂದೂರಿಗೆ ಹೋಗುವ ದಾರಿಯಲ್ಲಿ ಯಾರಾದರೂ ಅವನ ಆಪ್ತರು ಅವನನ್ನು ಕಂಡು ಪ್ರೀತಿಯಿಂದ ಅವನನ್ನಾದರಿಸಿದರೆ ಅಥವಾ ಏನಾದರೂ ಸಹಾಯಮಾಡುವುದಾದರೆ ಅಂತಹವರ ಮೇಲೆ ಕಳ್ಳತನದ ತಪ್ಪನ್ನು ಹೊರಿಸಿ ರಾಜದಂಡಕ್ಕೆ ಗುರಿಮಾಡಬೇಕು.

೧೫೫. ಅವರು ಬೀದಿಯಲ್ಲಿ ಹೋಗುವಾಗ ಮೆಲ್ಲನೆ ನಡೆಯಕೂಡದು. ಶಕ್ತಿಯಿದ್ದಷ್ಟು ವೇಗವಾಗಿ ಓಡುತ್ತಲೇ ಹೋಗಬೇಕು. ಅವರ ಪರಿವಾರವೂ ಹಾಗೆಯೇ ಓಡಬೇಕು. ಹಾಗೆ ಓಡದೆ ಇದ್ದರೆ ರಾಜದೂತರು ಓಡಿಸಿಕೊಂಡು ಹೋಗಬೇಕು. ಯಾವನು ಸರ್ಕಾರದ ಖಜಾನೆಯನ್ನು ಲೂಟಿಮಾಡುವನೋ, ರಾಜನಿಗೆ ವಿರೋಧವಾಗಿ ಚಳುವಳಿಯನ್ನು ಹೂಡಿ ಯಾವನು ರಾಜದ್ರೋಹದಲ್ಲಾಸಕ್ತನಾಗಿರುವನೋ ಮತ್ತು ಶತ್ರುಗಳಿಗೆ ಯಾವನು ಸಹಾಯಮಾಡುವನೋ ಅವನನ್ನು ಚಿತ್ರಹಿಂಸೆಮಾಡಿ ಸಾಯಬಡಿಯಬೇಕು.

೧೫೬. ರಾಜನೊಡನೆ ಮಾಡಿಕೊಂಡ ಒಂಪ್ಪಂದವ (ಕರಾರ) ನ್ನು ಮುರಿದು ಅದಾವನು ರಾಜನಿಗೆ ವಿರೋಧನಾಗಿ ಪ್ರವರ್ತಿಸುವನೋ ಅಂತಹ ಕಳ್ಳನನ್ನು ಹಿಡಿದು ರಾಜನು ಅವನೆರಡು ಕೈಗಳನ್ನೂ ಕತ್ತರಿಸಿ, ತೀಕ್ಷ್ಣವಾದ ಶೂಲದ ಮೇಲೆ ಸಿಕ್ಕಿಸಿ ಬಿಡಬೇಕು.

ತೇಷಾಂ ಛಿತ್ವಾ ನೃಪೋ ಹಸ್ತೌ ತೀಕ್ಷ್ಣೇ ಶೂಲೇ ನಿವೇಶಯೇತ್ ।
ತಡಾಕಭೇದಕಂ ಹನ್ಯಾದಪ್ಸು ಶುದ್ಧವಧೇನ ತು ॥ ೧೫೭ ॥

ಯಸ್ತು ಪೂರ್ವಂ ನಿವೃತ್ತಸ್ಯ ತಡಾಕಸ್ಯೋದಕಂ ಹರೇತ್ ।
ಆಗಮಂ ವಾಪ್ಯಪಾಂ ಕುರ್ಯಾತ್ಸ ದಾಪ್ಯಃ ಪೂರ್ವಸಾಹಸಂ ॥ ೧೫೮ ॥

ಕೋಷ್ಠಾಗಾರಾಯುಧಾಗಾರ ದೇವತಾಗಾರಭೇದಕಾನ್ ।
ಪಾಪಾನ್ಪಾಪಸಮಾಚಾರಾನ್ ಘಾತಯೇಚ್ಛೀಘ್ರಮೇವ ತಾನ್ ॥ ೧೫೯ ॥

ಸಮುತ್ಸೃಜೇದ್ರಾಜಮಾರ್ಗೇ ಯಸ್ತ್ವಮೇಧ್ಯಮನಾಪದಿ ।
ಸಹಿ ಕಾರ್ಷಾಪಣಂ ದಂಡ್ಯಸ್ತಮಮೇಧ್ಯಂ ಚ ಶೋಧಯೇತ್ ॥ ೧೬೦ ॥

ಆಪದ್ಗತೋಽಥ ವಾ ವೃದ್ಧೋ ಗರ್ಭಿಣೀ ಬಾಲ ಏವ ವಾ ।
ಪರಿಭಾಷಣಮರ್ಹಂತಿ ತಚ್ಚ ಶೋಧ್ಯಮಿತಿ ಸ್ಥಿತಿಃ ॥ ೧೬೧ ॥

---

೧೫೭-೧೫೮. ಜನಗಳಿಗೆ ನೀರಿಗೆ ಆಶ್ರಯವಾಗಿದ್ದ ಕೆರೆಯ ಏರಿಯನ್ನಾವನು ಒಡೆದುಬಿಡುವನೋ, ಅವನನ್ನು ಆಳವಾದ ನೀರಿಗೆ ತಳ್ಳಿ ಸಾಯಿಸಿಬಿಡಬೇಕು. ಯಾವನು ಕೆರೆಯನ್ನೊಡೆದು ಅದರಲ್ಲಿದ್ದ ಅಲ್ಪಸ್ವಲ್ಪ ನೀರೂ ಬಸಿದುಹೋಗುವಂತೆ ಮಾಡಿಬಿಡುವನೋ, ಕೆರೆಗೆ ನೀರು ಬರುವ ಹಳ್ಳ (ಕಾಲುವೆ) ಗಳನ್ನಾವನು ಮುಚ್ಚಿ ಬಿಡುವನೋ ಅವನಿಗೂ ಸಹ ಮೇಲೆ ಹೇಳಿದ ಶಿಕ್ಷೆಯನ್ನೇ ಮಾಡಬೇಕು.

೧೫೯. ಧಾನ್ಯದ ಕಣಜಗಳನ್ನೂ, ಆಯುಧಶಾಲೆಯನ್ನೂ, ದೇವಸ್ಥಾನ ಗಳನ್ನೂ ಸಹ ಯಾವನು ಒಡೆದುಹಾಕುತ್ತಾನೆಯೋ ಅವನನ್ನು ಹಿಡಿದು ಬಲವಾಗಿ ಹೊಡೆದು ಹಿಂಸಿಸಬೇಕು.

೧೬೦. ಏನೂ ರೋಗವಿಲ್ಲದ ಗಟ್ಟಿಮುಟ್ಟಾಗಿದ್ದ ತುಂಡಾಂಡಿಯೊಬ್ಬನು ಜನರು ತಿರುಗಾಡುವ ದಾರಿಯಲ್ಲಿ, ಕುಳಿತು ಮಲವಿಸರ್ಜನೆ ಅಥವಾ ಮೂತ್ರವಿಸರ್ಜನೆ ಮಾಡಿಬಿಡುವುದಾದರೆ ಅವನಿಗೆ ಆರುಕಾಸು ಜುಲ್ಮಾನೆ (ಕಾರ್ಷಾಪಣ) ಹಾಕಿ; ಅವನು ವಿಸರ್ಜಿಸಿದ್ದ ಅಮೇಧ್ಯವನ್ನು ಅವನ ಕೈಯಿಂದಲೇ ತೆಗೆಯಿಸಿ ಮಾರ್ಗವನ್ನು ಸ್ವಚ್ಛ ಮಾಡಿಸಬೇಕು.

೧೬೧. ಪಾಪ! ಯಾರಾದರೂ ಖಾಯಿಲೆಯವರಾಗಲೀ, ಹಣ್ಣು ಹಣ್ಣು ಮುದುಕರಾಗಲೀ, ಗರ್ಭಿಣಿಯರಾಗಲೀ, ಮಕ್ಕಳಾಗಲಿ ತಡೆದುಕೊಳ್ಳಲು ಶಕ್ತಿಯಿಲ್ಲದೆ ದಾರಿಯಲ್ಲಿ ಹೊರಕ್ಕೆ ಹೋದರೆ ಮುನಿಸಿಪಾಲಿಟಿಯವರು ಬೀದಿ ಗುಡಿಸುವವನ ಕೈಯಿಂದ ಅದನ್ನು ತೆಗೆಯಿಸಿಬಿಡಬೇಕು.

ಪ್ರಥಮಂ ಸಾಹಸಂ ದಂಡ್ಯಃ ಏಮಶ್ಚ ಮಿಥ್ಯಾಚಿಕಿತ್ಸಕಃ ।
ಪುರುಷೇ ಮಧ್ಯಮಂ ದಂಡ್ಯಸ್ತೂತ್ತಮೇ ಚ ತಥೋತ್ತಮಂ ॥ ೧೬೨ ॥

ಸಂಕ್ರಮಧ್ವಜಯಷ್ಟೀನಾಂ ಪ್ರತಿಮಾನಾಂ ಚ ಭೇದಕಾನ್ ।
ಪ್ರತಿಕುರ್ಯುಶ್ಚ ತತ್ಸರ್ವಂ ದದ್ಯುಃ ಪಂಚಶತಾನಿಚ ॥ ೧೬೩ ॥

ಅದೂಷಿತಾನಾಂ ದ್ರವ್ಯಾಣಾಂ ದೂಷಣೇ ಭೇದನೇ ತಥಾ ।
ಮಣೀನಾಮಪಿ ಭೇದಸ್ಯ ದಂಡಃ ಪ್ರಥಮಸಾಹಸಃ ॥ ೧೬೪ ॥

ಸಮ್ಯೈಶ್ಚ ವಿಷಮಂ ಯೋ ವೈ ಕುರುತೇ ಮೂಲತೋಽಪಿ ವಾ ।
ಸಮಾಪ್ನುಯಾನ್ನರಃ ಪೂರ್ವಂ ಸಮಂ ಬಾಧಮಮೇವ ವಾ ॥ ೧೬೫ ॥

---

೧೬೨. ರೋಗಿಯಿಂದ ದುಡ್ಡು ಕಸಿದುಕೊಳ್ಳುವುದಕ್ಕಾಗಿ ವೈದ್ಯನೆಂದು ಸುಳ್ಳು ಹೇಳಿ ಯಾವನು ವೈದ್ಯಚಿಕಿತ್ಸೆಯನ್ನು ಮಾಡುವನೋ ಅವನಿಗೆ ಪ್ರಥಮಮಧ್ಯ ಮೋತ್ತಮ ದಂಡಗಳಲ್ಲಿ ಯಾವುದನ್ನಾದರೂ ವಿಧಿಸಬಹುದು.

೧೬೩. ಸಂಕ್ರಮವೆಂದರೆ, ಹೊಳೆ, ಕಂದಕ, ಬೆಟ್ಟ, ಕಾಲುವೆ ಮುಂತಾದುವು ಗಳನ್ನು ಸುಲಭವಾಗಿ ದಾಟುವುದಕ್ಕಾಗಿ ಕಟ್ಟಿರುವ ಪಾಲ ಅಥವಾ ಸೇತುವೆಗಳನ್ನೂ, ಧ್ವಜಗಳನ್ನೂ ಜನರು ವಾಸಮಾಡುವ ಗುಡಿಸಲುಗಳನ್ನೂ ಸಹ ಯಾರು ನಾಶ ಪಡಿಸುವರೋ, ವಿಗ್ರಹಗಳನ್ನಾರು ಭೇದಿಸುವರೋ, ಅಂಥವರೆಲ್ಲರನ್ನೂ ವಿಚಾರಣೆಗೆ ಗುರಿಮಾಡಿ ೫೦೦ ನಾಣ್ಯಗಳ ಅಪರಾಧ ದಂಡವನ್ನು ವಿಧಿಸಬೇಕಲ್ಲದೆ, ನಾಶಪಡಿಸಿದ ಸೇತುವೆ, ಜೋಪಡಿಗಳನ್ನು ಪುನಃ ಅವರೇ ತಮ್ಮ ಖರ್ಚಿನಿಂದ ಕಟ್ಟಿಸಿಕೊಡಬೇಕು.

೧೬೪. ಶುದ್ಧವಾದ ದ್ರವ್ಯವನ್ನಾವನು ದೂಷಿಸುವನೋ ಅಥವಾ ಭೇದಿಸಲು ಪ್ರಯತ್ನಪಡುವನೋ, ರತ್ನಗಳನ್ನಾವನು ಭೇದಿಸುವನೋ ಅವನು ಪ್ರಥಮ ದಂಡ ವನ್ನು ತೆರಲಿಕ್ಕೆ ಅರ್ಹನಾಗುತ್ತಾನೆ.

೧೬೫. ಯಾವುದಾದರೂ ಒಂದು ಪದಾರ್ಥಕ್ಕೆ ಸರಿಯಾಗಿ ಧಾರಣೆಯನ್ನು ಕಟ್ಟಿ ಅದು ಸರಿಯೆಂದು ಒಪ್ಪಿತವಾದ ಬಳಿಕ, ಅದಕ್ಕಿಂತ ಕಡಿಮೆಯಾಗಿ ವಿಷಮ ಬೆಲೆಯನ್ನು ಕೊಡುವುದು ತಪ್ಪಾಗುವುದರಿಂದ ಮೊದಲು ಮಾತನಾಡಿದಂತೆ ಬೆಲೆಯನ್ನು ಕೊಡಲೇಬೇಕು. (ಲಾಭವಾಗಲಿ ನಷ್ಟವಾಗಲಿ ಖರೀದಿ ಮಾಡಿದ ಬಳಿಕ ಬದಲಾಯಿಸಕೂಡದು).

**ಬಂಧನಾನಿ ಚ ಸರ್ವಾಣಿ ರಾಜಮಾರ್ಗೇ ನಿವೇಶಯೇತ್ ।**
**ಕ್ಲಿಶ್ಯನ್ತೋ ಯತ್ರ ದೃಶ್ಯಂತೇ ವಿಕೃತಾಃ ಪಾಪಚಾರಿಣಃ ॥ ೧೬೬ ॥**

**ಪ್ರಕಾರಸ್ಯ ತು ಭೇತ್ತಾರಂ ಪರಿಖಾನಾಂ ಚ ಭೇದಕಂ ।**
**ದ್ವಾರಾಣಾಂ ಚೈವ ಭೇತ್ತಾರಂ ಕ್ಷಿಪ್ರಂ ನಿರ್ವಾಸಯೇತ್ಪುರಾತ್ ॥ ೧೬೭ ॥**

**ಮೂಲಕರ್ಮಾಭಿಚಾರೇಷು ಕರ್ತವ್ಯೋ ದ್ವಿಗುಣೋ ದಮಃ ।**
**ಅಬೀಜವಿಕ್ರಯೀ ದೈವ ಬೀಜೋತ್ಕೃಷ್ಟಸ್ತಥೈವ ಚ ॥ ೧೬೮ ॥**

**ಮರ್ಯಾದಾಭೇದಕಶ್ಚೈವ ವಿಕೃತಂ ವಧಮಾಪ್ನುಯಾತ್ ।**
**ಸರ್ವಸಂಕರಪಾಪಿಷ್ಠಂ ಹೇಮಕಾರಂ ನರಾಧಿಪಃ ॥ ೧೬೯ ॥**

**ಅನ್ಯಾಯೇ ವರ್ತಮಾನಂ ತು ಲವಶಶ್ಛೇದಯೇಚ್ಛರೈಃ ।**
**ದ್ರವ್ಯಮಾದಾಯ ವಣಿಜಾಮನರ್ಘೇಣಾವರುಂಧತಾಂ ॥ ೧೭೦ ॥**

---

೧೬೬. ಬಂಧನಕ್ಕೊಳಗಾದ ಸರ್ವರನ್ನೂ ಎಲ್ಲರೂ ಕಾಣುವಂತೆ ರಾಜಮಾರ್ಗದಲ್ಲಿ ಬಂಧಿಸಬೇಕು. ಮತ್ತು ಶಿಕ್ಷೆಯನ್ನು ಅಲ್ಲಿಯೇ ಅವರು ಅನುಭವಿಸುವಂತೆ ಮಾಡಬೇಕು. ಪಾಪಮಾಡಿದ ಪಾಪಿಷ್ಠರು ಶಿಕ್ಷೆಯನ್ನನುಭವಿಸಲಾರದೆ ಸಂಕಟಪಡುತ್ತಾ ವಿಕೃತಾಂಗರಾಗಿ ಅಲ್ಲಿ ಎಲ್ಲರ ಕಣ್ಣಿಗೂ ಗೋಚರಿಸುತ್ತಿರುತ್ತಾರೆ.

೧೬೭. ಕೋಟೆಯನ್ನಾಗಲೀ, ಮನೆಯ ಮೇಲುಛಾವಣಿಯನ್ನಾಗಲೀ, ಕಂದಕವನ್ನಾಗಲೀ ಯಾರು ಭೇದಿಸುತ್ತಾರೆಯೋ, ಮನೆಯ ಕದಗಳನ್ನಾರು ಒಡೆದು ಹಾಕುವರೋ ಅಂತಹವರೆಲ್ಲರನ್ನೂ ಊರು ಬಿಟ್ಟು ಹೊರಕ್ಕೆ ಕಳುಹಿಸಿಬಿಡಬೇಕು.

೧೬೮-೧೬೯. ನೆಲದಲ್ಲಿ ಹುಟ್ಟುಹಾಕಿದ ಬೀಜವನ್ನು ಕಿತ್ತುಮಾರುವವನೂ, ಧರ್ಮಶಾಸ್ತ್ರಗಳಲ್ಲಿ ವಿಧಿಸಿರುವಂತೆ ನಡೆದುಕೊಳ್ಳದೆ ಅವುಗಳ ಮರ್ಯಾದೆ (ಎಲ್ಲೆ) ಯನ್ನು ಮೀರುವವನೂ ಸಹ ಸರ್ವಸಂಕರ ಪಾಪಿಷ್ಠನಾದವನ ಮತ್ತು ಹೇಮಕಾರನ ಪಾಪಕ್ಕೆ ಸಮನಾದ ಪಾಪಕ್ಕೆ ಗುರಿಯಾಗುವರಾದ್ದರಿಂದ ಅವರು ವಿಕೃತವಾದ ವಧೆಗೆ ಸಿದ್ಧರಾಗಬೇಕು.

೧೭೦. ಬೇಕಾದಷ್ಟು ಆಸ್ತಿಯಿದ್ದರೂ ಅನರ್ಘ್ಯರತ್ನಾಭರಣಗಳಿದ್ದರೂ ಯಾವ ವರ್ತಕನು ಅನ್ಯಾಯಕೆಲಸದಲ್ಲಿಯೇ ಸರ್ವದಾ ಪ್ರವರ್ತಕನಾಗಿರುವನೋ ಅವನ ದೇಹವನ್ನು ಬಾಣಗಳಿಂದ ಹೊಡೆದು ತುಂಡುತುಂಡಾಗಿ ಕತ್ತರಿಸಿಹಾಕಬೇಕು.

ರಾಜಾ ಪೃಥಕ್ಪೃಥಕ್ಕುರ್ಯಾದ್ದಂಡಮುತ್ತಮಸಾಹಸಂ ।
ದ್ರವ್ಯಾವದೂಷಕೋ ಯಶ್ಚ ಪ್ರತಿಚ್ಛಂದಕವಿಕ್ರಯೀ ॥ ೧೭೧ ॥

ಮಧ್ಯಮಂ ಪ್ರಾಪ್ನುಯಾದ್ದಂಡಂ ಕೂಟಕರ್ತಾ ತಥೋತ್ತಮಂ ।
ಶಾಸ್ತ್ರಾಣಾಂ ಯಜ್ಞತಪಸಾಂ ದೇಶಾನಾಂ ಕ್ಷೇಪಕೋ ನರಃ ॥ ೧೭೨ ॥

ದೇವತಾನಾಂ ಸತೀನಾಂ ವೈ ತಥೋತ್ತಮಂ ದಂಡಮರ್ಹತಿ ।
ಏಕಸ್ಯ ದಂಡಪಾರುಷ್ಯೇ ಬಹೂನಾಂ ದ್ವಿಗುಣೋ ದಮಃ ॥ ೧೭೩ ॥

ಕಲಹಾಪಹೃತಂ ದೇಯಂ ದಂಡಶ್ಚ ದ್ವಿಗುಣಸ್ತತಃ ।
ಮಧ್ಯಮಂ ಬ್ರಾಹ್ಮಣಂ ರಾಜಾ ವಿಷಯಾದ್ವಿಪ್ರವಾಸಯೇತ್ ॥ ೧೭೪ ॥

---

೧೭೧. ಒಬ್ಬನೇ ಅನೇಕ ತಪ್ಪುಗಳನ್ನು ಮಾಡಿದ್ದ ಸಂದರ್ಭದಲ್ಲಿ ಒಂದೊಂದು ತಪ್ಪನ್ನು ರಾಜನು ಬೇರೆಬೇರೆಯಾಗಿಯೇ ವಿಚಾರಣೆಮಾಡಿ ಅದಕ್ಕನುಗುಣವಾದ ಶಿಕ್ಷೆಗಳನ್ನು ವಿಧಿಸಬೇಕು.

೧೭೨. ಯಾವನು ದ್ರವ್ಯಾವದೂಷಕನೋ, ಮನೆಯ ಬಳಕೆಯಲ್ಲಿರುವ ಉಪಯುಕ್ತಪದಾರ್ಥಗಳನ್ನಾವನು ಕದ್ದು ಮಾರುವನೋ ಅವನು ಮಧ್ಯಮ ದಂಡಾರ್ಹನು. ಕೂಟಕಾರಿಯು ಉತ್ತಮದಂಡವನ್ನು ತೆರಲರ್ಹನಾಗುವನು.

೧೭೩. ಶಾಸ್ತ್ರಗಳನ್ನು ದೂಷಿಸುವವನು, ಯಜ್ಞ ತಪಸ್ಸುಗಳನ್ನೂ ದೂಷಿಸುವವನೂ, ದೇಶವನ್ನು ನಿಂದಿಸುವವನೂ, ಪತಿವ್ರತೆಯರನ್ನು ನಿಂದಿಸುವವನೂ ಸಹ ಉತ್ತಮದಂಡವನ್ನು ತೆರಬೇಕು.

೧೭೪. ಒಂದು ಕಠಿನವಾದ ಶಿಕ್ಷೆಗೊಳಗಾದವನು ಬಹಳ ತಪ್ಪುಗಳನ್ನು ಮಾಡಿದ್ದರೆ ದ್ವಿಗುಣವಾದ ದಮನಕ್ಕೆ ಒಳಗಾಗಬೇಕಾಗುವುದು. ಒಬ್ಬರಿಗೊಬ್ಬರಿಗೆ ವಿವಾದ ಹುಟ್ಟಿದ ಸಂದರ್ಭದಲ್ಲಿ ಅವರ ಹಣವನ್ನು ಮಧ್ಯಸ್ಥನು ಅಪಹರಿಸಿದರೆ ದ್ವಿಗುಣದಂಡವನ್ನು ಕೊಡಬೇಕು. ಇಂತಹ ಅನೇಕ ತಪ್ಪುಗಳನ್ನು ಮಾಡಿದ ಬ್ರಾಹ್ಮಣಾಪರಾಧಿಯನ್ನು ದೇಶದಿಂದ ಹೊರಕ್ಕೆ ಕಳುಹಿಸಿಬಿಡಬೇಕು.

**ಲಶುನಂ ಚ ಪಲಾಂಡುಂ ಚ ಸೂಕರಂ ಗ್ರಾಮಕುಕ್ಕುಟಂ।**
**ತಥಾ ಪಂಚನಖಂ ಸರ್ವಂ ಭಕ್ಷ್ಯಾದನ್ಯತ್ರ ಭಕ್ಷಣಂ ॥೧೫೭॥**

**ವಿವಾಸಯೇತ್ ಕ್ಷಿಪ್ರಮೇವ ಬ್ರಾಹ್ಮಣಂ ವಿಷಯಾತ್ಸ್ವಕಾತ್।**
**ಅಭಕ್ಷ್ಯ ಭಕ್ಷಣೇ ದಂಡ್ಯಃ ಶೂದ್ರೋ ಭವತಿ ಕೃಷ್ಣಲಂ ॥೧೭೬॥**

**ಬ್ರಾಹ್ಮಣಕ್ಷತ್ರಿಯವಿಶಾಂ ಚತುಸ್ತ್ರಿದ್ವಿಗುಣಂ ಹಿತಂ।**
**ಯಃ ಸಾಹಸಂ ಕಾರಯತಿ ಸ ದದ್ಯಾದ್ದ್ವಿಗುಣಂ ದಮಂ ॥೧೭೭॥**

**ಯಶ್ಚೇದಮುಕ್ತ್ವಾಹಂ ದಾತಾ ಕಾರಯೇತ್ಸ ಚತುರ್ಗುಣಂ।**
**ಸಂದಿಷ್ಟಸ್ಯಾಪ್ರದಾತಾರಂ ಸಮುದ್ರಗೃಹಭೇದಕಂ ॥೧೭೮॥**

**ಪಂಚಾಶತ್ಪಣಿಕೋ ದಂಡಸ್ತಯೋಃ ಕಾರ್ಯೋ ಮಹೀಕ್ಷಿತಾ।**
**ಅಸ್ಪೃಶ್ಯೇಷು ಶತಾರ್ಧಂತು ಮಥ್ಯೋಽಥೋ ಯೋಗಕರ್ಮಕೃತ್ ॥೧೭೯॥**

---

೧೭೫-೧೭೬. ಅಭಕ್ಷ್ಯ, ಭಕ್ಷಣವು ಶಾಸ್ತ್ರನಿಷಿದ್ಧವಾದ್ದರಿಂದ ಅವುಗಳನ್ನು ಬ್ರಾಹ್ಮಣನು ಸೇವಿಸಬಾರದು. ಅವಾವುವೆಂದರೆ ಈರುಳ್ಳಿ, ಬೆಳ್ಳುಳ್ಳಿ, ಹಂದಿ, ಕೋಳಿ, ಪಂಚನಖ -ಪ್ರಾಣಿಗಳು ತಿನ್ನಬಾರದ ವಸ್ತುಗಳನ್ನು ತಿನ್ನುವ ಬ್ರಾಹ್ಮಣನನ್ನು ದೇಶವನ್ನು ಬಿಟ್ಟು ಹೊರಕ್ಕೆ ಕಳುಹಿಸಿಬಿಡಬೇಕು. ಅಭಕ್ಷ್ಯಭಕ್ಷಣವನ್ನು ಮಾಡುವ ಶೂದ್ರನಿಗೆ ಒಂದು ಗುಲಗಂಜಿ ತೂಕ ಚಿನ್ನವನ್ನು ದಂಡವಾಗಿ ವಿಧಿಸಬೇಕು.

೧೭೭. ಬ್ರಾಹ್ಮಣ, ಕ್ಷತ್ರಿಯ, ವೈಶ್ಯಾದಿಗಳು ಈ ವಿಧವಾದ ತಪ್ಪನ್ನು ಮಾಡಿದರೆ ಇದರ ನಾಲ್ಕರಷ್ಟು, ಮೂರರಷ್ಟು, ಎರಡರಷ್ಟು ಶಿಕ್ಷೆಗೆ ಪಾತ್ರರಾಗುತ್ತಾರೆ. ಸಾಮಾನ್ಯವಾಗಿ ಈ ತಪ್ಪನ್ನು ಮಾಡೇಮಾಡಿದರೂ ಶೂದ್ರನಿಗಿಂತ ಎರಡರಷ್ಟು ಹೆಚ್ಚು ದಂಡವನ್ನು ಕೊಡಲು ಸಿದ್ಧವಾಗಿರಬೇಕು.

೧೭೮. ಈ ಧರ್ಮಶಾಸ್ತ್ರವನ್ನು ಎಲ್ಲರಿಗೂ ಬಾಯಿನಿಂದ ಬೋಧಿಸುತ್ತಾ ತಾನು ಮಾತ್ರ ಗುಟ್ಟಾಗಿ ಅಭಕ್ಷ್ಯಭಕ್ಷಣಮಾಡುವ ಉಪದೇಶಕನನ್ನು ನಾಲ್ಕರಷ್ಟು ಹೆಚ್ಚು ದಂಡಕ್ಕೆ ಗುರಿಪಡಿಸಬೇಕು.

೧೭೯. ಈ ಧರ್ಮ ಸಂದೇಶವನ್ನು ಆಸಮುದ್ರಾಂತವಾಗಿ ಭೇರೀನಿನಾದದಂತೆ ಭೇದಿಸಿ ಡಂಗುರ ಹೊಡೆಯುತ್ತಾ ಇದನ್ನು ಸ್ವಕರ್ಮಾನುಷ್ಠಾನಕ್ಕೆ ಮಾತ್ರ ತರದೆ ಇರುವವನಿಗೆ ರಾಜನು ಐವತ್ತು ಹಣ ಜುಲ್ಮಾನೆಯನ್ನು ವಿಧಿಸಬೇಕು.

**ಪುಂಸ್ತ್ವಹರ್ತಾ ಪಶೂನಾಂ ಚ ದಾಸೀಗರ್ಭವಿನಾಶಕೃತ್ ।**
**ಶೂದ್ರಪ್ರವ್ರಜಿತಾನಾಂ ಚ ದೈವೇ ಪಿತ್ರ್ಯೇ ಚ ಭೋಜಕಃ　　॥ ೧೮೦ ॥**

**ಅವ್ರರ್ಜಬಾಧಮುಕ್ತ್ವಾ ಚ ತಥೈವ ಚ ನಿಮಂತ್ರಣಾತ್ ।**
**ಏತೇ ಕಾರ್ಷಾಪಣಶತಂ ಸರ್ವೇ ದಂಡ್ಯಾ ಮಹೀಕ್ಷಿತಾ　　॥ ೧೮೧ ॥**

**ದುಃಖೋತ್ಪಾದಿ ಗೃಹೇ ದ್ರವ್ಯಂ ಕ್ಷಿಪನ್ ದಂಡ್ಯಸ್ತು ಕೃಷ್ಣಲಂ ।**
**ಪಿತಾಪುತ್ರವಿರೋಧೇ ತು ಸಾಕ್ಷಿಣಾಂ ದ್ವಿಶತೋದಮಃ　　॥ ೧೮೨ ॥**

---

೧೮೦. ಯೋಗಕರ್ಮವನ್ನು ಮಾಡುವ ಅಸ್ಪೃಶ್ಯ ಜನರಿಗೆ ರಾಜನು ಐವತ್ತು ಹಣ ದಂಡವನ್ನಾಗಲೀ, ಮಧ್ಯಮದಂಡವನ್ನಾಗಲೀ ವಿಧಿಸಬೇಕು. ಹೋರಿಗರುವಿನ ಬೀಜವನ್ನೊಡೆಯುವವನಿಗೂ, ದಾಸೀ ಗರ್ಭವನ್ನು ನಾಶಮಾಡುವವನಿಗೂ, ಶೂದ್ರ ತಪಸ್ವಿಗೂ, ದೇವಪಿತೃಕಾರ್ಯಗಳಲ್ಲಿ ಭೋಜನಮಾಡುವವನಿಗೂ, ದಂಡವನ್ನು ವಿಧಿಸಬೇಕು.

೧೮೧. ಬಾಹ್ಮಣಾರ್ಥ (ನಿಮಂತ್ರಣ) ಕ್ಕೆ ಒಪ್ಪಿಕೊಂಡು ಮಧ್ಯಾಹ್ನ ಕಾಲದಲ್ಲಿ ಊಟಕ್ಕೆ ಹೋಗದೆ ತಪ್ಪಿಸಿಕೊಳ್ಳುವ ವಿಶ್ವಾಸ ಘಾತುಕ ಬ್ರಾಹ್ಮಣನಿಗೂ ಮೇಲೆ ಬರೆದ ಪಾಪಿಗಳಂತೆ ಶಿಕ್ಷೆಯನ್ನು ವಿಧಿಸಬೇಕು. (ಇವರೆಲ್ಲರೂ ೧೦೦ ತಾಮ್ರದ ನಾಣ್ಯದ ದಂಡವನ್ನು ಕೊಡಬೇಕಾದ ತಪ್ಪಿಗೆ ಒಳಪಟ್ಟವರು).

೧೮೨. ಪ್ರತಿಕ್ಷಣವೂ ದುಃಖವನ್ನುಂಟುಮಾಡುವ ಹೆಚ್ಚು ಹಣವನ್ನು ಯಾವನು ಮನೆಯಲ್ಲಿಟ್ಟುಕೊಂಡಿರುವನೋ ಅವನು ಒಂದು ಗುಲಗಂಜಿ ತೂಕ ಚಿನ್ನವನ್ನು ಜುಲ್ಮಾನೆ ಕೊಡಬೇಕು. ತಂದೆ ಮಕ್ಕಳು ವ್ಯಾಜ್ಯಮಾಡಿಕೊಂಡು ಕೋರ್ಟಿಗೆ ಹೋದ ಸಂದರ್ಭದಲ್ಲಿ ಸಾಕ್ಷಿ ಹೇಳುವವನಿಗೆ ಇನ್ನೂರು ಹಣ ದಂಡವನ್ನು ವಿಧಿಸಬೇಕು.

ಟಿಪ್ಪಣಿ : ಹಣವನ್ನು ಹೆಚ್ಚಾಗಿ ಮನೆಯಲ್ಲಿಡಬಾರದೆಂದೂ ಈ ಹಣವು ದುಃಖಕಾರಿಯೆಂದೂ ಹೇಳುವುದರಿಂದಲೇ ಹೆಚ್ಚು ಮೊಬಲಗನ್ನು ಸರ್ಕಾರದ ಅಥವಾ ಬ್ಯಾಂಕುಗಳ ಅಥವಾ ಸಹಕಾರ ಸಂಘಗಳ ಖಜಾನೆಯಲ್ಲಿಡುವ ಸಂಪ್ರದಾಯವು ರೂಢಿಯಲ್ಲಿ ಬಂತೆಂದು ಊಹಿಸಲು ಇದು ಸಾಕಾದಷ್ಟು ಆಧಾರವಾಗಿದೆ. ದುಃಖೋತ್ಪಾದಿಯಾದ ಹಣವನ್ನು ಇಡುವುದು ಶಾಸ್ತ್ರವಿರೋಧವೆಂದು ಹೇಳಿರುವುದರಿಂದ ಹಿಂದಿನ ಕಾಲದ ಜನರೂ ಹಣಗಳನ್ನು ನೆಲದಲ್ಲಿ ಹೂಳಿಡುವ ಪದ್ಧತಿಯು ಜಾರಿಗೆ

**ತುಲಾಶಾಸನಮಾನಾನಾಂ ಕೂಟಕೃನ್ನಾಣಕಸ್ಯ ಚ ।**
**ಏಭಿಶ್ಚ ವ್ಯವಹರ್ತಾ ಯಃ ಸ ದಾಪ್ಯೋ ದಂಡಮುತ್ತಮಂ ॥ ೧೮೩ ॥**

**ವಿಷಾಗ್ನಿದಾಂ ಪತಿಗುರುನಿಜಾಪತ್ಯಪ್ರಮಾಪಣೀಂ ।**
**ವಿಕರ್ಣಕರನಾಸೌಷ್ಠೀಂ ಕೃತ್ವಾ ಗೋಭಿಃ ಪ್ರಮಾಪಯೇತ್ ॥ ೧೮೪ ॥**

---

ಬಂತೆಂದೂ, ಇದರಿಂದ ಊಹಿಸಬಹುದು. ಈಚೆಗೆ ಈ ಸಂಗ್ರಾಮ ಕಾಲದಲ್ಲಿ ವಿಧಾಯಕವಾದ ಡಿಫೆನ್ಸ್ ಆಕ್ಟ್ ಎಂಬುವುದೂ ಸಹ ಪ್ರಾಚೀನ ಸಂಪ್ರದಾಯಾನುಸಾರವಾಗಿ ವಿಧಾಯಕವಾಗಿ ರಾಜದಂಡಾರ್ಹವೆಂದು ವಿಧಾಯಕವಾಗಿರುವುದು. ಈ ಶಾಸನವು ಶಾಸ್ತ್ರವಿರೋಧವಲ್ಲವೆಂದು ಸರ್ವರೂ ತಿಳಿದಿರಬೇಕು. ಮನುಷ್ಯನಿಗೆ ಹಣದಿಂದ ಸುಖವು ದೊರೆಯುವುದಿಲ್ಲವೆಂಬ ಸುಭಾಷಿತ ವಚನವೂ ಇದರಿಂದಲೇ ಹುಟ್ಟಿರುವುದಾಗಿದೆ. ಆ ವಚನವೇನೆಂದರೆ:—ಅರ್ಥಾನಾಮಾರ್ಜನೇ ದುಃಖಮಾರ್ಜಿತಾನಾಂ ಚ ರಕ್ಷಣೇ । ನಾಶೇದುಃಖಂ ವ್ಯಯೇದುಃಖಂ ದಿಗರ್ಥಂ ದುಃಖಭಾಜನಂ ॥

ಅರ್ಥ: ಹಣವನ್ನು ಸಂಪಾದಿಸಬೇಕಾದರೆ ಬಹು ಕಷ್ಟವನ್ನೂ ದುಃಖವನ್ನೂ ಅನುಭವಿಸಬೇಕು. ಹೀಗೆ ಸಂಪಾದಿಸಿದ ಹೆಚ್ಚು ಹಣವನ್ನು ಕಾಪಾಡಿ ಇಟ್ಟುಕೊಳ್ಳುವುದೂ ಸಹ ದುಃಖದಾಯಕವಾದುದೇ ಸರಿ. ಹೀಗೆ ಕಷ್ಟಪಟ್ಟು (ಅನ್ಯಾಯದಿಂದಲೋ, ಅಪಡ್ಡಾಳದಿಂದಲೋ, ಅಥವಾ ನ್ಯಾಯವಾಗಿಯೋ), ಸಂಪಾದಿಸಿದ ಹಣವು ನಾಶವಾಗಿ (ನಷ್ಟವಾಗಿ) ಹೋದರೂ ದುಃಖವೇ, ಮನೆಯಲ್ಲಿ ಹೆಚ್ಚು ದುಡ್ಡು ಖರ್ಚಾದರೂ ದುಃಖವೇ ಆಗುವುದರಿಂದ ಈ ದುಡ್ಡಿಗೆ ಧಿಕ್ಕಾರವಿರಲಿ ಎಂದು ಇದರ ಅರ್ಥ. (ಇದು ಲೋಕದ ಎಲ್ಲ ಶ್ರೀಮಂತರ ಲಕ್ಷ್ಯದಲ್ಲಿಯೂ ಇರುವ ಸಂಗತಿಯೇ ಆಗಿರುವುದರಿಂದ ಈ ಹಣವನ್ನು ದಾನದಿಂದಲೂ, ಭೋಗದಿಂದಲೂ, ವೆಚ್ಚಮಾಡಿ ಸುಖವನ್ನನುಭವಿಸುವುದು ಉಕ್ತವೆಂದು ಈ ಮೂಲಕ ನಾವು ಸಂದೇಶವನ್ನು ಲೋಕಕ್ಕೆ ಬೀರುವೆವು. ಹಾಗೆ ಮಾಡದೆ ಹೋದ ಹಣಕ್ಕೆ ಮೂರನೇ (ನಾಶ) ಗತಿಯು ಸಿದ್ಧವಾಗಿಯೇ ಇದೆ.

೧೮೩. ತಕ್ಕಡಿಯಲ್ಲಿ ಪದಾರ್ಥವನ್ನು ತೂಕಮಾಡಿಕೊಡುವ ವರ್ತಕನು ಕಮ್ಮಿ ತೂಕದ ಬಟ್ಟನ್ನು ಉಪಯೋಗಿಸಿ ವ್ಯಾಪಾರದಲ್ಲಿ ಮೋಸಮಾಡಿದ ಸಂದರ್ಭದಲ್ಲಿ ಅಂತಹವನು ಕಠಿಣಶಿಕ್ಷೆ (ಉತ್ತಮ ದಂಡ) ನೆಗೆ ಗುರಿಯಾಗುತ್ತಾನೆ.

೧೮೪. ಯಾವ ಹೆಂಗಸು ತನ್ನ ಗಂಡನಿಗೂ ಗುರುವಿಗೂ ಮಕ್ಕಳಿಗೂ ವಿಷಪ್ರಯೋಗಮಾಡುವಳೋ ಅವಳ ಕೈ, ಕಿವಿ, ಮೂಗು ತುಟಿಗಳನ್ನು ಕತ್ತರಿಸಿ ಹಸುಗಳಿಂದಲಾಗಲೀ ಎತ್ತುಗಳಿಂದಲಾಗಲೀ ತುಳಿಸಿ ಕೊಲ್ಲಿಸಬೇಕು.

**ಕ್ಷೇತ್ರವೇಶ್ಮಗ್ರಾಮವನನಿವೀತಖಲದಾಹಕಾಃ ।**
**ರಾಜಪತ್ನ್ಯಭಿಗಾಮೀ ಚ ದಗ್ಧವ್ಯಾಶ್ಚ ಕಟಾಗ್ನಿನಾ ॥ ೧೮೫ ॥**

**ಊನಂ ವಾಽಪ್ಯಧಿಕಂ ವಾಪಿ ಲಿಖೇದ್ಯೋ ರಾಜಶಾಸನಂ ।**
**ಪಾರದಾರಿಕಚೌರೌ ಚ ಮುಂಚತೋ ದಂಡಮುತ್ತಮಂ ॥ ೧೮೬ ॥**

**ಅಭಕ್ಷ್ಯೇಣ ದ್ವಿಜಂ ದೂಷ್ಯ ದಂಡಮುತ್ತಮಸಾಹಸಂ ।**
**ಕ್ಷತ್ರಿಯೋ ಮಧ್ಯಮಂ ವೈಶ್ಯಃ ಪ್ರಥಮಂ ಶೂದ್ರಮರ್ಧಿಕಂ ॥ ೧೮೭ ॥**

**ಮೃತಾಂಗಲಗ್ನವಿಕ್ರೇತುರ್ಗುರೋಸ್ತಾಡಯಿತುಸ್ತಥಾ ।**
**ರಾಜಯಾನಾಸನಾರೋಢುರ್ದಂಡ ಉತ್ತಮಸಾಹಸಃ ॥ ೧೮೮ ॥**

**ಯೋ ಮನ್ಯೇತಾಜಿತೋಽಸ್ಮೀತಿ ನ್ಯಾಯೇನಾಪಿ ಪರಾಜಿತಃ ।**
**ತಮಾಯಾತಂ ಪುನರ್ಜಿತ್ವಾ ದಂಡಯೇತ್‌ದ್ವಿಗುಣಂ ದಮಂ ॥ ೧೮೯ ॥**

---

೧೮೫. ತೋಟ, ಮನೆ, ಹಳ್ಳಿ, ಮೆದೆ ಮುಂತಾದುವುಗಳಿಗೆ ಬೆಂಕಿ ಹಾಕುವವನನ್ನೂ, ರಾಜಪತ್ನಿಯಲ್ಲಿ ಅಭಿಗಮನ ಮಾಡುವವನನ್ನೂ ಕಟಾಗ್ನಿಯಿಂದ ಸುಡಿಸಿಬಿಡಬೇಕು.

೧೮೬. ರಾಜಶಾಸನವನ್ನು ರಾಜಾಜ್ಞೆಯಾದ ರೀತಿಯಲ್ಲಿ ಬರೆದುಕೊಂಡು ಜಾರಿಮಾಡದೆ ಹೆಚ್ಚುಕಡಮೆಯಾಗಿ ಬರೆದರೆ ಅಂತಹವನನ್ನೂ, ಪರಸ್ತ್ರೀಗಾಮಿಯನ್ನೂ ಸಹ ಉತ್ತಮದಂಡಕ್ಕೆ ಗುರಿಮಾಡಬೇಕು.

೧೮೭. ಅಭಕ್ಷ್ಯಭಕ್ಷಣವನ್ನು ಮಾಡುವ ಬ್ರಾಹ್ಮಣನು ಉತ್ತಮದಂಡಕ್ಕೂ, ಕ್ಷತ್ರಿಯನು ಮಧ್ಯಮದಂಡಕ್ಕೂ ವೈಶ್ಯನು ಪ್ರಥಮದಂಡಕ್ಕೂ, ಶೂದ್ರನು ಅರ್ಧದಂಡಕ್ಕೂ ಗುರಿಯಾಗುವನು.

೧೮೮. ಹೆಣದ ಮೇಲಿದ್ದ ವಸ್ತ್ರಭೂಷಣಗಳನ್ನು ಮಾರುವವನೂ, ಗುರುವನ್ನು ಹೊಡೆಯುವವನೂ, ರಾಜನ ವಾಹನದ ಮೇಲೆ ಹತ್ತುವವನೂ ಸಹ ಉತ್ತಮ ದಂಡಕ್ಕೆ ಗುರಿಯಾಗುತ್ತಾನೆ.

೧೮೯. ಕುಸ್ತಿಯಲ್ಲಿ ಸೋತುಹೋದವನು ತನ್ನ ಸೋಲನ್ನು ಪ್ರಕಾಶಮಾಡದೆ ನಾನೇ ಗೆದ್ದೆನೆಂದು ಹೇಳಿಕೊಳ್ಳುವುದಾದರೆ ಅವನನ್ನು ಪುನಃ ಆಖಾಡಕ್ಕೆ ಎಳೆದುಕೊಂಡು ಬಂದು ಕುಸ್ತಿಮಾಡಿ ಸೋಲಿಸಿ ನ್ಯಾಯವಾದುದಕ್ಕೆ ಎರಡರಷ್ಟು ಜುಲ್ಮಾನೆ ವಿಧಿಸಬೇಕು.

ಆಹ್ವಾನಕಾರೀವಧ್ಯಃ ಸ್ಯಾದನಾಹೂತಮಥಾಹ್ವಯನ್ ।
ದಂಡಿಕಸ್ಯ ಚ ಯೋ ಹಸ್ತಾದಭಿಯುಕ್ತಃ ಪಲಾಯತೆ ॥ ೧೯೦ ॥

ಹೀನಃ ಪುರುಷಕಾರೇಣ ತದ್ದದ್ಯಾದಾಂಡಿಕೋ ಧನಂ ।
ಪ್ರೇಷ್ಯಾಪರಾಧಾತ್ಪ್ರೇಷ್ಯಸ್ಯ ಸ ದಂಡಂ ದಾತುಮರ್ಹತಿ ॥ ೧೯೧ ॥

ದಂಡಾರ್ಥಂ ನಿಯಮಾರ್ಥಂ ಚ ನೀಯಮಾನಸ್ತು ಬಂಧನಂ ।
ಪಥಿ ಕಶ್ಚಿತ್ಪಲಾಯೇತ ದಂಡ ಮಷ್ಟಗುಣಂ ಭವೇತ್ ॥ ೧೯೨ ॥

ಅನಿಶ್ಚಿತ ವಿವಾದೇ ತು ನಖರೋಮಾವ ತಾರಣಂ ।
ಕಾರಯೇದ್ಯಃ ಸಪುರುಷೋ ಮಧ್ಯಮಂ ದಂಡಮರ್ಹತಿ ॥ ೧೯೩ ॥

ಬಂಧನಂ ವಾಥವಾ ವಧ್ಯಂ ಬಲಾನ್ಮೋಚಯತೋ ಭವೇತ್ ।
ವಧ್ಯೇ ವಿಮೋಚಿತೇ ವಧ್ಯೋ ದಂಡ್ಯೇ ದ್ವಿಗುಣದಂಡ ಭಾಕ್ ॥ ೧೯೪ ॥

---

೧೯೦-೧೯೧. ಪುನಃ ಅಖಾಡಕ್ಕೆ ಬಂದು ಕುಸ್ತಿಮಾಡೋ, ಎಂದು ಸೋತವನ ಅಪಪ್ರಚಾರವನ್ನು ತಪ್ಪಿಸಲಿಕ್ಕೆ ಕೂಗಿದಾಗ ಅವನು ಬಾರದೆ ತಪ್ಪಿಸಿಕೊಂಡು ಹೋದರೆ ಅವನನ್ನು ಬಲಾತ್ಕಾರವಾಗಿ ಹಿಡಿತರಿಸಿ ಕೊಲ್ಲಿಸಿಬಿಡಬೇಕು ಮತ್ತು ಶಿಕ್ಷೆಗೆ ತಪ್ಪಿಸಿಕೊಂಡು ಓಡುವವನನ್ನೂ ಸಹ ಕೊಲ್ಲಿಸಬೇಕು. ಇಂತಹ ಪೌರುಷಹೀನನಾದವನಿಂದ ದಂಡದ್ರವ್ಯವನ್ನು ವಸೂಲುಮಾಡಬೇಕು. ಈ ರೀತಿ ಪ್ರೇಷ್ಯನಾದ ಪುರುಷನು ದಂಡಾರ್ಹನಾಗಿರಬೇಕು.

೧೯೨. ದಂಡಾರ್ಹನಾಗಿಯೂ ಶಿಕ್ಷಾನುಭವಾರ್ಥವಾಗಿಯೂ ಆಜ್ಞಾಪಾಲನಾರ್ಥವಾಗಿ ತಪ್ಪಿತಸ್ಥನನ್ನು ಕರೆದುಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಅವನೇನಾದರೂ ತಪ್ಪಿಸಿಕೊಂಡು ಓಡಿದರೆ ಒಂದಕ್ಕೆ ಎಂಟರಷ್ಟು ಪಾಲು ಹೆಚ್ಚು ಶಿಕ್ಷೆಯನ್ನು ವಿಧಿಸಬೇಕು.

೧೯೩. ವ್ಯಾಜ್ಯವು ಕೋರ್ಟಿನಲ್ಲಿರುವಾಗ ಫೈಸಲಾಗುವುದರೊಳಗಾಗಿ ಯಾವನು ಮಧ್ಯಕಾಲದಲ್ಲಿ ಕ್ಷೌರಮಾಡಿಸಿಕೊಂಡು ಉಗುರುಗಳನ್ನು ತೆಗೆಸಿಬಿಡುವನೋ ಅಂತಹವನು ಮಧ್ಯಮ ದಂಡಕ್ಕೆ ಗುರಿಯಾಗುವನು.

೧೯೪. ಜೈಲಿನಲ್ಲಿರುವವನನ್ನಾಗಲೀ, ಫಾಸೀ ಸಜಾಕ್ಕೆ ಗುರಿಯಾದವನನ್ನಾಗಲೀ ಯಾವನು ಬಲಾತ್ಕಾರದಿಂದ ಬಿಡಿಸಿಬಿಡುವನೋ ಅಂತಹವನು ವಧಾರ್ಹನಾಗುವನಲ್ಲದೆ ವಧ್ಯನು ಕೊಡಬೇಕಾದ ದಂಡದ ಎರಡರಷ್ಟು ದಂಡವನ್ನು ಸಹ ಕೊಡಬೇಕು. ವಸೂಲು ಮಾಡಿ ಅವನನ್ನು ನೀರಿಗೆ ತಳ್ಳಿಬಿಡಬೇಕು.

**ದುರ್ವ್ಯಷ್ಟ ವ್ಯವಹಾರಾಣಾಂ ಸಭ್ಯಾನಾಂ ದ್ವಿಗುಣೋದಮಃ ।**
**ಜ್ಞಾತ್ವಾ ತ್ರಿಂಶದ್ಗುಣಂ ದಂಡಂ ಪ್ರಕ್ಷೇಪ್ಯಮುದಕೇ ಭವೇತ್ ॥ ೧೯೫ ॥**

**ಅಲ್ಪೇ ದಂಡೇಧಿಕಂ ಕೃತ್ವಾ ವಿಪುಲೇ ಚಾಲ್ಪಮೇವ ಚ ।**
**ಊನಾಧಿಕಂ ತು ತದ್ದಂಡಂ ಸದ್ಯೋ ದದ್ಯಾತ್ಸ್ವಕಾದ್ಗೃಹಾತ್ ॥ ೧೯೬ ॥**

**ಯಾವದ್ವಧ್ಯಃ ಸ ವಧ್ಯೇತ ತಾವದ್ವಧ್ಯಸ್ಯ ಮೋಕ್ಷಣಾತ್ ।**
**ನ ಜಾತು ಬ್ರಾಹ್ಮಣಂ ಹನ್ಯಾತ್ಸರ್ವಪಾಪೇಷ್ವವಸ್ಥಿತಂ ॥ ೧೯೭ ॥**

**ವಧ್ಯೇವಿವಾಸಯೇದ್ರಾಷ್ಟ್ರಾತ್ಸಮಗ್ರಧನಮಕ್ಷತಂ ।**
**ನ ಜಾತು ಬ್ರಾಹ್ಮಣವಧಾತ್ಪಾಪಮಪ್ಯಧಿಕಂ ಕ್ವಚಿತ್ ॥ ೧೯೮ ॥**

---

೧೯೫. ಸಭ್ಯರಾದವರು ದುರ್ವ್ಯವಹಾರಕ್ಕೆ ಹೇಗುವುದದಾದರೆ ಅಂತಹ ದುರ್ವ್ಯವಹಾರಕ್ಕೆ ಹೋದ ವಿಷಯವನ್ನರಿತೊಡನೆಯೇ ಅವರನ್ನು ವಿಚಾರಣೆಮಾಡಿ ಒಂದಕ್ಕೆ ಮೂವತ್ತು ಪಾಲು ಹೆಚ್ಚಾಗಿ ದಂಡವನ್ನು ವಿಧಿಸಬೇಕು.

೧೯೬. ಸ್ವಲ್ಪ ಹಣವನ್ನು ದಂಡವಾಗಿ ವಿಧಿಸುವ ಸಂದರ್ಭದಲ್ಲಿ ಹೆಚ್ಚು ಜುಲ್ಮಾನೆಯನ್ನೂ, ಹೆಚ್ಚು ಜುಲ್ಮಾನೆಗೆ ಅರ್ಹವಾದ ಸಂದರ್ಭದಲ್ಲಿ ಸ್ವಲ್ಪ ಹಣವನ್ನೂ ದಂಡವಾಗಿ ವಿಧಿಸಿದ ನ್ಯಾಯಾಧೀಶನು ಮೇಲುಕೋರ್ಟಿನ ತೀರ್ಮಾನದಂತೆ ಹೆಚ್ಚು ಕಡಮೆಯಾದ ದಂಡದ್ರವ್ಯವನ್ನು ತನ್ನ ಮನೆಯಿಂದ ತಂದುಕೊಡಬೇಕಾಗುವುದು.

೧೯೭. ಯಾವಾಗ ಅಪರಾಧಿಯು ವಧ್ಯನೆಂದು ತೀರ್ಮಾನವಾಗುವುದೋ ಅಂತಹವನನ್ನು ಹೊರಕ್ಕೆ ಬಿಡದೆ ವಧ್ಯಸ್ಥಾನಕ್ಕೆ ಕಳುಹಿಸಿಯೇ ಬಿಡಬೇಕು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನನ್ನು ಮಾತ್ರ ಎಂತಹ ತಪ್ಪುಮಾಡಿದ್ದ ಸಂದರ್ಭದಲ್ಲಿಯೂ ಸಂಹಾರಮಾಡಬಾರದು.

೧೯೮. ವಧಾರ್ಹವಾದ ತಪ್ಪನ್ನು ಮಾಡಿದ ಬ್ರಾಹ್ಮಣನನ್ನು ದೇಶದಿಂದ ಓಡಿಸಿಬಿಡಬೇಕಲ್ಲದೆ, ಅವನ ಸರ್ವಸ್ವವನ್ನೂ ಕಿತ್ತುಕೊಂಡು ಸರ್ಕಾರದ ಬೊಕ್ಕಸಕ್ಕೆ ಸೇರಿಸಿಕೊಂಡುಬಿಡಬೇಕು. ಯಾವಾಗಲೂ ಬ್ರಾಹ್ಮಣನ ವಧೆಗಿಂತ ಹೆಚ್ಚಿನ ಪಾಪ ಕಾರ್ಯವೇ ಇಲ್ಲ.

ಯಸ್ಮಾತ್ತಸ್ಮಾತ್ಪ್ರಯತ್ನೇನ ಬ್ರಹ್ಮಹತ್ಯಾಂ ವಿವರ್ಜಯೇತ್
ಅದಂಡ್ಯಾ಼ದಂಡಯನ್ರಾಜಾ ದಂಡ್ಯಾಂಶ್ಚೈವಾಪ್ಯ ದಂಡಯನ್ ।
ಅಯಶೋಮಹದಾಪ್ನೋತಿ ನರಕಂ ಚೈವ ಗಚ್ಛತಿ ॥ ೧೯೯ ॥

ಜ್ಞಾತ್ವಾಽಪರಾಧಂ ಪುರುಷಂ ಚ ರಾಜಾ
ಕಾಲಂ ತಥಾ ಚಾನುಮತೇ ದ್ವಿಜಾನಾಂ ।
ದಂಡ್ಯೇಷು ದಂಡಂ ಪರಿಕಲ್ಪಯೇತ
ಪಾಪಸ್ಯ ಯೇ ತಚ್ಛಮನಂ ನ ಕುರ್ಯುಃ ॥ ೨೦೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪರಶುರಾಮಂ ಪ್ರತಿ ಪುಷ್ಕರೋಪಾಖ್ಯಾನೇಷು
ದಂಡಪ್ರಣಯನಂನಾಮ ದ್ವಿಸಪ್ತತಿತಮೋಽಧ್ಯಾಯಃ

---

೧೯೯. ಈ ರೀತಿ ಧರ್ಮಶಾಸ್ತ್ರ ನಿಯಮವಿರುವುದರಿಂದ ಎಂತಹ ಸಂದರ್ಭದಲ್ಲಿಯೂ ಬ್ರಹ್ಮಹತ್ಯಾರೂಪವಾದ ತಪ್ಪನ್ನು ಯಾರೂ ಮಾಡಕೂಡದು. ದಂಡಾರ್ಹರಲ್ಲದ ಜನರನ್ನು ದಂಡಿಸುವುದರಿಂದಲೂ, ದಂಡಾರ್ಹನನ್ನು ಶಿಕ್ಷೆಮಾಡದೆ ಬಿಟ್ಟುಬಿಡೋಣದರಿಂದಲೂ, ರಾಜನಾದವನು ಅಪಕೀರ್ತಿಗೆ ಒಳಗಾಗಬೇಕಾಗುವುದಲ್ಲದೆ ನರಕವಾಸಕ್ಕೂ ಸಿದ್ಧನಾಗಬೇಕಾಗುವುದು.

೨೦೦. ಯಾವ ಅಪರಾಧಿಗಳಾದರೆ ತಮ್ಮ ತಪ್ಪನ್ನು ತಾವೇ ತಿಳಿದುಕೊಂಡು ಆ ತಪ್ಪನ್ನು ಮಾಡಿದ ಬಳಿಕ ಧರ್ಮಶಾಸ್ತ್ರವೇತ್ತರಾದ ಬ್ರಾಹ್ಮಣರನ್ನು ಕರೆದು ತಮ್ಮ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವನ್ನು ಅವರ ಅನುಮತಿ ಪ್ರಕಾರ ಮಾಡಿಕೊಳ್ಳದೆ ಹೋಗುವುದಾದರೆ ಅಂತಹ ಸಂದರ್ಭದಲ್ಲಿ ಮಾತ್ರ ರಾಜನಾದವನು ಆ ಅಪರಾಧಿಗಳನ್ನು ಕರೆಯಿಸಿ ಶಿಕ್ಷೆಗಳನ್ನು ವಿಧಿಸಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಪುಷ್ಕರೋಪಾಖ್ಯಾನಗಳಲ್ಲಿ ದಂಡಪ್ರಣಯನವೆಂಬ
ಹೆಸರಿನ ಎಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.

